ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ ಯು ಸಿ ಎರಡನೇ ವರ್ಷ

# ರಾಜ್ಯಶಾಸ್ತ್ರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ ಯು ಸಿ ಎರಡನೇ ವರ್ಷ

# ರಾಜ್ಯಶಾಸ್ತ್ರ

ಸಂಪಾದಕರು
**ಡಾ. ಜೆ.ಎಸ್. ಸದಾನಂದ**



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

RAJAYASHAASTRA
**Prescribed Text Book for Sceond Year P.U.C**

*Edited by*
**Dr. J.S. Sadananda**
Chairman and Professor
Department of Political Science
Kuvempu University,
SHANKARAGHATTA- 577 451, Shimoga Dist.

*Published by*
**Prof. Mallepuram G.Venketesha**
Director, Prasaranga
Kannada University, Hampi
Vidyaranya 583 276

Pages: XVI + 204 **Price: Rs. 100/-**
First Impression : 2006
www.kannadauniversity.org
© ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೬

ಬೆಲೆ : ರೂ. ೧೦೦/-

*ಮುಖಪುಟ* : ಕೆ.ಕೆ. ಮಕಾಳಿ

*ಪ್ರಕಾಶಕರು*
ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

*ಅಕ್ಷರ ಸಂಯೋಜನೆ*
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

*ಮುದ್ರಣ*
ಲಕ್ಷ್ಮಿ ಮುದ್ರಣಾಲಯ, ಬೆಂಗಳೂರು

# ನಿರ್ದೇಶಕರ ಮಾತು

ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಶಿಕ್ಷಣದ ಎಲ್ಲ ಹಂತಗಳಿಗೆ ಮತ್ತು ಎಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಆಕರ ಗ್ರಂಥಗಳು, ಪರಾಮರ್ಶನ ಕೃತಿಗಳು, ಅಧ್ಯಾಪಕರ ಕೈಪಿಡಿಗಳು ಮುಂತಾದವುಗಳನ್ನು ಸಿದ್ಧಪಡಿಸುವ ಮತ್ತು ಪ್ರಕಟಿಸುವ ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸುತ್ತಿದೆ. ಈ ದಿಶೆಯಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆ ೨೦೦೪-೦೫ರಲ್ಲಿ ಜಾರಿಗೆ ತಂದಿರುವ ಹೊಸ ಪಠ್ಯಕ್ರಮವನ್ನು ಆಧರಿಸಿ ಪಠ್ಯಪುಸ್ತಕಗಳನ್ನು ಪ್ರಕಟಿಸುತ್ತಿದೆ. ಈ ಪಠ್ಯಕ್ರಮಕ್ಕೆ ಅನುಗುಣವಾಗಿ ಅಧ್ಯಾಪಕರ ಕೈಪಿಡಿಗಳನ್ನು ಸಿದ್ಧಪಡಿಸುವ ಕಾರ್ಯವನ್ನು ಕೇಂದ್ರ ಆರಂಭಿಸಿದೆ.

ಈ ಕಾರ್ಯ ಅನೇಕರ ಸಹಕಾರ-ಸಹಯೋಗದಿಂದ ನಡೆಯಬೇಕಾಗಿದೆ. ನಾವು ಸಿದ್ಧಪಡಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಪಠ್ಯಗಳೆಂದು ಮನ್ನಣೆ ನೀಡಿದೆ. ಇದು ತುಂಬಾ ಮಹತ್ವದ ಸಂಗತಿಯಾಗಿದೆ. ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಡಿ.ಎನ್. ನಾಯಕ್ ಇವರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ.

ಪಠ್ಯಪುಸ್ತಕಗಳ ಸಂಪಾದಕರಾಗಿ ನಾಡಿನ ಅನೇಕ ಹಿರಿಯ ವಿದ್ವಾಂಸರು ಕೆಲಸ ಮಾಡುತ್ತಿದ್ದಾರೆ. ಅವರ ಸಹಯೋಗದಲ್ಲಿ ಅನೇಕ ಲೇಖಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರೆಲ್ಲರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಕೇಂದ್ರದ ಹಿಂದಿನ ಶಕ್ತಿಯೆಂದರೆ ಕುಲಪತಿಗಳಾದ ಡಾ. ಬಿ.ಎ. ವಿವೇಕ ರೈ ಅವರ ಮಾರ್ಗದರ್ಶನದಲ್ಲಿ ಕೇಂದ್ರವು ಕೆಲಸ ಮಾಡುತ್ತಿದೆ. ಈ ಸಂದರ್ಭದಲ್ಲಿ ಮಾನ್ಯ ಕುಲಪತಿಗಳಿಗೆ, ಕುಲಸಚಿವರಿಗೆ, ಕೇಂದ್ರದ ಸಲಹಾ ಮಂಡಳಿ ಸದಸ್ಯರಿಗೆ, ಪ್ರಸಾರಾಂಗದ ನಿರ್ದೇಶಕರು ಮತ್ತು ಸಿಬ್ಬಂದಿಗೆ ಕೇಂದ್ರದ ಪರವಾಗಿ ನಾನು ಕೃತಜ್ಞತೆ ಸಲ್ಲಿಸುತ್ತೇನೆ.

ಪ್ರಸ್ತುತ ಪದವಿಪೂರ್ವ ಎರಡನೇ ವರ್ಷದ ರಾಜ್ಯಶಾಸ್ತ್ರ ಪಠ್ಯವನ್ನು ತುಂಬಾ ಅಚ್ಚುಕಟ್ಟಾಗಿ ಸಿದ್ಧಪಡಿಸಿಕೊಟ್ಟಿರುವ ಅದರ ಸಂಪಾದಕರಾದ ಡಾ. ಜೆ.ಎಸ್. ಸದಾನಂದ ಅವರಿಗೆ ಹಾಗೂ ವಿವಿಧ ಅಧ್ಯಾಯಗಳನ್ನು ಬರೆದು ಕೊಟ್ಟಿರುವ ನಾಡಿನ ಖ್ಯಾತ ವಿದ್ವಾಂಸರಿಗೆ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಡಾ. ಟಿ.ಆರ್. ಚಂದ್ರಶೇಖರ

# ಸಂಪಾದಕರ ಮಾತು

ಕನ್ನಡ ವಿಶ್ವವಿದ್ಯಾಲಯವು ಹೊರತರುತ್ತಿರುವ ದ್ವಿತೀಯ ಪಿ.ಯು.ಸಿ.ಯ ಈ ಪಠ್ಯಪುಸ್ತಕವನ್ನು ಬದಲಾದ ಪಠ್ಯಕ್ರಮದ ಆಶಯವನ್ನು ಗಮನದಲ್ಲಿರಿಸಿಕೊಂಡು ರಚಿಸಲಾಗಿದೆ. ಪ್ರಥಮ ವರ್ಷದಲ್ಲಿ ರಾಜ್ಯಶಾಸ್ತ್ರದ ಮೂಲ ಪರಿಕಲ್ಪನೆಗಳನ್ನು ಪರಿಚಯ ಮಾಡಿಕೊಂಡ ವಿದ್ಯಾರ್ಥಿಗಳು ದ್ವಿತೀಯ ವರ್ಷದಲ್ಲಿ ರಾಜ್ಯಶಾಸ್ತ್ರ ವಿಸ್ತಾರಗೊಳ್ಳುತ್ತಿರುವ ನೆಲೆಗಳನ್ನು ಅರ್ಥಮಾಡಿಕೊಳ್ಳಬೇಕೆಂಬ ಆಶಯ ಈ ಪಠ್ಯಕ್ರಮಕ್ಕಿದೆ. ರಾಜ್ಯಶಾಸ್ತ್ರ ಸಿದ್ಧಾಂತದ ಹುಟ್ಟಿನ ಮೂಲ ಚಿಂತನೆಗಳಿಗೆ ಕಾರಣರಾದ ಚಿಂತಕರನ್ನು ಪರಿಚಯಿಸುವುದರ ಜೊತೆಗೆ ಅಂತಹ ಚಂತನೆಗಳಿಗೂ ಆಧುನಿಕ ಸಿದ್ಧಾಂತಕ್ಕೂ ನಡುವಿನ ಸಂಬಂಧವನ್ನು ವಿದ್ಯಾರ್ಥಿಗಳಿಗೆ ತಿಳಿಸುವುದು ಈ ಪಠ್ಯಕ್ರಮದ ಮೂಲ ಉದ್ದೇಶವಾಗಿದೆ. ಈ ಅಂಶಗಳನ್ನು ಆಧರಿಸಿ ಪಠ್ಯವನ್ನು ರಚಿಸಲಾಗಿದೆ. ರಾಜಕೀಯ ಚಿಂತಕರುಗಳಿಗೆ ಸಂಬಂಧಿಸಿದಂತೆ ರಾಜ್ಯಶಾಸ್ತ್ರಕ್ಕೆ ಅವರ ಪ್ರಮುಖ ಕೊಡುಗೆಯ ಸಂಕ್ಷಿಪ್ತ ಪರಿಚಯದೊಂದಿಗೆ, ಅವರ ಕಾಲ, ದೇಶ, ಮುಖ್ಯವಾದ ಕೃತಿಗಳನ್ನು ಉಲ್ಲೇಖಿಸಲಾಗಿದೆ. ರಾಜಕೀಯ ಸಿದ್ಧಾಂತಗಳಾದ ಉದಾರವಾದ, ಮಾರ್ಕ್ಸ್‌ವಾದ, ಗಾಂಧೀವಾದ ಮೊದಲಾದವುಗಳನ್ನು ಅವುಗಳ ಒಟ್ಟು ಆಶಯಗಳನ್ನು ಆದಷ್ಟು ಸರಳವಾಗಿ ವಿದ್ಯಾರ್ಥಿಗಳ ಗ್ರಹಿಕೆಗೆ ಎಟುಕುವಂತೆ ಬರೆಯಲಾಗಿದೆ. ಹಾಗೆಯೆ ಭಾರತದ ರಾಜಕೀಯ ಪ್ರಕ್ರಿಯೆಯನ್ನು ಅದರ ಸಮಕಾಲೀನ ಲಕ್ಷಣಗಳೊಂದಿಗೆ ವಿವರಣೆ ನೀಡಲಾಗಿದೆ.

ವಿದ್ಯಾರ್ಥಿಗಳಿಗೆ ರಾಜ್ಯಶಾಸ್ತ್ರದ ಬೆಳವಣಿಗೆಯ ಬಗ್ಗೆ ಮಾಹಿತಿ ನೀಡುವುದು, ಬೆಳವಣಿಗೆಯ ವಿವಿಧ ಆಯಾಮಗಳನ್ನು ಪರಿಚಯಿಸುವುದು, ನಾವು ಬದುಕುತ್ತಿರುವ ಪರಿಸರದಲ್ಲಿ ರಾಜ್ಯಶಾಸ್ತ್ರ ಅಧ್ಯಯನದ ಸಾಂಗತ್ಯವನ್ನು ಅರಿಯುವಂತೆ ಮಾಡುವುದು, ಎಲ್ಲಕ್ಕಿಂತ ಹೆಚ್ಚಾಗಿ ಅಧ್ಯಯನದ ವಿಷಯದಲ್ಲಿ ಆಸಕ್ತಿ ಕುದುರುವಂತೆ ಮಾಡುವುದು ನಮ್ಮ ಗುರಿಯಾಗಿದೆ. ಈ ಗುರಿ ಸಾಧ್ಯವಾಗುವುದೆಂಬುದು ನಮ್ಮ ಅಭಿಪ್ಸೆ. ಈ ಪಠ್ಯವನ್ನು ರಚಿಸಲು ಸಕ್ರಿಯವಾಗಿ ತೊಡಗಿಕೊಂಡು ತಮಗೆ ವಹಿಸಿದ ಕೆಲಸವನ್ನು ನಿಷ್ಠೆಯಿಂದ ನಿರ್ವಹಿಸಿದ ನನ್ನ ಸಹೋದ್ಯೋಗಿಗಳಾದ ಶ್ರೀಯುತ ಷಣ್ಮುಖ, ಡಾ. ಕುಮಾರ್ ಹಾಗೂ ಕುಮಾರಿ ಕವಿತಾರವರಿಗೆ ನಾನು ಆಭಾರಿಯಾಗಿದ್ದೇನೆ. ನನ್ನ ಮೇಲೆ ಭರವಸೆ ಇಟ್ಟು ನನಗೆ ಈ ಪುಸ್ತಕವನ್ನು ಸಂಪಾದಿಸುವ ಜವಾಬ್ದಾರಿಯನ್ನು ವಹಿಸಿದ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಮತ್ತು ಪ್ರೊ. ಟಿ.ಆರ್. ಚಂದ್ರಶೇಖರ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ಕನ್ನಡ ವಿಶ್ವವಿದ್ಯಾಲಯವು ಕನ್ನಡದಲ್ಲಿ ಸಾಮಾಜಿಕ ಶಾಸ್ತ್ರಗಳ ಅಧ್ಯಯನದ ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸುತ್ತಿರುವುದು ಸ್ತುತ್ಯರ್ಹವಾಗಿದೆ. ಇದು ಹೀಗೆಯೆ ಮುಂದುವರೆಯಲಿ ಎಂದು ಆಶಿಸುತ್ತೇನೆ.

ಪ್ರೊ. ಜೆ.ಎಸ್. ಸದಾನಂದ

# ವಿಸ್ತೃತ ಪಠ್ಯಕ್ರಮ

## ಬೋಧನಾವಧಿ - ೧೦೦ ಗಂಟೆಗಳು

೧. ಪ್ರಮುಖ ರಾಜಕೀಯ ಚಿಂತಕರು : ಭಾಗ - ೧ — ೧೫ ಗಂಟೆ

೧.೧ ಪ್ಲೇಟೋ

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ತತ್ವಜ್ಞಾನಿ ಅರಸರ ಆಳ್ವಿಕೆ

ಇ. ಆದರ್ಶ ರಾಜ್ಯ

೧.೨ ಅರಿಸ್ಟಾಟಲ್

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ಅರಿಸ್ಟಾಟಲ್‌ನ ಸರ್ಕಾರಗಳ ವರ್ಗೀಕರಣ

೧.೩ ಕೌಟಿಲ್ಯ

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ಸಪ್ತಾಂಗ ಸಿದ್ಧಾಂತ

ಇ. ರಾಜತ್ವ ಸ್ಥಾನ ಹಾಗೂ ಕಾರ್ಯಗಳು

೧.೪ ಸಾರಾಂಶ

೧.೫ ಪಾರಿಭಾಷಿಕ ಪದಕೋಶ

೧.೬ ಪ್ರಶ್ನೆಗಳು

೨. ಪ್ರಮುಖ ರಾಜಕೀಯ ಚಿಂತಕರು : ಭಾಗ - ೨ — ೧೬ ಗಂಟೆ

೨.೧ ಜೆ.ಎಸ್. ಮಿಲ್

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ಸ್ವಾತಂತ್ರ್ಯ ಮತ್ತು ಅಲ್ಪ ಸಂಖ್ಯಾತರ ಹಕ್ಕುಗಳ ಪರಿಭಾವನೆ

೨.೨ ಕಾರ್ಲ್‌ಮಾರ್ಕ್ಸ್

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ವೈಜ್ಞಾನಿಕ ಸಮಾಜವಾದ (ಸಮತಾವಾದ)

೨.೩ ಮಹಾತ್ಮಗಾಂಧಿ

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ಸತ್ಯಾಗ್ರಹ ಮತ್ತು ಸರ್ವೋದಯ

೨.೪ ಡಾ. ಬಿ.ಆರ್. ಅಂಬೇಡ್ಕರ್

ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಆ. ಭಾರತ ಸಂವಿಧಾನ ರಚನೆಯಲ್ಲಿ ಅಂಬೇಡ್ಕರ್ ಅವರ ಕೊಡುಗೆ

ಇ. ದುರ್ಬಲ ವರ್ಗಗಳ ಸಶಕ್ತೀಕರಣ

೨.೫ ಸಾರಾಂಶ

೨.೬ ಪಾರಿಭಾಷಿಕ ಪದಕೋಶ

೨.೭ ಪ್ರಶ್ನೆಗಳು

೩. ಸಮಕಾಲೀನ ರಾಜಕೀಯ ವಿದ್ಯಮಾನಗಳು — ೭ ಗಂಟೆ

೩.೧ ಉದಾರತಾವಾದಿ ಪ್ರಜಾಪ್ರಭುತ್ವದ ಪ್ರಸರಣ

ಅ. ನಿರಂಕುಶ ಪ್ರಭುತ್ವ ಮತ್ತು ಸರ್ವಾಧಿಕಾರಿ ಮಾದರಿಯ ಇತರೆ ಸರ್ಕಾರಗಳ ಪತನ

ಆ. ಎರಡನೆಯ ಮಹಾಯುದ್ಧದ ತರುವಾಯ ಪ್ರಜಾಪ್ರಭುತ್ವವಾದಿ ರಾಜ್ಯಗಳ ಸಂಖ್ಯೆಯಲ್ಲಿ ಏರಿಕೆ

ಇ. ಪಾಲುದಾರ ಪ್ರಜಾಪ್ರಭುತ್ವದೆಡೆಗೆ ನಡೆ

ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ / ಪಂಚಾಯತ್‌ರಾಜ್ ವ್ಯವಸ್ಥೆ

ಈ. ಮಾನವ ಹಕ್ಕುಗಳ ಮಹತ್ವ - ಮಾನವ ಹಕ್ಕುಗಳ ಜಾಗತಿಕ ಘೋಷಣೆ

೩.೨ ಬದಲಾಗುತ್ತಿರುವ ರಾಜ್ಯದ ಪಾತ್ರ

ಅ. ಪೊಲೀಸ್ ರಾಜ್ಯ

ಆ. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಅರ್ಥ, ಮಹತ್ವ ಮತ್ತು ರಾಜಕೀಯ ಪರಿಣಾಮಗಳು

೩.೩ ಸಾರಾಂಶ

೩.೪ ಪಾರಿಭಾಷಿಕ ಪದಕೋಶ

೩.೫ ಪ್ರಶ್ನೆಗಳು

೪. ಭಾರತದಲ್ಲಿ ಚುನಾವಣಾ ಪದ್ಧತಿ — ೭ ಗಂಟೆ

೪.೧ ಚುನಾವಣಾ ಪದ್ಧತಿ

ಅ. ಪ್ರತ್ಯಕ್ಷ ಮತ್ತು ಪರೋಕ್ಷ ಚುನಾವಣೆ

ಆ. ಸಾರ್ವತ್ರಿಕ ವಯಸ್ಕರ ಮತದಾನ

ಇ. ಚುನಾವಣಾ ಆಯೋಗ ಮತ್ತು ಚುನಾವಣಾ ಪ್ರಕ್ರಿಯೆ

೪.೨ ಚುನಾವಣಾ ಸುಧಾರಣೆಗಳು

ಅ. ವಿದ್ಯುನ್ಮಾನ ಮತಯಂತ್ರ ಮತ್ತು ಗುರುತಿನ ಪತ್ರ

ಆ. ಚುನಾವಣಾ ಅಭ್ಯರ್ಥಿಗಳ ಪೂರ್ವೋತ್ತರಗಳ ಕಡ್ಡಾಯ
ಘೋಷಣೆ (ಶಿಕ್ಷಣ, ಆಸ್ತಿ ಮತ್ತು ಅಪರಾಧ ಕುರಿತಂತೆ)
ಇ. ರಾಜ್ಯದ ಹಣಕಾಸಿನ ಮೂಲಕ ಚುನಾವಣಾ ವೆಚ್ಚದ ಸುಧಾರಣೆಗಳು
೪.೩ ಸಾರಾಂಶ
೪.೪ ಪಾರಿಭಾಷಿಕ ಪದಕೋಶ
೪.೫ ಪ್ರಶ್ನೆಗಳು
೫. ಭಾರತದಲ್ಲಿ ರಾಜಕೀಯ ಪಕ್ಷ ಪದ್ಧತಿ ೧೦ ಗಂಟೆ
೫.೧ ರಾಜಕೀಯ ಪಕ್ಷ-ಪರಿಕಲ್ಪನೆಯ ಪರಿಚಯ
೫.೨ ಪಕ್ಷ ಪದ್ಧತಿಯ ಸ್ವರೂಪ
೫.೩ ಬಹುಪಕ್ಷ ಪದ್ಧತಿಯ ಬೆಳವಣಿಗೆ
೫.೪ ಅಖಿಲ ಭಾರತೀಯ ಪಕ್ಷಗಳು ಮತ್ತು ಪ್ರಾದೇಶಿಕ ಪಕ್ಷಗಳು
ಅ. ರಾಷ್ಟ್ರೀಯ ಪಕ್ಷಗಳು
ಆ. ಪ್ರಾದೇಶಿಕ ಪಕ್ಷಗಳು
೫.೫ ಭಾರತದಲ್ಲಿ ರಾಜಕೀಯ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ
೫.೬ ಭಾರತದಲ್ಲಿ ಪಕ್ಷಾಂತರ ನಿಷೇಧ ಕಾಯಿದೆ
೫.೭ ವಿರೋಧ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ
೫.೮ ಸಾರಾಂಶ
೫.೯ ಪಾರಿಭಾಷಿಕ ಪದಕೋಶ
೫.೧೦ ಪ್ರಶ್ನೆಗಳು
೬. ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಒತ್ತಡ ಗುಂಪುಗಳು ೯ ಗಂಟೆ
೬.೧ ಸಾರ್ವಜನಿಕ ಅಭಿಪ್ರಾಯ : ಅರ್ಥ, ಮಹತ್ವ ಮತ್ತು ಪಾತ್ರ
೬.೨ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ನಿಯೋಗಿಗಳು
೬.೩ ಒತ್ತಡ ಗುಂಪುಗಳು : ಅರ್ಥ, ಸ್ವರೂಪ ಮತ್ತು ಪಾತ್ರ
೬.೪ ಒತ್ತಡ ಗುಂಪುಗಳ ವಿಧಗಳು
೬.೫ ಸಾರಾಂಶ
೬.೬ ಪಾರಿಭಾಷಿಕ ಪದಕೋಶ
೬.೭ ಪ್ರಶ್ನೆಗಳು
೭. ಭಾರತದಲ್ಲಿ ಆಡಳಿತಯಂತ್ರ ೧೦ ಗಂಟೆ
೭.೧ ಆಡಳಿತ : ಅರ್ಥ - ಪರಿಭಾಷೆ
ಅ. ಆಡಳಿತ
ಆ. ಅರ್ಥ ಮತ್ತು ವ್ಯಾಪ್ತಿ

೭.೨ ನಾಗರಿಕ ಸೇವೆ : ಅರ್ಥ ಮತ್ತು ಲಕ್ಷಣಗಳು
೭.೩ ಕೇಂದ್ರ, ರಾಜ್ಯ ಮತ್ತು ಜಿಲ್ಲಾ ಆಡಳಿತ
ಅ. ಕೇಂದ್ರೀಯ ಆಡಳಿತ ವ್ಯವಸ್ಥೆ
ಆ. ರಾಜ್ಯ ಆಡಳಿತ ವ್ಯವಸ್ಥೆ
ಇ. ಜಿಲ್ಲಾಡಳಿತ ವ್ಯವಸ್ಥೆ
೭.೪ ಅಖಿಲ ಭಾರತೀಯ ಸೇವೆಗಳು
೭.೫ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗ
ರಚನೆ ಮತ್ತು ಕಾರ್ಯಗಳು
೭.೬ ಪಾರಿಭಾಷಿಕ ಪದಕೋಶ
೭.೭ ಪ್ರಶ್ನೆಗಳು
೮. ಭಾರತದ ಪ್ರಜಾಪ್ರಭುತ್ವದ ಮುಂದಿರುವ ಸವಾಲುಗಳು ೧೬ ಗಂಟೆ
೮.೧ ಅಸಮಾನತೆ
ಅ. ಜಾತಿ ಮತ್ತು ಲಿಂಗ
ಆ. ಮೀಸಲಾತಿ ನ್ಯಾಯಯುತವಾದುದೆ?
೮.೨ ಅನಕ್ಷರತೆ
ಅ. ಪ್ರಜಾಪ್ರಭುತ್ವಕ್ಕೆ ತೊಡಕು
ಆ. ಕಡ್ಡಾಯ ಶಿಕ್ಷಣ
೮.೩ ಕೋಮುವಾದ
ಅ. ಪ್ರಜಾಪ್ರಭುತ್ವಕ್ಕೆ ತೊಡಕು
ಆ. ಜಾತ್ಯತೀತತೆ ಮತ್ತು ರಾಷ್ಟ್ರೀಯ ಏಕತೆಗಳಿಗೆ ಪ್ರೋತ್ಸಾಹ
೮.೪ ಭಯೋತ್ಪಾದನೆ
ಅ. ಪ್ರಜಾಪ್ರಭುತ್ವಕ್ಕೆ ಸವಾಲು
ಆ. ನಿಯಂತ್ರಣಾ ಕ್ರಮಗಳು
೮.೫ ಭ್ರಷ್ಟಾಚಾರ
ಅ. ಪ್ರಜಾಪ್ರಭುತ್ವಕ್ಕೆ ತೊಡಕು
ಆ. ನಿಯಂತ್ರಣ ಕಾಯಿದೆಗಳು : ಲೋಕಪಾಲ್ ಮತ್ತು ಲೋಕಾಯುಕ್ತ
ವ್ಯವಸ್ಥೆ
೮.೬ ಸಾರಾಂಶ
೮.೭ ಪಾರಿಭಾಷಿಕ ಪದಕೋಶ
೮.೮ ಪ್ರಶ್ನೆಗಳು
೯. ಭಾರತ ಮತ್ತು ವಿಶ್ವ ೧೦ ಗಂಟೆ

೬.೧ ಅಂತಾರಾಷ್ಟ್ರೀಯ ರಾಜಕಾರಣ
ಅ. ಅರ್ಥ ಮತ್ತು ವ್ಯಾಖ್ಯೆಗಳು
ಆ. ಮಹತ್ವ
೬.೨ ಇಂದಿನ ವಿಶ್ವಸಂಸ್ಥೆ
ಅ. ವಿಶ್ವ ಸಂಸ್ಥೆಯ ಗುಣಗಳು
ಆ. ವಿಶ್ವ ಸಂಸ್ಥೆಯ ದೌರ್ಬಲ್ಯಗಳು
೬.೩ ಭಾರತದ ವಿದೇಶಾಂಗ ನೀತಿ
ಅ. ಮೂಲಭೂತ ತತ್ವಗಳು
೬.೪ ಭಾರತ ಮತ್ತು ಪ್ರಾದೇಶಿಕ ಸಹಕಾರ
ಅ. ಸಾರ್ಕ್ (ಎಸ್.ಎ.ಎ.ಆರ್.ಸಿ.) : ಉದ್ದೇಶ-ಗುರಿಗಳು
೬.೫ ಸಾರಾಂಶ
೬.೬ ಪಾರಿಭಾಷಿಕ ಪದಕೋಶ
೬.೭ ಪ್ರಶ್ನೆಗಳು

# ಪರಿವಿಡಿ

೧. ಪ್ರಮುಖ ರಾಜಕೀಯ ಚಿಂತಕರು : ಭಾಗ - ೧ / ೧
೧.೧ ಪ್ಲೇಟೋ / ೦೧
೧.೨ ಅರಿಸ್ಟಾಟಲ್ / ೦೯
೧.೩ ಕೌಟಿಲ್ಯ / ೧೩
೧.೪ ಸಾರಾಂಶ / ೨೩
೧.೫ ಪಾರಿಭಾಷಿಕ ಪದಕೋಶ / ೨೫
೧.೬ ಪ್ರಶ್ನೆಗಳು / ೨೫
ಎ. ಷಣ್ಮುಖ

೨. ಪ್ರಮುಖ ರಾಜಕೀಯ ಚಿಂತಕರು : ಭಾಗ - ೨ / ೨೮
೨.೧ ಜೆ.ಎಸ್. ಮಿಲ್ / ೨೮
೨.೨ ಕಾರ್ಲ್‌ಮಾರ್ಕ್ಸ್ / ೩೨
೨.೩ ಮಹಾತ್ಮಗಾಂಧಿ / ೩೮
೨.೪ ಡಾ. ಬಿ.ಆರ್. ಅಂಬೇಡ್ಕರ್ / ೪೫
೨.೫ ಸಾರಾಂಶ / ೫೧
೨.೬ ಪಾರಿಭಾಷಿಕ ಪದಕೋಶ / ೫೩
೨.೭ ಪ್ರಶ್ನೆಗಳು / ೫೩
ಕೆ.ಎಂ. ಕುಮಾರ್

೩. ಸಮಕಾಲೀನ ರಾಜಕೀಯ ವಿದ್ಯಮಾನಗಳು / ೫೬
೩.೧ ಉದಾರತಾವಾದಿ ಪ್ರಜಾಪ್ರಭುತ್ವದ ಪ್ರಸರಣ / ೫೭
೩.೨ ಬದಲಾಗುತ್ತಿರುವ ರಾಜ್ಯದ ಪಾತ್ರ / ೬೩
೩.೩ ಸಾರಾಂಶ / ೬೮
೩.೪ ಪಾರಿಭಾಷಿಕ ಪದಕೋಶ / ೬೯
೩.೫ ಪ್ರಶ್ನೆಗಳು / ೭೦
ಕೆ.ಎಂ. ಕುಮಾರ್

೪. ಭಾರತದಲ್ಲಿ ಚುನಾವಣಾ ಪದ್ಧತಿ / ೭೨
೪.೧ ಚುನಾವಣೆಗಳು / ೭೨
೪.೨ ಚುನಾವಣಾ ಸುಧಾರಣೆಗಳು / ೮೫
೪.೩ ಸಾರಾಂಶ / ೮೮
೪.೪ ಪಾರಿಭಾಷಿಕ ಪದಕೋಶ / ೮೯
೪.೫ ಪ್ರಶ್ನೆಗಳು / ೮೯
ಎ. ಷಣ್ಮುಖ

೫. ಭಾರತದಲ್ಲಿ ರಾಜಕೀಯ ಪಕ್ಷ ಪದ್ಧತಿ / ೯೨
೫.೧ ರಾಜಕೀಯ ಪಕ್ಷ ಪರಿಕಲ್ಪನೆಯ ಪರಿಚಯ / ೯೨
೫.೨ ಪಕ್ಷ ಪದ್ಧತಿಯ ಸ್ವರೂಪ / ೯೩
೫.೩ ಬಹುಪಕ್ಷ ಪದ್ಧತಿಯ ಬೆಳವಣಿಗೆ / ೯೬
೫.೪ ಅಖಿಲ ಭಾರತೀಯ ಪಕ್ಷಗಳು ಮತ್ತು ಪ್ರಾದೇಶಿಕ ಪಕ್ಷಗಳು / ೯೮
೫.೫ ಭಾರತದಲ್ಲಿ ರಾಜಕೀಯ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ / ೧೦೩
೫.೬ ಭಾರತದಲ್ಲಿ ಪಕ್ಷಾಂತರ ನಿಷೇಧ ಕಾಯಿದೆ / ೧೦೫
೫.೭ ವಿರೋಧ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ / ೧೦೬
೫.೮ ಸಾರಾಂಶ / ೧೦೭
೫.೯ ಪಾರಿಭಾಷಿಕ ಪದಕೋಶ / ೧೦೮
೫.೧೦ ಪ್ರಶ್ನೆಗಳು / ೧೦೮
ಎ. ಷಣ್ಮುಖ

೬. ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಒತ್ತಡ ಗುಂಪುಗಳು /೧೧೧
೬.೧ ಸಾರ್ವಜನಿಕ ಅಭಿಪ್ರಾಯ : ಅರ್ಥ, ಮಹತ್ವ ಮತ್ತು ಪಾತ್ರ / ೧೧೧
೬.೨ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ನಿಯೋಗಿಗಳು / ೧೧೪
೬.೩ ಒತ್ತಡ ಗುಂಪುಗಳು : ಅರ್ಥ, ಸ್ವರೂಪ ಮತ್ತು ಪಾತ್ರ / ೧೧೮
೬.೪ ಒತ್ತಡ ಗುಂಪುಗಳ ವಿಧಗಳು / ೧೨೨
೬.೫ ಸಾರಾಂಶ / ೧೨೬
೬.೬ ಪಾರಿಭಾಷಿಕ ಪದಕೋಶ / ೧೨೭
೬.೭ ಪ್ರಶ್ನೆಗಳು / ೧೨೭
ಎ. ಷಣ್ಮುಖ

೭. ಭಾರತದಲ್ಲಿ ಆಡಳಿತಯಂತ್ರ / ೧೩೦

೭.೧ ಆಡಳಿತ : ಅರ್ಥ - ಪರಿಭಾಷೆ / ೧೩೦

೭.೨ ನಾಗರಿಕ ಸೇವೆ : ಅರ್ಥ ಮತ್ತು ಲಕ್ಷಣಗಳು / ೧೩೨

೭.೩ ಕೇಂದ್ರ, ರಾಜ್ಯ ಮತ್ತು ಜಿಲ್ಲಾ ಆಡಳಿತ / ೧೩೪

೭.೪ ಅಖಿಲ ಭಾರತೀಯ ಸೇವೆಗಳು / ೧೪೨

೭.೫ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗ ರಚನೆ ಮತ್ತು ಕಾರ್ಯಗಳು / ೧೪೫

೭.೬ ಪಾರಿಭಾಷಿಕ ಪದಕೋಶ / ೧೪೮

೭.೭ ಪ್ರಶ್ನೆಗಳು / ೧೪೯

**ಪಿ.ಎನ್. ಕವಿತಾ**

೮. ಭಾರತದ ಪ್ರಜಾಪ್ರಭುತ್ವದ ಮುಂದಿರುವ ಸವಾಲುಗಳು / ೧೫೧

೮.೧ ಅಸಮಾನತೆ / ೧೫೧

೮.೨ ಅನಕ್ಷರತೆ / ೧೫೩

೮.೩ ಕೋಮುವಾದ / ೧೫೪

೮.೪ ಭಯೋತ್ಪಾದನೆ / ೧೫೮

೮.೫ ಭ್ರಷ್ಟಾಚಾರ / ೧೬೦

೮.೬ ಸಾರಾಂಶ / ೧೬೬

೮.೭ ಪಾರಿಭಾಷಿಕ ಪದಕೋಶ / ೧೬೮

೮.೮ ಪ್ರಶ್ನೆಗಳು / ೧೬೮

**ಕೆ.ಎಂ. ಕುಮಾರ್**

೯. ಭಾರತ ಮತ್ತು ವಿಶ್ವ / ೧೭೧

೯.೧ ಅಂತಾರಾಷ್ಟ್ರೀಯ ರಾಜಕಾರಣ / ೧೭೧

೯.೨ ಇಂದಿನ ವಿಶ್ವಸಂಸ್ಥೆ / ೧೭೪

೯.೩ ಭಾರತದ ವಿದೇಶಾಂಗ ನೀತಿ / ೧೮೦

೯.೪ ಭಾರತ ಮತ್ತು ಪ್ರಾದೇಶಿಕ ಸಹಕಾರ / ೧೮೫

೯.೫ ಸಾರಾಂಶ / ೧೮೭

೯.೬ ಪಾರಿಭಾಷಿಕ ಪದಕೋಶ / ೧೮೮

೯.೭ ಪ್ರಶ್ನೆಗಳು / ೧೮೮

**ಎ. ಷಣ್ಮುಖ**

ಅನುಬಂಧಗಳು / ೧೯೧
೧. ರಾಜ್ಯಶಾಸ್ತ್ರವನ್ನೇಕೆ ಅಧ್ಯಯನ ಮಾಡಬೇಕು / ೧೯೧
೨. ಅಧ್ಯಾಪಕರಿಗೆ ವಿಸ್ತೃತ ಮಾರ್ಗಸೂಚಿ / ೧೯೩
೩. ಪ್ರಾಯೋಗಿಕ ಅಧ್ಯಯನ ಯೋಜನೆಗಳು / ೧೯೪
೪. ಮಾದರಿ ಪ್ರಶ್ನೆ ಪತ್ರಿಕೆ / ೨೦೦
೫. ಪರೀಕ್ಷೆ ವಿಧಾನ ಮತ್ತು ಪ್ರಶ್ನೆ ಪತ್ರಿಕೆಯ ನೀಲಿನಕ್ಷೆ / ೨೦೨
ಟಿ.ಆರ್. ಚಂದ್ರಶೇಖರ
ಲೇಖಕರ ವಿಳಾಸ / ೨೦೪

## ಅಧ್ಯಾಯ ೧

# ಪ್ರಮುಖ ರಾಜಕೀಯ ಚಿಂತಕರು ಭಾಗ - ೧

### ೧.೧ ಪ್ಲೇಟೋ

**ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)**

ಶ್ರೇಷ್ಠ ರಾಜನೀತಿಜ್ಞನೂ ತತ್ವಜ್ಞಾನಿಯೂ ಆಗಿದ್ದ ಪ್ಲೇಟೋ ಕ್ರಿ.ಪೂ. ೪೨೮ರಲ್ಲಿ ಗ್ರೀಸ್‌ನ ಎಜಿನಾ ಎಂಬಲ್ಲಿ ಜನಿಸಿದರು. ಶ್ರೀಮಂತ ಕುಟುಂಬದವರಾಗಿದ್ದ ಇವರು ದೃಡಕಾಯರಾಗಿದ್ದು ಕೆಲವು ಕಾಲ ಸೇನೆಯಲ್ಲಿ ಸೇವೆ ಸಲ್ಲಿಸಿದ್ದರು. ಹಾಗೆಯೇ ಇವರು ಕಿರಿಯ ವಯಸ್ಸಿನಲ್ಲಿಯೇ ಉತ್ತಮ ಕ್ರೀಡಾಪಟುವೆಂದೂ ಸಹ ಹೆಸರು ಪಡೆದಿದ್ದರು. ಗ್ರೀಕ್‌ನ ಶ್ರೇಷ್ಠತತ್ವಜ್ಞಾನಿಯಾಗಿದ್ದ ಸಾಕ್ರೆಟೀಸ್ ಇವರ ಗುರುಗಳಾಗಿದ್ದರು.

ಅಥೆನ್ಸ್‌ನ ರಾಜಕೀಯದಲ್ಲಿ ಸಕ್ರಿಯರಾಗಿದ್ದ ಪ್ಲೇಟೋ, ತನ್ನ ಗುರುವಾದ ಸಾಕ್ರೆಟೀಸ್‌ರಿಗೆ ಮರಣದಂಡನೆ ವಿಧಿಸಿದ್ದರಿಂದ ಮನನೊಂದು ಅಥೆನ್ಸ್‌ನ ರಾಜಕೀಯದಿಂದ ದೂರ ಸರಿದು ತತ್ವಜ್ಞಾನದ ಕಡೆಗೆ ಗಮನಹರಿಸಿದರು. ಗುರವಿನ ಮರಣದ ನಂತರ ಅಥೆನ್ಸನ್ನು ತೊರೆದು ಇಟಲಿ, ಈಜಿಪ್ಟ್ ಮುಂತಾದ ರಾಷ್ಟ್ರಗಳಲ್ಲಿ ಸಂಚಾರ ಮಾಡಿ ಪುನಃ ಅಥೆನ್ಸ್‌ಗೆ ಕ್ರಿ.ಪೂ. ೩೮೭ರಲ್ಲಿ ಮರಳಿದರು. ಅದೇ ವರ್ಷ ತಮ್ಮ ಸುಪ್ರಸಿದ್ಧ ಅಕಾಡೆಮಿಯನ್ನು ಆರಂಭಿಸಿದರು. ಈ ಆಕಾಡೆಮಿಯ ಮುಖ್ಯಗುರಿ ತತ್ವಜ್ಞಾನಿ ಆಡಳಿತಗಾರರನ್ನು ಸಿದ್ಧಗೊಳಿಸುವುದಾಗಿತ್ತು. ವಿವಿಧೆಡೆಗಳಿಂದ ಪ್ರಸಿದ್ಧ ವಿದ್ವಾಂಸ ಗುರುಗಳು ಇಲ್ಲಿಗೆ ಬಂದು ಚರ್ಚೆಗಳನ್ನು ನಡೆಸುತ್ತಿದ್ದರು. ಮುಂದೆ ಇದು ಒಂದು ಪ್ರಖ್ಯಾತ ವಿಶ್ವವಿದ್ಯಾಲಯವಾಗಿ ಪರಿವರ್ತಿತವಾಯಿತು. ತಮ್ಮ ಜೀವನದ ಬಹುತೇಕ ಅವಧಿಯನ್ನು ಅಕಾಡೆಮಿಯಲ್ಲಿಯೇ ಕಳೆದ ಪ್ಲೇಟೋ, ಇಲ್ಲಿ ಜರುಗುತ್ತಿದ್ದ ಚರ್ಚೆ, ವಾದ ವಿವಾದಗಳನ್ನು ಪ್ರಕಟಿಸುತ್ತಿದ್ದರು.

ಪ್ರಕಟವಾಗಿರುವ ಇವರ ಕೃತಿಗಳು ಬಹುತೇಕ ಸಂವಾದಗಳ ರೂಪದಲ್ಲಿ ಇವೆ. ಇವರು ಅಪಾಲಜಿ, ಕ್ರಿಟೋ, ಚಾರ್ಮಿಡಸ್, ಎತುಡೆಮಿಸ್, ಲಾಚಿಸ್, ಮನ್ರೋ, ಪ್ರೊಟೋಗೋರಸ್, ರಿಪಬ್ಲಿಕ್, ಪೊಲಿಟಿಕಸ್, ಸ್ಟೇಟ್ಸ್‌ಮನ್ ಮತ್ತು ಲಾಸ್ ಮುಂತಾದ ೩೬ ಸಂವಾದ ಕೃತಿಗಳನ್ನು ಪ್ರಕಟಿಸಿದ್ದಾರೆ ಎಂದು ಹೇಳಲಾಗಿದೆ. ಇವುಗಳಲ್ಲಿ ರಿಪಬ್ಲಿಕ್, ಸ್ಟೇಟ್ಸ್‌ಮನ್ ಮತ್ತು ಲಾಸ್ ಎಂಬ ಕೃತಿಗಳು ಬಹಳ ಮುಖ್ಯವಾದವುಗಳಾಗಿದ್ದು, ಇವುಗಳಲ್ಲಿಯೇ ಪ್ಲೇಟೋ ತಮ್ಮ ಶ್ರೇಷ್ಠ ರಾಜಕೀಯ ವಿಚಾರಧಾರೆಗಳನ್ನು ಚರ್ಚಿಸಿದ್ದಾರೆ.

### ೮. ತತ್ವಜ್ಞಾನಿ ಅರಸರ ಆಳ್ವಿಕೆ

ಪ್ಲೇಟೋವಿನ ಕಾಲದಲ್ಲಿ ಅಥೆನ್ಸಿನ ಆಡಳಿತದ ಅದಕ್ಷತೆ, ಪ್ರಜಾಪ್ರಭುತ್ವ ಸರ್ಕಾರದ ವಿಫಲತೆ, ಅರಾಜಕತ್ವ ಮತ್ತು ರಾಜ್ಯದಲ್ಲಿ ಅಜ್ಞಾನಿಗಳ ಆಳ್ವಿಕೆ ಇವೆಲ್ಲವೂ ಪ್ಲೇಟೋವಿನ ಮೇಲೆ ಪರಿಣಾಮಬೀರಿದವು. ಈ ಎಲ್ಲಾ ದೋಷಗಳನ್ನು ಸರಿಪಡಿಸಲು ತತ್ವಜ್ಞಾನಿಗಳ ಆಳ್ವಿಕೆಯೇ ಉತ್ತಮ ಎಂದು ತಮ್ಮ ಆದರ್ಶ ರಾಜ್ಯ ಸಿದ್ಧಾಂತದಲ್ಲಿ ಪ್ರತಿಪಾದಿಸಿದ್ದಾರೆ.

ಪ್ಲೇಟೋರವರು ಸದ್ಗುಣವೇ ಜ್ಞಾನ ಎಂಬ ಸಾಕ್ರೆಟೀಸ್‌ನ ಅಭಿಪ್ರಾಯದ ಆಧಾರದ ಮೇಲೆ ಸದ್ಗುಣವನ್ನು ಹೊಂದಿದ ತತ್ವಜ್ಞಾನಿಯೇ ಆದರ್ಶ ರಾಜ್ಯವನ್ನು ಆಳಬೇಕೆಂದು ಪ್ರತಿಪಾದಿಸಿದ್ದಾರೆ. ಪ್ಲೇಟೋರವರು ಹೇಳುವಂತೆ ತತ್ವಜ್ಞಾನಿಗಳು ಅರಸರಾಗದ ಹೊರತು, ಇಲ್ಲವೇ ಅರಸರು ತತ್ವಜ್ಞಾನಿಗಳಾಗದ ಹೊರತು ರಾಜ್ಯದಲ್ಲಿ ದಕ್ಷ ಆಡಳಿತ ನಡೆಸಲು ಸಾಧ್ಯವಿಲ್ಲ. ಜಾಣ್ಮೆ, ಪ್ರಾಮಾಣಿಕತೆ, ನಿಸ್ವಾರ್ಥತೆ ಹಾಗೂ ಸೇವಾ ಮನೋಭಾವ ಇವೇ ಮುಂತಾದ ಸದ್ಗುಣಗಳನ್ನು ತತ್ವಜ್ಞಾನಿಗಳು ಮಾತ್ರ ಹೊಂದಿರುವುದರಿಂದ ತತ್ವಜ್ಞಾನಿಗಳು ಆಡಳಿತವರ್ಗದಲ್ಲಿರಬೇಕು. ಆಡಳಿತ ಬುದ್ಧಿವಂತರ ಮತ್ತು ತತ್ವಜ್ಞಾನಿಗಳ ಕೈಯಲ್ಲಿದ್ದಾಗ ರಾಷ್ಟ್ರದ ಹಿತಸಾಧನೆಯಾಗುತ್ತದೆ. ತತ್ವಜ್ಞಾನಿಗಳು ರಾಜ್ಯದ ಹಿತವೇ ತಮ್ಮ ಹಿತ ಎಂದು ಭಾವಿಸಿರುತ್ತಾರೆ. ಏಕೆಂದರೆ ಅವರಿಗೆ ರಾಜ್ಯದ ಹಿತವಲ್ಲದೆ ಬೇರಾವ ಆಸೆ ಆಕಾಂಕ್ಷೆಗಳು ಇರುವುದಿಲ್ಲ ಮತ್ತು ಆ ರೀತಿಯ ಶಿಕ್ಷಣವನ್ನು ಅವರು ಪಡೆದಿರುತ್ತಾರೆ ಎಂಬುದು ಪ್ಲೇಟೋನ ಸ್ಪಷ್ಟವಾದ ನಿಲುವಾಗಿತ್ತು.

### ೮. ತತ್ವಜ್ಞಾನಿ ಅರಸರ ಆಳ್ವಿಕೆಯ ಪ್ರಮುಖ ಲಕ್ಷಣಗಳು

ಇವರು ಪ್ರಜಾಪ್ರಭುತ್ವವನ್ನು ಅಜ್ಞಾನಿಗಳ ಸರ್ಕಾರವೆಂದು ಪರಿಗಣಿಸಿದ್ದರು. ಪ್ರಜಾಪ್ರಭುತ್ವದ ಬದಲಿಗೆ ಅವರು ತತ್ವಜ್ಞಾನಿ ರಾಜಪ್ರಭುತ್ವವನ್ನು ಪ್ರತಿಪಾದಿಸಿದ್ದಾರೆ. ಪ್ಲೇಟೋರವರ ಪ್ರಕಾರ ಸದ್ಗುಣವೇ ಜ್ಞಾನ, ಹಾಗೂ ರಾಜ್ಯದ ಉತ್ತಮ ಆಡಳಿತಕ್ಕೆ ಸದ್ಗುಣ ಅತ್ಯಗತ್ಯ. ರಾಜ್ಯದಲ್ಲಿರುವವರೆಲ್ಲಾ ಸದ್ಗುಣವನ್ನು ಬೆಳೆಸಿಕೊಳ್ಳುವ ಸಮಾನ ಸಾಮರ್ಥ್ಯ ಹೊಂದಿಲ್ಲ. ಆದ್ದರಿಂದ ಎಲ್ಲರೂ ಆಡಳಿತದಲ್ಲಿ ಪಾಲ್ಗೊಳ್ಳುವಂತಿಲ್ಲ. ಈ ಕಾರಣದಿಂದಾಗಿ ಅವರು ತತ್ವಜ್ಞಾನಿ ರಾಜನ ಆಡಳಿತವನ್ನು ಸಮರ್ಥಿಸಿದ್ದಾರೆ.

### ೧. ನಿಸ್ವಾರ್ತ ಸೇವಾ ಮನೋಭಾವ

ತತ್ವಜ್ಞಾನಿ ಅರಸರು ರಾಜ್ಯದ ಹಿತವೇ ತಮ್ಮ ಹಿತವೆಂದು ಭಾವಿಸಿ ಆಡಳಿತ ನಡೆಸುತ್ತಾರೆ. ತತ್ವಜ್ಞಾನಿ ಅರಸನಿಗೆ ರಾಜ್ಯದ ಹಿತವಲ್ಲದೆ ಬೇರಾವ ಆಸೆ ಆಕಾಂಕ್ಷೆಗಳು ಇರುವುದಿಲ್ಲ. ಆದ್ದರಿಂದ ತತ್ವಜ್ಞಾನಿ ಅರಸರು ರಾಜ್ಯಕ್ಕೆ ನಿಸ್ವಾರ್ಥ ಸೇವೆ ಸಲ್ಲಿಸುತ್ತಿದ್ದಾರೆ.

### ೨. ರಾಜ್ಯ ನಿಯಂತ್ರಿತ ಶಿಕ್ಷಣ

ತತ್ವಜ್ಞಾನಿ ಅರಸರನ್ನು ಹೊಂದಲು ಪ್ಲೇಟೋ, ಅವರಿಗೆ ನಿರಂತರ ರಾಜ್ಯನಿಯಂತ್ರಿತ ಶಿಕ್ಷಣ ಪದ್ಧತಿಯನ್ನು ಪ್ರತಿಪಾದಿಸಿದ್ದಾನೆ. ತತ್ವಜ್ಞಾನಿ ರಾಜನು ೩೫ ವರ್ಷದ ವರೆಗಿನ

ನಿರಂತರ ಶಿಕ್ಷಣ ಮತ್ತು ಪರೀಕ್ಷೆ ಹಾಗೂ ೧೫ ವರ್ಷದ ಆಡಳಿತ ಅನುಭವ ಹೊಂದಿರಬೇಕು. ರಾಜ ಅಧಿಕಾರಕ್ಕೆ ಬಂದರೂ ಆತ ತತ್ವಜ್ಞಾನದ ವಿದ್ಯಾರ್ಥಿಯೇ ಆಗಿರುತ್ತಾನೆ.

**೩. ಪರಿತ್ಯಾಗ ಹಾಗೂ ನಿರ್ಲಿಪ್ತತೆ**

ತತ್ವಜ್ಞಾನಿ ಅರಸರ ಜೀವನವು ಒಂದು ರೀತಿಯ ವಿರಕ್ತಿ, ಪರಿತ್ಯಾಗ ಹಾಗೂ ನಿರ್ಲಿಪ್ತತೆಯಿಂದ ಕೂಡಿರುತ್ತದೆ. ಇವರು ಸ್ವಂತ ಆಸ್ತಿ ಹಾಗೂ ಕುಟುಂಬವನ್ನು ಹೊಂದಿರಬಾರದು ಎಂದು ಪ್ಲೇಟೋ ತಿಳಿಸಿದ್ದಾರೆ. ಇವರಿಗೆ ಪತ್ನಿ ಮತ್ತು ಆಸ್ತಿಯ ಸಮತಾವಾದವನ್ನು ಪ್ರತಿಪಾದಿಸಲಾಗಿದೆ. ರಾಜ್ಯದ ಹಿತಾಸಕ್ತಿಯ ದೃಷ್ಟಿಯಿಂದ ತತ್ವಜ್ಞಾನಿ ಅರಸರು ಆರ್ಥಿಕ ಅಧಿಕಾರಗಳನ್ನು ತ್ಯಾಗ ಮಾಡಬೇಕೆಂದು ಪ್ಲೇಟೋ ಅಭಿಪ್ರಾಯ ಪಟ್ಟಿದ್ದಾರೆ.

**೪. ಕಾನೂನಿನ ನಿರ್ಬಂಧ ರಹಿತತೆ**

ಪ್ಲೇಟೋವಿನ ತತ್ವಜ್ಞಾನಿ ಅರಸನಿಗೆ ಕಾನೂನಿನ ನಿರ್ಬಂಧ ಇರುವುದಿಲ್ಲ. ಅವನು ಶಾಸನಗಳಿಗೆ ಅತೀತ, ಪ್ಲೇಟೋ ಹೇಳುವಂತೆ ಹೇಗೆ ವೈದ್ಯನಿಗೆ ಕಟ್ಟುಪಾಡುಗಳು ಹೆಚ್ಚಾಗಿ ಅನ್ವಯಿಸುವುದಿಲ್ಲವೋ, ಹಾಗೆಯೇ ತತ್ವಜ್ಞಾನಿ ಅರಸನನ್ನು ಕಾನೂನು ಕಟ್ಟಳೆಯಿಂದ ಬಿಗಿಯಬಾರದು. ಪ್ಲೇಟೋ ತತ್ವಜ್ಞಾನಿ ಮಾತಿಗೆ ನಿರಂಕುಶ ಅಧಿಕಾರವನ್ನು ನೀಡಿ ಅರಸನು ಯಾವ ರೂಢಿಗಳಿಗೂ ಅಥವಾ ಲಿಖಿತ ಶಾಸನಗಳಿಗೂ ಬದ್ಧನಾಗಿರದೆ, ಸಾರ್ವಜನಿಕ ಅಭಿಪ್ರಾಯಕ್ಕೂ ಹೊಣೆಗಾರನಲ್ಲವೆಂದು ಪ್ಲೇಟೋ ತಿಳಿಸಿದ್ದಾನೆ. ತತ್ವಜ್ಞಾನ ಅರಸ ಹೇಳುವುದೇ ಕಾನೂನು, ಬದಲಿಗೆ ಕಾನೂನಿನ ಪರಿಧಿಯೊಳಗೆ ಅವನು ನಿರ್ಬಂಧಿಸಲ್ಪಡುವುದಿಲ್ಲ.

**೫. ತತ್ವಜ್ಞಾನಿ ಅರಸನ ಪ್ರಮುಖ ಕರ್ತವ್ಯಗಳು**

ತತ್ವಜ್ಞಾನಿ ರಾಜನು ಕಾನೂನಿನ ಮಿತಿಗಳಿಗೆ ಒಳಪಡದಿದ್ದರೂ ಅವನ ನಿರಂಕುಶ ಅಧಿಕಾರವೂ ಅನಿರ್ಬಂಧಿತವಲ್ಲ. ಅವನು ರಾಜ್ಯದ ಮತ್ತು ಸಮಾಜದ ಕೆಲವು ಮೂಲಭೂತ ನಿಯಮಗಳನ್ನು ಗೌರವಿಸಬೇಕು. ಅವುಗಳೆಂದರೆ :

೧. ಅಪರಿಮಿತ ಸಂಪತ್ತು ಮತ್ತು ಆಸ್ತಿ ರಾಜ್ಯದೊಳಗೆ ಬರದಂತೆ ನೋಡಿಕೊಳ್ಳಬೇಕು.
೨. ರಾಜ್ಯದ ಐಕ್ಯತೆ ಮತ್ತು ಸ್ವಯಂ ಪರಿಪೂರ್ಣತೆಗೆ ತಕ್ಕಂತೆ ಅದರ ಗಾತ್ರವನ್ನು ಇಟ್ಟುಕೊಳ್ಳಬೇಕು.
೩. ಪ್ರಜೆಗಳಿಗೆ ವಹಿಸಿದ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುವಂತೆ ನೋಡಿಕೊಳ್ಳಬೇಕು.
೪. ಶಿಕ್ಷಣ ಪದ್ಧತಿಯಲ್ಲಿ ಯಾವುದೇ ಬದಲಾವಣೆ ಆಗದಂತೆ ನೋಡಿಕೊಳ್ಳಬೇಕು.

ಈ ರೀತಿ ತತ್ವಜ್ಞಾನಿ ದೊರೆಯನ್ನು ಮೇಲಿನ ಕೆಲವು ಮೂಲಭೂತ ನಿಯಮಗಳಿಗೆ ನಿರ್ಬಂಧಿಸಿರುವುದು ಪ್ರಶಂಸನೀಯವಾಗಿದೆ. ತತ್ವಜ್ಞಾನಿ ಅರಸನಾಗಿದ್ದರೆ ಮಾತ್ರ ನೆಮ್ಮದಿ ಸಾಧ್ಯ. ಪ್ಲೇಟೋರವರು ಉತ್ತಮ ಆದರ್ಶ ರಾಜ್ಯದ ಕಲ್ಪನೆಯಲ್ಲಿ ಈ ತತ್ವಜ್ಞಾನಿ ಅರಸನ ಆಳ್ವಿಕೆಯನ್ನು ಒತ್ತಿಹೇಳುತ್ತಿದ್ದಾರೆ.

ವಿಮರ್ಶೆ

ಪ್ಲೇಟೋವಿನ ತತ್ವಜ್ಞಾನಿ ಅರಸರ ಆಳ್ವಿಕೆಯಲ್ಲಿ ಉತ್ತಮವಾಗಿದ್ದರೂ ಸಹ ಅದು ಅನೇಕ ಚಿಂತಕರು ಇದರ ಬಗ್ಗೆ ಟೀಕೆಗಳನ್ನು ಮಾಡಿದ್ದಾರೆ. ಅವೆಂದರೆ:

೧. ಸದ್ಗುಣವೇ ಜ್ಞಾನವೆಂಬುದು ಕೆಲವೇ ವರ್ಗಗಳಿಗೆ ಸೀಮಿತವಲ್ಲ. ಪ್ಲೇಟೋ ಹೇಳಿರುವ ಸದ್ಗುಣವೇ ಜ್ಞಾನವೆಂಬುದು ಕೆಲವೇ ವರ್ಗಕ್ಕೆ ಸೀಮಿತವಾದದ್ದು ಎಂಬುದು ಆಧುನಿಕ ಪ್ರಜಾಪ್ರಭುತ್ವದ ತತ್ವವಾದ ಸಮಾನತೆಗೆ ವಿರುದ್ಧವಾಗಿದೆ. ಅನೇಕ ವೇಳೆ ಪ್ರಜೆಗಳ ಗುಂಪು ಹೊಂದಿರುವ ಸಾಮೂಹಿಕ ಪ್ರಜ್ಞೆ ಅಥವಾ ಜ್ಞಾನವು ಒಬ್ಬ ತಂತ್ರಜ್ಞಾನ ಅರಸನಿಗಿಂತ ಮೇಲ್ಮಟ್ಟದ್ದಾಗಿರುತ್ತದೆ.

೨. ತತ್ವಜ್ಞಾನಿ ಅರಸರ ನಿರಂಕುಶ ಅಧಿಕಾರ ಪ್ಲೇಟೋ ಹೇಳಿರುವಂತೆ ತತ್ವಜ್ಞಾನಿ ಅರಸರು ಯಾವುದೇ ರೀತಿಯ ಕಾನೂನುಗಳಿಗೆ ಒಳಪಡದಿರುವುದರಿಂದ ಸ್ವೇಚ್ಛೆಯಿಂದ ಆಡಳಿತ ನಡೆಸುತ್ತಾರೆ. ತತ್ವಜ್ಞಾನಿಗಳ ಪರಮಾಧಿಕಾರವನ್ನು ಮತ್ತು ನಿರಂಕುಶ ಅಧಿಕಾರವನ್ನು ಎತ್ತಿ ಹಿಡಿದಿರುವ ಪ್ಲೇಟೋ ರಾಜ್ಯದ ಬಹುಸಂಖ್ಯಾತ ಜನರನ್ನು ಕೇವಲ ಯಾಂತ್ರಿಕ ಮಾನವರನ್ನಾಗಿ ಮಾಡಿದ್ದಾನೆ. ಈತನ ನಿರಂಕುಶ ತತ್ವಜ್ಞಾನಿ ಅರಸನ ಆಳ್ವಿಕೆಯು ನಾಗರೀಕತ್ವದ ಹಾಗೂ ಶ್ರೇಷ್ಠ ಪೌರತ್ವದ ವಿರೋಧಿಯಾಗಿದೆ.

೩. ಅಸಮಂಜಸ ಶಿಕ್ಷಣ ಪದ್ಧತಿ ತತ್ವಜ್ಞಾನಿ ಅರಸರನ್ನು ಒದಗಿಸಲು ಪ್ರತಿಪಾದಿಸಿದ ಈತನ ಕೂಡ ಶಿಕ್ಷಣ ಪದ್ಧತಿ ಅಸಮಂಜಸವಾಗಿದೆ. ಇಲ್ಲಿ ಹೊಸ ಶಿಕ್ಷಣ ಪದ್ಧತಿಗೆ ಅವಕಾಶ ವಿಲ್ಲ. ಪ್ಲೇಟೋ ತತ್ವಜ್ಞಾನಿ ಅರಸರಿಗೆ ಯಾವುದೇ ರೀತಿಯ ಆರ್ಥಿಕ ಕಾನೂನು ಅಥವಾ ಸೈನಿಕ ಶಿಕ್ಷಣದ ಬಗ್ಗೆ ವಿವರಣೆ ನೀಡಿಲ್ಲ. ಆದುದರಿಂದ ಅವನ ಶಿಕ್ಷಣ ಪದ್ಧತಿಯು ವೈಚಾರಿಕರನ್ನು ಸೃಷ್ಟಿಸುತ್ತದೆಯೇ ಹೊರತು ಕರ್ತವ್ಯಶಾಲಿಗಳನ್ನು ನಿರ್ಮಾಣ ಮಾಡುವುದಿಲ್ಲ.

೪. ಪ್ಲೇಟೋವಿನ ಶಿಕ್ಷಣ ಪದ್ಧತಿಯು ಕೆಲವು ಬುದ್ಧಿವಂತರಿಗೆ ಮೀಸಲಾಗಿದ್ದು ಬಹು ಸಂಖ್ಯಾತರಿಗೆ ಜಾರಿಗೆ ತರಲು ಅಸಾಧ್ಯ.

೫. ತತ್ವಜ್ಞಾನಿ ಅರಸರ ಆಳ್ವಿಕೆ ಕೇವಲ ಕಾಲ್ಪನಿಕವಾದದ್ದು. ಇಂತಹ ಆಳ್ವಿಕೆಯನ್ನು ವಾಸ್ತವ ವಾಗಿ ಜಾರಿಗೆ ತರಲು ಅಸಾಧ್ಯ.

೬. ತತ್ವಜ್ಞಾನಿ ಅರಸರನ್ನು ಆಸ್ತಿ ಮತ್ತು ಪತ್ನಿಯರ ಸಮತಾವಾದಕ್ಕೆ ಒಳಪಡಿಸಿರುವುದು ಮಾನವನ ಸಹಜ ಧರ್ಮಕ್ಕೆ ವ್ಯತಿರಿಕ್ತವಾಗಿದೆ.

ಇಷ್ಟೆಲ್ಲಾ ಟೀಕೆಗಳಿದ್ದರೂ ಸಹ ಪ್ಲೇಟೋವಿನ ಅಭಿಪ್ರಾಯದ ಹಿಂದಿರುವ ಕಳಕಳಿಯನ್ನು ಅಂದಿನ ಅಗತ್ಯತೆಯನ್ನು ಗಮನಿಸಿದಾಗ ಆತನ ಅಭಿಪ್ರಾಯ ಅರ್ಥಪೂರ್ಣವಾಗುತ್ತದೆ. ಪ್ಲೇಟೋ ಅಂದಿನ ಕಾಲದ ಪ್ರಜೆಗಳನ್ನು ಅವ್ಯವಸ್ಥೆಯಿಂದ ಕಾಪಾಡಲು ಒಂದು ಉತ್ತಮ ರಾಜ್ಯಪದ್ಧತಿಯನ್ನು ಹಾಗೂ ಉತ್ತಮ ಆಡಳಿತಗಾರರನ್ನು ಒದಗಿಸುವ ಉದ್ದೇಶ ಹೊಂದಿದ್ದನು.

## ೩. ಆದರ್ಶ ರಾಜ್ಯ

ಪ್ಲೇಟೋ ಗ್ರೀಕ್ ದೇಶದವನಾಗಿದ್ದು ಜಗತ್ತಿನ ಅತ್ಯಂತ ಶ್ರೇಷ್ಠ ತತ್ವಜ್ಞಾನಿ ಎಂಬ ಹೆಸರನ್ನುಗಳಿಸಿದ್ದಾನೆ. ಆತನು ತನ್ನ ಸುಪ್ರಸಿದ್ಧ ಗ್ರಂಥವಾದ ದಿ ರಿಪಬ್ಲಿಕ್‌ನಲ್ಲಿ ಒಂದು ಆದರ್ಶ ರಾಜ್ಯ ಹೇಗಿರಬೇಕು ಎಂಬುದನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾನೆ. ಆದರ್ಶ ರಾಜ್ಯ ವಾಸ್ತವಿಕವಾಗಿ ಸೃಷ್ಟಿಯಾಗಿದೆ. ಆತನ ಕಲ್ಪನೆಯ ಆದರ್ಶ ರಾಜ್ಯ ವಾಸ್ತವಿಕವಾಗಿ ಅಸ್ತಿತ್ವಕ್ಕೆ ತರಲು ಸಾಧ್ಯವೇ ಎಂಬುದರ ಬಗ್ಗೆ ಯೋಚಿಸಲಿಲ್ಲ. ಪ್ಲೇಟೋ ಸ್ಥಾಪಿಸಬಯಸಿದ ಆದರ್ಶ ರಾಜ್ಯವು ಎಲ್ಲಾ ದೇಶಗಳಿಗೂ ಎಲ್ಲಾ ಕಾಲಕ್ಕೂ ಅನ್ವಯವಾಗುವಂತಹ ಮಾದರಿ ರಾಜ್ಯ ಎಂದು ಭಾವಿಸಿದ್ದನು.

ಪ್ಲೇಟೋ ತನ್ನ ಆದರ್ಶ ರಾಜ್ಯದ ರಚನೆಯನ್ನು ಮಾನವನಲ್ಲಿರುವ ಮೂರು ಮೂಲಭೂತ ಗುಣಗಳ ವರ್ಗೀಕರಣದ ಮೂಲಕ ಪ್ರಾರಂಭಿಸುತ್ತಾನೆ. ಆ ಗುಣಗಳೆಂದರೆ ವಿವೇಚನೆ, ಚೈತನ್ಯ (ರಜೋಗುಣ ಅಥವಾ ರಾಜಿಸ) ಮತ್ತು ತಾಮಸ. ಮಾನವನ ಈ ಮೂರು ಗುಣಗಳಿಗೆ ಅನುಗುಣವಾಗಿ ಸಮಾಜದಲ್ಲಿ ಮೂರು ವರ್ಗಗಳಿರುತ್ತವೆ. ಮಾನವ ನಲ್ಲಿರುವ ಈ ಮೂರು ಗುಣಗಳ ವರ್ಗೀಕರಣ ಆದರ್ಶ ರಾಜ್ಯದ ತಳಹದಿಯಾಗಿದೆ. ಈ ಗುಣಗಳಿಗೆ ಅನುಗುಣವಾಗಿ ಸಮಾಜದಲ್ಲಿರುವ ಮೂರು ವರ್ಗಗಳೆಂದರೆ :

- ಸಾತ್ವಿಕ ಅಥವಾ ವಿವೇಚನೆ ಗುಣವನ್ನು ಅಧಿಕವಾಗಿ ಹೊಂದಿರುವವರನ್ನು ಆಡಳಿತ ವರ್ಗ.
- ಚೈತನ್ಯದ ಗುಣವನ್ನು ಹೆಚ್ಚಾಗಿ ಹೊಂದಿರುವವರನ್ನು ಸೈನಿಕ ವರ್ಗ.
- ಮೇಲಿನ ಎರಡೂ ರೀತಿಯ ಗುಣಗಳನ್ನು ಹೊಂದಿರದೆ, ಕೇವಲ ತಾಮಸ ಗುಣವನ್ನು ಮಾತ್ರವೇ ಹೊಂದಿರುವವರನ್ನು ಉತ್ಪಾದಕ ವರ್ಗ - ಹೀಗೆ ಅವರವರ ಗುಣಗಳ ಆಧಾರದ ಮೇಲೆ ಜನರನ್ನು ವರ್ಗೀಕರಿಸಿ ಅವರ ಸ್ಥಾನಮಾನಗಳನ್ನು ಪ್ಲೇಟೋ ಗುರುತಿಸಿದ್ದಾನೆ. ಈತನ ಪ್ರಕಾರ ರಾಷ್ಟ್ರದ ಪ್ರಗತಿಯು ಈ ಮೂರು ವರ್ಗದ ಮೇಲೂ ಅವಲಂಬಿಸಿರುತ್ತದೆ.

ಆದರ್ಶ ರಾಜ್ಯವಾಗಬೇಕಾದರೆ ಉತ್ಪಾದಕವರ್ಗ ನಿಷ್ಠೆಯಿಂದ, ರಕ್ಷಕರು ಧೈರ್ಯದಿಂದ ಹಾಗೂ ಆಡಳಿತಗಾರರು ಜಾಣ್ಮೆ ಮತ್ತು ಬುದ್ಧಿವಂತಿಕೆಯಿಂದ ತಮ್ಮ ಕೆಲಸಗಳನ್ನು ನಿರ್ವಹಿಸ ಬೇಕು. ಸೈನಿಕರಿಗೆ ಅಗತ್ಯವಾದ ಶಿಕ್ಷಣ ತರಬೇತಿಯನ್ನು ನೀಡಬೇಕು. ಅವರು ತಮ್ಮ ದೈಹಿಕ ಬೆಳವಣಿಗೆಯನ್ನಲ್ಲದೆ ಮಾನಸಿಕ ಬೆಳವಣಿಗೆಗೆ ಅಗತ್ಯವಾದ ಸಂಗೀತ, ಕ್ರೀಡೆ ಮುಂತಾದವು ಗಳಲ್ಲಿ ಆಸಕ್ತಿ ಬೆಳೆಸಿಕೊಳ್ಳಬೇಕು.

### ಆದರ್ಶ ರಾಜ್ಯದ ಲಕ್ಷಣಗಳು

ಪ್ಲೇಟೋರವರ ಆದರ್ಶ ರಾಜ್ಯದ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಅದರ ಲಕ್ಷಣಗಳನ್ನು ಗಮನಿಸಬೇಕಾಗುತ್ತದೆ. ಅವೆಂದರೆ :

**೧. ತತ್ವಜ್ಞಾನಿ ಅರಸರ ಆಳ್ವಿಕೆ**

ಪ್ಲೇಟೋರವರು ಸದ್ಗುಣವೇ ಜ್ಞಾನ ಎಂಬ ಸಾಕ್ರೆಟೀಸ್‌ನ ಹೇಳಿಕೆಯ ಆಧಾರದ ಮೇಲೆ ಸದ್ಗುಣವನ್ನು ಹೊಂದಿದ ತತ್ವಜ್ಞಾನಿಯೇ ಆದರ್ಶ ರಾಜ್ಯವನ್ನು ಆಳಬೇಕೆಂದು ಪ್ರತಿಪಾದಿಸಿದ್ದಾನೆ. ವಿವೇಕ ಮತ್ತು ವಿವೇಚನಾ ಶಕ್ತಿಯನ್ನು ಹೊಂದಿರುವವರು ಮಾತ್ರ ದೇಶದ ಆಡಳಿತವನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಲು ಸಾಧ್ಯ. ಪ್ರಾಮಾಣಿಕತೆ ಬುದ್ಧಿವಂತಿಕೆ, ನಿಸ್ವಾರ್ಥ ಸೇವಾ ಮನೋಭಾವ, ಜ್ಞಾನ ಮುಂತಾದ ಸದ್ಗುಣಗಳು ಆಡಳಿತಗಾರರಲ್ಲಿ ಇರಬೇಕಾಗುತ್ತದೆ. ಈ ಎಲ್ಲಾ ಸದ್ಗುಣಗಳು ತತ್ವಜ್ಞಾನಿಗಳಲ್ಲಿ ಇರುವುದರಿಂದ ಅವರು ಅರಸರಾಗಬೇಕು. ಒಂದು ರಾಜ್ಯ ಆದರ್ಶ ರಾಜ್ಯವಾಗಬೇಕಾದರೆ ತತ್ವಜ್ಞಾನಿಗಳು ಅರಸರಾಗಬೇಕು ಅಥವಾ ರಾಜರು ತತ್ವಜ್ಞಾನದ ಸಾಮರ್ಥ್ಯ ಹಾಗೂ ಚೈತನ್ಯ ಹೊಂದಿರಬೇಕು. ಆಡಳಿತವು ಜ್ಞಾನಿಗಳ ಕೈಯಲ್ಲಿದ್ದಾಗ ರಾಷ್ಟ್ರದ ಹಿತ ಸಾಧನೆಯಾಗುತ್ತದೆ. ತತ್ವಜ್ಞಾನಿಗಳ ಆಳ್ವಿಕೆಯಿಂದ ರಾಜಕೀಯ ಸ್ವಾರ್ಥ ಮತ್ತು ಅಸಮರ್ಥತೆಗಳು ಕಾಣದಂತಾಗುತ್ತವೆ. ಆದ್ದರಿಂದ ಇವರು ರಾಜ್ಯದ ಹಿತವೇ ತಮ್ಮ ಹಿತವೆಂದು ಭಾವಿಸಿ ಆಳ್ವಿಕೆ ನಡೆಸುತ್ತಾರೆ.

**೨. ಜನಸಂಖ್ಯೆ**

ಆದರ್ಶ ರಾಜ್ಯದಲ್ಲಿ ಜನಸಂಖ್ಯೆ ರಾಜ್ಯದ ವಿಸ್ತೀರ್ಣ ಹಾಗೂ ಉತ್ಪಾದನಾ ಸಾಮರ್ಥ್ಯಕ್ಕನುಗುಣವಾಗಿ ಇರಬೇಕು ಎಂದು ಪ್ಲೇಟೋ ಅಭಿಪ್ರಾಯ ಪಟ್ಟಿದ್ದಾನೆ. ಉತ್ತಮ ಆದರ್ಶ ರಾಜ್ಯದಲ್ಲಿ ೫೦೪೦ ಜನಸಂಖ್ಯೆ ಇರಬೇಕು ಎಂದಿದ್ದಾನೆ. ಮತ್ತು ಜನಸಂಖ್ಯೆ ಅಗತ್ಯಕ್ಕಿಂತ ಹೆಚ್ಚೂ ಇರಬಾರದು ಮತ್ತು ಕಡಿಮೆಯೂ ಇರಬಾರದು. ಅಲ್ಲಿನ ಭೂ ಪ್ರದೇಶಕ್ಕನುಗುಣವಾಗಿ ಇರಬೇಕು. ಇದರಿಂದಾಗಿ ಆಡಳಿತಗಾರರು ಉತ್ತಮವಾಗಿ ಆಡಳಿತ ನಡೆಸಬಹುದು ಹಾಗೂ ರಕ್ಷಕರು ಉತ್ತಮವಾಗಿ ಆಡಳಿತ ನಡೆಸಬಹುದು. ಹಾಗೂ ರಕ್ಷಕರು ಉತ್ತಮವಾಗಿ ಭದ್ರತಾ ವ್ಯವಸ್ಥೆ ನೀಡಬಹುದು. ಆದ್ದರಿಂದ ಜನಸಂಖ್ಯೆಯೂ ಸಹ ಆದರ್ಶ ರಾಜ್ಯದ ಕಲ್ಪನೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ.

**೩. ಆಸ್ತಿ ಮತ್ತು ಕುಟುಂಬ ಸಮತಾವಾದ**

ಒಂದು ಆದರ್ಶ ರಾಜ್ಯವಾಗಬೇಕಾದರೆ ಆಡಳಿತದ ಮುಂಚೂಣಿಯಲ್ಲಿರುವವರು, ರಕ್ಷಣಾ ದಳದವರು ಶಿಸ್ತು, ಸಂಯಮ, ಸದ್ಗುಣಗಳಿಂದ ಕೂಡಿದವರಾಗಿರಬೇಕು ಇವರಿಗೆ ಪ್ಲೇಟೋ ಆಸ್ತಿಯ ಮತ್ತು ಪತ್ನಿಯರ ಸಮತಾವಾದ ಎಂಬ ಹೊಸ ಸಾಮಾಜಿಕ ವ್ಯವಸ್ಥೆಯನ್ನು ಗೊತ್ತುಪಡಿಸಿದ್ದಾರೆ.

ಈ ತತ್ವವು ಸಮಾಜದಲ್ಲಿರುವ ಮೂರು ವರ್ಗಗಳಿಗೆ ಅನ್ವಯಿಸದೇ ಕೇವಲ ಆಡಳಿತಗಾರರವರ್ಗ ಮತ್ತು ರಕ್ಷಣಾವರ್ಗಕ್ಕೆ ಮಾತ್ರ ಅನ್ವಯಿಸುತ್ತದೆ. ವ್ಯಕ್ತಿಯಲ್ಲಿನ ಸ್ವಾರ್ಥತೆ, ಆಸೆ, ಆಕಾಂಕ್ಷೆಗಳೇ ಎಲ್ಲಾ ಅನಾಹುತಕ್ಕೂ ಮತ್ತು ಅಶಾಂತಿಗೆ ಮೂಲವಾಗಿದೆ. ಆಡಳಿತಗಾರರು ಈ ದುರ್ಗುಣಗಳಿಂದ ಮುಕ್ತವಾಗಿದ್ದರೆ ಮಾತ್ರ ಆದರ್ಶ ರಾಜ್ಯ ಅಸ್ತಿತ್ವದಲ್ಲಿರಲು ಸಾಧ್ಯ, ಆದಕಾರಣ ಆಡಳಿತಗಾರರು ವಿವಾಹವಾಗಬಾರದು ಮತ್ತು ಯಾವುದೇ

ಸ್ಥಿರ ಹಾಗೂ ಚರ ಆಸ್ತಿಯನ್ನು ಹೊಂದಬಾರದು. ಅವರಿಗೆ ಖಾಸಗಿ ಕುಟುಂಬವಿದ್ದರೆ ವೈಯಕ್ತಿಕ ಕೆಲಸಕಾರ್ಯಗಳಿಗೆ ಹೆಚ್ಚಿನ ಗಮನನೀಡುತ್ತಾರೆ. ಇದರಿಂದ ದೇಶದ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸುವುದಿಲ್ಲ. ಆದ್ದರಿಂದ ಆಡಳಿತಗಾರರು ಮತ್ತು ಸೈನಿಕರು ಗುಡಾರಗಳಲ್ಲಿ ವಾಸಿಸಿ ಒಂದು ನಿರ್ದಿಷ್ಟ ರೀತಿಯ ಆಹಾರವನ್ನು ಸೇವಿಸಬೇಕು. ಈ ಎರಡು ವರ್ಗದಲ್ಲಿ ಮಹಿಳೆಯರಿಗೂ ಸಹ ಪುರುಷರ ಸಮಾನ ಅವಕಾಶ, ಸ್ವಾತಂತ್ರ್ಯ ವಿರುತ್ತದೆ.

ಇವರು ವಿವಾಹವಾಗದೆ ಸ್ತ್ರೀ ಪುರುಷರು ದೈಹಿಕ ಸಂಪರ್ಕ ಹೊಂದಲು ಯಾವುದೇ ರೀತಿಯ ನಿರ್ಬಂಧವಿಲ್ಲ. ಇವರ ಸಮತಾವಾದ ತತ್ವ ಉತ್ಪಾದಕ ವರ್ಗಕ್ಕೆ ಅನ್ವಯಿಸುವುದಿಲ್ಲ ಮತ್ತು ಈ ತತ್ವವು ತತ್ವಜ್ಞಾನಿ ಅರಸರನ್ನು ನಿಸ್ವಾರ್ಥತೆಯಿಂದ ರಾಜ್ಯ ಆಳುವಂತೆ ಪ್ರೇರೇಪಿಸುತ್ತದೆ.

**೪. ರಾಜ್ಯ ನಿಯಂತ್ರಿತ ಶಿಕ್ಷಣ**

ವಿವಿಧ ಹಂತಗಳಲ್ಲಿ ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಅಭಿವೃದ್ಧಿಯನ್ನು ಮಾಡುವ ರೀತಿಯಲ್ಲಿ ಶಿಕ್ಷಣವಿರಬೇಕು. ಶಿಕ್ಷಣ ವ್ಯವಸ್ಥೆ ಸಂಪೂರ್ಣವಾಗಿ ರಾಜ್ಯದ ಅಧೀನದಲ್ಲಿರ ಬೇಕು. ಮಕ್ಕಳ ವಿದ್ಯಾಭ್ಯಾಸ ಅವರ ಜನನದ ಮುಂಚಿತವಾಗಿಯೇ ಪ್ರಾರಂಭವಾಗುತ್ತದೆ. ತಂದೆ ತಾಯಿಗಳು ಆರೋಗ್ಯವಂತರಾಗಿದ್ದು, ಸದ್ಗುಣವಂತರಾಗಿದ್ದರೆ ಅವರಂತೆಯೇ ಮಕ್ಕಳು ಜನಿಸುತ್ತಾರೆ. ಅಸ್ವಸ್ಥ ತಂದೆ ತಾಯಿಗಳು ಮಕ್ಕಳನ್ನು ಹೆರಬಾರದು. ಮಕ್ಕಳ ಶಿಕ್ಷಣ ವ್ಯವಸ್ಥೆಯನ್ನು ಸರ್ಕಾರವೇ ನೋಡಿಕೊಳ್ಳಬೇಕು. ಮಕ್ಕಳಿಗೆ ಪ್ರಾರಂಭದ ೧೦ ವರ್ಷಗಳಲ್ಲಿ ಸಂಗೀತ, ವ್ಯಾಯಾಮ ಮುಂತಾದ ಶಿಕ್ಷಣವನ್ನು ನೀಡಬೇಕು. ಮಾಧ್ಯಮಿಕ ಹಂತದಲ್ಲಿ ಹತ್ತರಿಂದ ಇಪ್ಪತ್ತು ವರ್ಷದ ಅವಧಿಯಲ್ಲಿ ವ್ಯಾಯಾಮ, ಸಂಗೀತಾಭ್ಯಾಸದ ಜೊತೆಗೆ ಗಣಿತ, ಇತಿಹಾಸ, ವಿಜ್ಞಾನ ಮುಂತಾದವುಗಳನ್ನು ಬೋಧಿಸಲಾಗುವುದು. ಕುದುರೆ ಸವಾರಿ, ಸೈನಿಕ ತರಬೇತಿ, ಧಾರ್ಮಿಕ ಜ್ಞಾನಗಳ ಬಗ್ಗೆ ಬೋಧನೆ ನೀಡಲಾಗುವುದು. ಯುದ್ಧಗಳಾಗು ತ್ತಿರುವ ಸ್ಥಳಗಳಿಗೆ ಕರೆದುಕೊಂಡು ಹೋಗಿ ಯುದ್ಧದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ತಿಳಿಸಬೇಕು.

ಇಪ್ಪತ್ತರಿಂದ ಮೂವತ್ತನೇ ವರ್ಷದವರೆಗೆ ಅವರು ಪಡೆದ ವಿದ್ಯಾಭ್ಯಾಸದ ಬಗ್ಗೆ ಪರೀಕ್ಷೆ ನಡೆಸಿ ಅದರಲ್ಲಿ ಉತ್ತೀರ್ಣರಾದವರಿಗೆ ಮುಂದಿನ ಶಿಕ್ಷಣ ನೀಡಬೇಕು. ತೇರ್ಗಡೆ ಹೊಂದದವರು ಯಾವುದಾದರೂ ಉದ್ಯೋಗ ಮಾಡಬೇಕು. ಮೂವತ್ತನೇ ವರ್ಷದಲ್ಲಿ ಬಹಳ ಕಠಿಣವಾದ ಪರೀಕ್ಷೆಯನ್ನು ನಡೆಸಿ ಆ ಪರೀಕ್ಷೆಯಲ್ಲಿ ತೇರ್ಗಡೆಯಾದವರು ಮಾತ್ರ ಆಡಳಿತಗಾರರಾಗುವ ಅರ್ಹತೆಯನ್ನು ಹೊಂದುತ್ತಾರೆ. ಅವರಿಗೆ ಆ ಬಗ್ಗೆ ಶಿಕ್ಷಣವನ್ನು ಮೂವತ್ತೈದನೇ ವರ್ಷದವರೆಗೂ ನೀಡಲಾಗುತ್ತದೆ. ಇದರಲ್ಲಿ ಅನುತ್ತೀರ್ಣರಾದವರು ಸೈನಿಕರಾಗಿ ಅಥವಾ ಆಡಳಿತ ಶಾಖೆಗಳಲ್ಲಿ ಕೆಲಸಮಾಡಬಹುದಾಗಿದೆ. ೩೫ ರಿಂದ ೫೦ ವರ್ಷದವರೆಗೂ ಆಡಳಿತಗಾರರಿಗೆ ನಾನಾ ವಿಧದ ಶಿಕ್ಷಣವನ್ನು ನೀಡಲಾಗುತ್ತದೆ. ಆಸೆ

ಆಮಿಷಗಳನ್ನೊಡ್ಡಿ ಆಪತ್ತು ಬರುವಂತೆ ಮಾಡಿ ಅವರ ನಡವಳಿಕೆಯನ್ನು ಪರೀಕ್ಷಿಸ ಲಾಗುತ್ತದೆ. ಐವತ್ತನೇ ವರ್ಷದಲ್ಲಿ ಮಗದೊಂದು ಕಠಿಣ ಪರೀಕ್ಷಾ ಸ್ಥಾನಗಳಿಗೆ ನೇಮಿಸ ಲಾಗುತ್ತದೆ. ಹೀಗೆ ವ್ಯವಸ್ಥಿತ ರೀತಿಯಲ್ಲಿ ವಿದ್ಯಾಭ್ಯಾಸವನ್ನು ಮಾಡಿಸುವುದರಿಂದ ಆದರ್ಶ ರಾಜ್ಯದ ರಚನೆ ಸುಲಭ ಸಾಧ್ಯ ಎಂಬುದು ಪ್ಲೇಟೋರವರ ಅಭಿಪ್ರಾಯವಾಗಿದೆ.

**೫. ಕಾರ್ಯವೈಶಿಷ್ಟತೆ**

ಪ್ಲೇಟೋವಿನ ಆದರ್ಶ ರಾಜ್ಯವು ಪ್ರಾವೀಣ್ಯತೆ ಅಥವಾ ಕಾರ್ಯವೈಶಿಷ್ಟ್ಯತೆಯ ಆಧಾರದ ಮೇಲೆ ವಿಭಜಿತವಾದ ವರ್ಗಸಹಿತ ರಾಜ್ಯವಾಗಿದೆ. ರಾಜ್ಯದ ಜನತೆಯನ್ನು ಮೂರು ವರ್ಗಗಳಲ್ಲಿ ವಿಂಗಡಿಸಿದ್ದಾರೆ. ಆಳುವ ವರ್ಗ, ರಕ್ಷಣಾವರ್ಗ, ಉತ್ಪಾದಕವರ್ಗ, ಈ ವರ್ಗಗಳು ತಮ್ಮ ಕಾರ್ಯಗಳನ್ನು ನಿಷ್ಠೆಯಿಂದ ಮತ್ತು ದಕ್ಷತೆಯಿಂದ ಮಾಡಬೇಕು. ಒಂದು ವರ್ಗದ ಕಾರ್ಯದದಲ್ಲಿ ಬೇರೆ ವರ್ಗದವರು ಹಸ್ತಕ್ಷೇಪ ಮಾಡಬಾರದು. ಈ ರೀತಿ ಅವರವರ ಕಾರ್ಯವನ್ನು ಅವರೇ ನಿರ್ವಹಿಸಿ ಬೇರೆಯವರ ಕಾರ್ಯದಲ್ಲಿ ಹಸ್ತಕ್ಷೇಪ ಮಾಡದಿರುವುದಕ್ಕೆ ನ್ಯಾಯ ಎಂದು ಪ್ಲೇಟೋ ಅಭಿಪ್ರಾಯಪಟ್ಟಿದ್ದಾರೆ. ನ್ಯಾಯ ಎಂಬುದು ಕಾರ್ಯ ವೈಶಿಷ್ಟ್ಯತೆಗೆ ಮಹತ್ವ ನೀಡುತ್ತದೆ. ಇಂತಹ ವೈಶಿಷ್ಟ್ಯತೆಯ ತತ್ವದ ಮೇಲೆ ರಚಿತವಾದ ರಾಜ್ಯವೆ ಆಚರ್ಶ ರಾಜ್ಯ. ಇಲ್ಲಿ ಎಲ್ಲಾ ವ್ಯಕ್ತಿಗಳು ಅವರ ಯೋಗ್ಯತೆಗೆ ತಕ್ಕಂತೆ ಕಾರ್ಯನಿರ್ವಹಿಸಬೇಕೆಂದು ಪ್ಲೇಟೋ ತಿಳಿಸಿದ್ದಾರೆ.

**೬. ಸ್ವಾತಂತ್ರ್ಯ**

ರಾಜ್ಯಕ್ಕೆ ನಿಷ್ಠೆ ತೋರುವುದೇ ನಿಜವಾದ ಸ್ವಾತಂತ್ರ್ಯವೆಂದು ಪ್ಲೇಟೋ ತಿಳಿಸಿದ್ದಾನೆ. ಜನರು ತಮಗೆ ಮನಬಂದತೆ ಸ್ವೇಚ್ಛೆಯಾಗಿ ವರ್ತಿಸುವುದು ಸ್ವಾತಂತ್ರ್ಯವಲ್ಲ. ಆದರ್ಶ ರಾಜ್ಯದಲ್ಲಿ ಆರ್ಥಿಕ ಸಮಾನತೆಗೆ ಯಾವುದೇ ಮಹತ್ವ ನೀಡಿಲ್ಲ. ಉತ್ತಮರಾದವರು ವಿಶೇಷ ಸ್ಥಾನ ಹೊಂದುವುದು ತಪ್ಪಲ್ಲವೆಂದು ಪ್ಲೇಟೋ ಅಭಿಪ್ರಾಯಪಟ್ಟಿದ್ದಾನೆ. ಆದರ್ಶ ರಾಜ್ಯ ದಲ್ಲಿ ಯೋಗ್ಯತೆಗೆ ತಕ್ಕ ಸ್ಥಾನ ದೊರೆಯುತ್ತದೆ.

**ವಿಮರ್ಶೆ**

ಪ್ಲೇಟೋ ಚಿತ್ರಿಸಿರುವ ಆದರ್ಶ ರಾಜ್ಯವು ಕೇವಲ ಕಲ್ಪನಾತ್ಮಕವಾದುದ್ದಾಗಿದೆ. ಇದನ್ನು ವಾಸ್ತವಿಕವಾಗಿ ಕಾರ್ಯರೂಪಕ್ಕೆ ತರಲು ಅಸಾಧ್ಯ ಮತ್ತು ತತ್ವಜ್ಞಾನಿ ಅರಸರ ಆಳ್ವಿಕೆ ಸ್ವಾತಂತ್ರ್ಯದ ಈತನ ವಿಚಾರಗಳು ಪ್ರಜಾಸತ್ತಾತ್ಮಕ ತತ್ವಕ್ಕೆ ವಿರುದ್ಧವಾಗಿವೆ. ಸಮಾಜದ ವರ್ಗೀಕರಣದಿಂದಾಗಿ ಸಮಾಜದಲ್ಲಿ ಗುಂಪುಗಾರಿಕೆ ಹೆಚ್ಚಾಗಿ ಸಮಾಜ ಅಧಃಪತನ ಹೊಂದಬಹುದು. ಈತನ ಸಮತಾವಾದದ ತತ್ವಗಳು ಪ್ರಕೃತಿ ಧರ್ಮಕ್ಕೆ ವಿರುದ್ಧವಾಗಿವೆ. ವರ್ಗಕ್ಕನುಗುಣವಾಗಿ ಕರ್ತವ್ಯವನ್ನು ನಿರ್ಧರಿಸುವುದರಿಂದ ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆ ಕುಂಠಿತವಾಗಬಹುದು.

ಪ್ಲೇಟೋವಿನ ಆದರ್ಶ ರಾಜ್ಯವನ್ನು ಕಲ್ಪನಾರಾಜ್ಯವೆಂದು ಟೀಕಿಸಲಾಗಿದ್ದರೂ ಉತ್ತಮ ರಾಜ್ಯ ಹೇಗಿರಬೇಕೆಂದು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಆದರ್ಶ ರಾಜ್ಯದ ಕಲ್ಪನೆ ರಾಜಕೀಯ

ಧುರೀಣರಿಗೆ ಮತ್ತು ಮುತ್ಸದ್ದಿಗಳಿಗೆ ದಾರಿ ದೀಪದಂತಿದೆ. ಸರ್ವರ ಹಿತ ರಾಜ್ಯದ ಗುರಿಯಾಗಬೇಕು ಎಂಬ ಆಶಯ ಇಲ್ಲಿ ಅಡಕವಾಗಿದೆ.

## ೧.೨ ಅರಿಸ್ಟಾಟಲ್

### ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ರಾಜ್ಯಶಾಸ್ತ್ರದ ಪಿತಾಮಹರೆನಿಸಿ ಖ್ಯಾತಿ ಪಡೆದಿರುವ ಅರಿಸ್ಟಾಟಲ್‌ರವರು ಗ್ರೀಕ್ ದೇಶದ ಸ್ಟಾಗಿರಾ ಎಂಬಲ್ಲಿ ಕ್ರಿ.ಪೂ. ೩೮೪ರಲ್ಲಿ ನಿಕೋಮಾಕಸ್ ಎಂಬ ರಾಜ್ಯವೈದ್ಯನ ಮಗನಾಗಿ ಜನಿಸಿದರು. ತಂದೆಯ ಇಚ್ಛೆಯಂತೆ ಸ್ವಲ್ಪಕಾಲ ವೈದ್ಯಕೀಯ ವೃತ್ತಿಯನ್ನು ಮಾಡಿದ ಮೇಲೆ ತಮ್ಮ ಹದಿನೆಂಟನೇ ವಯಸ್ಸಿನಲ್ಲಿ ಪ್ಲೇಟೋರವರ ಅಕಾಡೆಮಿಯನ್ನು ಸೇರಿದರು. ಇಪ್ಪತ್ತು ವರ್ಷಗಳ ಕಾಲ ಅಕಾಡೆಮಿಯಲ್ಲಿ ಓದಿ ಪ್ಲೇಟೋರವರ ನೆಚ್ಚಿನ ಶಿಷ್ಯರಾದರು. ನಂತರ ಮೆಸಿಡೋನಿಯಾದ ರಾಜಕುಮಾರನಾದ ಅಲೆಗ್ಸ್ಯಾಂಡರ್‌ನಿಗೆ ಶಿಕ್ಷಕನಾಗಿ ಕೆಲಸ ಮಾಡಿದರು. ತದನಂತರ ಅಥೆನ್ಸಿನಲ್ಲಿ ಲೈಸಿಯಂ ಎಂಬ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದರು. ಇದು ಶೈಕ್ಷಣಿಕ ಹಾಗೂ ಸಂಶೋಧನಾ ಕೇಂದ್ರವಾಗಿತ್ತು. ಈ ವಿಶ್ವವಿದ್ಯಾನಿಲಯ ಬಹುಬೇಗ ಪ್ರಖ್ಯಾತವಾಗಿ ಶೈಕ್ಷಣಿಕ ಚಟುವಟಿಕೆಗಳ ಕೇಂದ್ರವಾಯಿತು. ಜೀವಶಾಸ್ತ್ರ, ಮನಃಶಾಸ್ತ್ರ, ತರ್ಕಶಾಸ್ತ್ರ, ನೀತಿಶಾಸ್ತ್ರ, ಭೌತಶಾಸ್ತ್ರ, ರಾಜನೀತಿ ಮುಂತಾದ ವಿಷಯಗಳಲ್ಲಿ ಇವರಿಗೆ ಅಪಾರ ಪಾಂಡಿತ್ಯವಿತ್ತು. ಆಲೆಗ್ಸಾಂಡರ್‌ನ ಮರಣದ ನಂತರ ಅಥೆನ್ಸಿನಲ್ಲಿ ಅಪಾರ ಗಲಭೆ ಉಂಟಾಯಿತು. ಇದರಿಂದ ಇವರು ಅಥೆನ್ಸ್‌ನ್ನು ಬಿಟ್ಟು ಚಾಲಿಸ್‌ನಲ್ಲಿ ವಾಸಿಸಲು ಪ್ರಾರಂಭಿಸಿದರು. ಶತ್ರುಗಳ ಉಪಟಳ ಹೆಚ್ಚಾಗತೊಡಗಿದಾಗ ಕ್ರಿ.ಪೂ. ೩೨೨ರಲ್ಲಿ ವಿಷ ಸೇವನೆಯಿಂದ ಆತ್ಮಹತ್ಯೆ ಮಾಡಿಕೊಂಡರು.

**ಪಾಲಿಟಿಕ್ಸ್** ಎಂಬ ಕೃತಿಯು ಅರಿಸ್ಟಾಟಲ್ ರಾಜಕೀಯಕ್ಕೆ ನೀಡಿರುವ ಮಹತ್ತರ ಕೊಡುಗೆಯಾಗಿದೆ ಮತ್ತು ಅವರನ್ನು ವಿಶ್ವವಿಖ್ಯಾತರನ್ನಾಗಿ ಮಾಡಿದೆ. ರಾಜ್ಯಶಾಸ್ತ್ರವನ್ನು ವೈಜ್ಞಾನಿಕ ದೃಷ್ಟಿಕೋನದಲ್ಲಿ ಅಭ್ಯಾಸ ಮಾಡಿ ಅರಿಸ್ಟಾಟಲ್‌ರವರು ರಾಜ್ಯಶಾಸ್ತ್ರದ ಪಿತಾಮಹರೆನಿಸಿಕೊಂಡಿದ್ದಾರೆ. ಇವರು ಸುಮಾರು ೧೫೮ ರಾಷ್ಟ್ರಗಳ ಸಂವಿಧಾನಗಳ ಬಗ್ಗೆ ಅಧ್ಯಯನ ನಡೆಸಿದರು. **ಆರ್ಗನಾನ್, ಪ್ರೊಟ್ರೆಪ್ಟಿಕಸ್, ಫಿಲೋಸೋಫಿಯಾ** ಇವು ಇವರ ಪ್ರಮುಖ ಕೃತಿಗಳಾಗಿವೆ. ಇವುಗಳಲ್ಲದೆ, ಸಂವಿಧಾನ, ವಿಶ್ಲೇಷಣೆ, ನಾಟಕ, ಜೀವಶಾಸ್ತ್ರ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ, ನೀತಿಶಾಸ್ತ್ರ, ತರ್ಕಶಾಸ್ತ್ರ, ಅಲಂಕಾರಶಾಸ್ತ್ರ ಮುಂತಾದವುಗಳ ಬಗ್ಗೆ ಇವರು ಕೃತಿ ರಚಿಸಿದ್ದಾರೆ.

ಅರಿಸ್ಟಾಟಲ್ ತಮ್ಮ ರಾಜ್ಯಶಾಸ್ತ್ರದ ಮೊದಲನೇ ವಿಭಾಗದಲ್ಲಿ, ಮಾನವನು ಪ್ರಾಣಿಗಿಂತ ಶ್ರೇಷ್ಠ ಮತ್ತು ಅವನು ಸಂಘಜೀವಿ. ಈತನು ಕಾನೂನಿನ ಪ್ರಕಾರ ನಡೆದುಕೊಂಡು ಸರ್ಕಾರದ ನಿಯಂತ್ರಣದಲ್ಲಿರಬೇಕು ಎಂದಿದ್ದಾರೆ. ಅನೇಕ ವಿಧವಾದ ಸಂವಿಧಾನಗಳನ್ನು ಇವರು ಚರ್ಚಿಸಿದ್ದಾರೆ. ಇವರ ಹಿಸ್ಟರಿ ಆಫ್ ಅನಿಮಲ್ಸ್ ಗ್ರಂಥದಲ್ಲಿ ಪ್ರಾಣಿ ಪ್ರಾಣಿಗಳ ನಡುವೆ

ಇರುವ ಸಾಮ್ಯತೆ ಮತ್ತು ವ್ಯತ್ಯಾಸ ಗುರುತಿಸಿ ವರ್ಗೀಕರಣ ಮಾಡಿದ್ದಾರೆ. **ಆನ್ ದ ಪಾರ್ಟ್ಸ್ ಆಫ್** ಅನಿಮಲ್ಸ್, **ಆನ್ ದ ಪ್ರೋಗ್ರೆಸ್ ಆಫ್** ಅನಿಮಲ್ಸ್ ಇವೂ ಸಹ ಇವರ ಕೃತಿಗಳಾಗಿವೆ.

ನಿಕೋಮಾರಿಯನ್ ಎಥಿಕ್ಸ್ ಎಂಬ ಗ್ರಂಥದಲ್ಲಿ ಮನುಷ್ಯನಿಗೆ ಏನು ಒಳ್ಳೆಯದು, ಒಳ್ಳೆತನ ಅಥವಾ ಸಂತೋಷ ಇವನ್ನು ಗುರುತಿಸಬಹುದೆ? ಸ್ನೇಹ ಎಂದರೇನು? ಎಂಬ ತರ್ಕಬದ್ಧವಾದ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಿದರು. ಇವರು ರಾಜ್ಯಶಾಸ್ತ್ರಕ್ಕೂ ಮತ್ತು ನೀತಿಶಾಸ್ತ್ರಕ್ಕೂ ಅನ್ಯೋನ್ಯ ಸಂಬಂಧ ಬೆಳೆಸಿದರು.

**ಆನ್ ಮೊನಾರ್ಕಿ, ಕಾನ್ಸ್‌ಟಿಟ್ಯೂಷನ್ಸ್ ಆನ್ ಕಾಲೊನೀಸ್ ಅಂಡ್ ಆನ್ ಫಿಲಾಸಫಿ** ಇವೂ ಸಹ ಇವರ ಪ್ರಮುಖ ಗ್ರಂಥಗಳಾಗಿವೆ. ಮಧ್ಯಮ ವರ್ಗದ ಜನರ ಹಿತವನ್ನು ಸಾಧಿಸುವ ಸರ್ಕಾರ ಉತ್ತಮ ಎಂದಿದ್ದಾರೆ. ವಿಶಾಲವಾದ ರಾಷ್ಟ್ರ ಉತ್ತಮವಾದ ರಾಷ್ಟ್ರ ಎಂಬುದು ಇವರ ಅಭಿಪ್ರಾಯವಾಗಿದೆ. ಸಮಾಜ ಮತ್ತು ರಾಜ್ಯದಲ್ಲಿ ನೈತಿಕ ಮೌಲ್ಯಗಳಿಗೆ ಹೆಚ್ಚಿನ ಸ್ಥಾನವಿರಬೇಕು. ಮತ್ತು ಪವಿತ್ರವಾದ ರಾಜಕೀಯ ಜೀವನವಿರಬೇಕು. ಉತ್ತಮವಾದ ಶಿಕ್ಷಣ ವ್ಯವಸ್ಥೆ ಇರಬೇಕು. ಮಿತಿಮೀರಿದ ಜನಸಂಖ್ಯೆ ಇರಬಾರದು. ಮತ್ತು ಜನಸಂಖ್ಯೆಯನ್ನು ಹೇಗೆ ನಿಯಂತ್ರಿಸಬೇಕು ಎಂಬುದನ್ನೂ ಕೂಡ ಇವರು ತಿಳಿಸಿದ್ದಾರೆ. ಇವರು ರಾಜಪ್ರಭುತ್ವ ಮತ್ತು ಸರ್ವಾಧಿಕಾರವನ್ನು ವಿರೋಧಿಸಿದ್ದಾರೆ. ರಾಜ್ಯದಲ್ಲಿ ವ್ಯಕ್ತಿಯ ಇಚ್ಛೆಗಿಂತ ವಿವೇಚನಾ ಶಕ್ತಿಗೆ ಹೆಚ್ಚಿನ ಬೆಲೆ ಇರಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

### ಆ. ಅರಿಸ್ಟಾಟಲ್‌ನ ಸರ್ಕಾರಗಳ ವರ್ಗೀಕರಣ

ಅರಿಸ್ಟಾಟಲ್‌ರ ಸರ್ಕಾರದ ವರ್ಗೀಕರಣವು ಪ್ರಮಾಣಾತ್ಮಕ ಮತ್ತು ಗುಣಾತ್ಮಕವಾದ ಎರಡೂ ರೀತಿಯ ಅಂಶಗಳನ್ನು ಒಳಗೊಂಡಿದೆ. ಮೊದಲನೆಯದಾಗಿ, ಅವರ ವರ್ಗೀಕರಣವು ಪ್ರಮಾಣಾತ್ಮಕವಾಗಿದೆ. ಏಕೆಂದರೆ ಒಂದು ಸರ್ಕಾರ ವ್ಯವಸ್ಥೆಯಲ್ಲಿ ರಾಜಕೀಯ ಅಧಿಕಾರವು ಎಷ್ಟು ಜನರ ಕೈಯದಲ್ಲಿದೆ ಎಂಬುದನ್ನು ತಿಳಿಸುತ್ತದೆ. ಎರಡನೆಯದಾಗಿ, ಗುಣಾತ್ಮಕ ವಾಗಿಯೂ ಆಗಿದೆ. ಅಂದರೆ, ಈ ರೀತಿಯ ಸರ್ಕಾರವು ಯಾವ ರೀತಿ ಕಾರ್ಯನಿರ್ವಹಿಸುತ್ತದೆ ಎಂಬುದರ ಆಧಾರದ ಮೇಲೆ ಸರ್ಕಾರದ ಗುಣವನ್ನು ನಿರ್ಧರಿಸುವುದರಿಂದ ಅವರ ಸರ್ಕಾರದ ವರ್ಗೀಕರಣವು ಗುಣಾತ್ಮಕವಾಗಿದೆ.

ಅರಿಸ್ಟಾಟಲ್‌ರು ಸಂವಿಧಾನ ಮತ್ತು ಸರ್ಕಾರಗಳೆರಡೂ ಒಂದೇ ಎಂದು ಭಾವಿಸಿದ್ದರು. ಅವರ ಪ್ರಕಾರ ರಾಜ್ಯದ ಸ್ವರೂಪವು ಸಂವಿಧಾನದಿಂದ ನಿರ್ಧರಿಸಲ್ಪಡುತ್ತದೆ. ಸಂವಿಧಾನ ವೆಂದರೆ ರಾಜ್ಯದಲ್ಲಿನ ಉನ್ನತ ಹುದ್ದೆಗಳನ್ನು ವ್ಯವಸ್ಥಿತಗೊಳಿಸುವ ಸಾಧನವೆಂದು ಅರಿಸ್ಟಾಟಲರು ಹೇಳಿದ್ದಾಗ ಅರಿಸ್ಟಾಟಲ್ ಸಂವಿಧಾನ, ಸರ್ಕಾರ ಮತ್ತು ರಾಜ್ಯಗಳ ನಡುವೆ ಯಾವ ವ್ಯತ್ಯಾಸವನ್ನು ಮಾಡಲಿಲ್ಲ. ವಾಸ್ತವಿಕವಾಗಿ ಸಂವಿಧಾನವೆಂದರೆ ಸರ್ಕಾರ, ರಾಜ್ಯದ ತಿರುಳು ಸಂವಿಧಾನದಲ್ಲಿದೆ ಹಾಗೂ ಸಂವಿಧಾನ ಬದಲಾದರೆ ರಾಜ್ಯವೂ ಬದಲಾಗುತ್ತದೆ ಎಂದು ಹೇಳಿದ್ದಾರೆ.

ಸರ್ಕಾರದ ವರ್ಗೀಕರಣಕ್ಕೆ ಆಳುವವರ ಸಂಖ್ಯೆ ಮತ್ತು ಆಳುವವರ ಉದ್ದೇಶಗಳನ್ನು ಆಧಾರವಾಗಿಟ್ಟು ಕೊಂಡಿದ್ದಾರೆ. ಆಳುವವರ ಉದ್ದೇಶವು ಸಾರ್ವಜನಿಕರ ಹಿತಕ್ಕಾಗಿರಬಹುದು

ಅಥವಾ ಆಳುವವರ ಸ್ವಾರ್ಥ ಹಿತಸಾಧನೆಗಾಗಿರಬಹುದು. ಆಳುವವರು ಜನರ ಹಿತಾಸಕ್ತಿಯನ್ನು ಗಮನಿಸಿ ಸರ್ವರ ಕಲ್ಯಾಣಕ್ಕಾಗಿ ಆಡಳಿತ ನಡೆಸಿದರೆ ಅದೊಂದು ಉತ್ತಮ ಸರ್ಕಾರವೆನಿಸುತ್ತದೆ. ಆಳುವವರು ಕೇವಲ ತಮ್ಮ ಹಿತಾಸಕ್ತಿಯನ್ನೇ ಉದ್ದೇಶವಾಗಿಟ್ಟುಕೊಂಡು ಆಡಳಿತ ನಡೆಸಿದರೆ ಅದೊಂದು ಕೆಟ್ಟ ಸರ್ಕಾರ, ಅಂದರೆ ಉತ್ತಮ ಸರ್ಕಾರದ ವಿಕೃತರೂಪ ಆಗುತ್ತದೆ.

ಅರಿಸ್ಟಾಟಲರು ಪ್ರಮಾಣ ಮತ್ತು ಅದರ ಗುಣದ ಆಧಾರದ ಮೇಲೆ ಆರು ವಿಧದಲ್ಲಿ ಸರ್ಕಾರವನ್ನು ವರ್ಗೀಕರಿಸಿದ್ದಾರೆ.

**೧. ರಾಜಪ್ರಭುತ್ವ (ಮೊನಾರ್ಕಿ)**

ಸರ್ಕಾರದ ಅಧಿಕಾರವು ಒಬ್ಬ ವ್ಯಕ್ತಿಯಲ್ಲಿದ್ದು, ಅಧಿಕಾರವನ್ನು ಹೊಂದಿರುವ ವ್ಯಕ್ತಿಯು ಪ್ರಜೆಗಳ ಹಿತಾಸಕ್ತಿಗೆ ಅನುಗುಣವಾಗಿ ಅವರ ಆಶೋತ್ತರಗಳಿಗೆ ತಕ್ಕಂತೆ ಆಡಳಿತ ನಡೆಸಿದರೆ ಅದನ್ನು ರಾಜಪ್ರಭುತ್ವ ಎಂದು ಕರೆದಿದ್ದಾರೆ.

**೨. ನಿರಂಕುಶ ಪ್ರಭುತ್ವ (ಟಿರನಿ)**

ಅದೇ, ಅಧಿಕಾರ ಹೊಂದಿರುವಂತಹ ವ್ಯಕ್ತಿಯು ಆಡಳಿತವನ್ನು ಜನತೆಯ ಹಿತಾಸಕ್ತಿಗೆ ಬದಲಾಗಿ ತನ್ನ ಹಿತಾಸಕ್ತಿಗೆ ತಕ್ಕಂತೆ ಆಡಳಿತ ನಡೆಸಿದರೆ ಅದನ್ನು ನಿರಂಕುಶ ಪ್ರಭುತ್ವ ಎಂದು ಕರೆದಿದ್ದಾರೆ. ಅಂದರೆ ರಾಜಪ್ರಭುತ್ವದ ಕೆಟ್ಟರೂಪ ನಿರಂಕುಶ ಪ್ರಭುತ್ವ. ರಾಜ ಪ್ರಭುತ್ವವು ಯಾವಾಗ ಜನತೆಯ ಆಶೋತ್ತರಗಳಿಗೆ ವಿರುದ್ಧವಾಗಿ ಆಡಳಿತ ನಡೆಸಲು ಪ್ರಾರಂಭಿಸುತ್ತದೆಯೋ ಆಗ ಅದು ನಿರಂಕುಶ ಪ್ರಭುತ್ವವಾಗುತ್ತದೆ.

**೩. ಗಣ್ಯರ ಅಥವಾ ಶ್ರೀಮಂತರ ಪ್ರಭುತ್ವ (ಅರಿಸ್ಟೋಕ್ರಸಿ)**

ಅಧಿಕಾರವು ಕೆಲವು ವ್ಯಕ್ತಿಗಳ ಹಿಡಿತದಲ್ಲಿದ್ದು, ಅಧಿಕಾರ ಹೊಂದಿರುವ ಕೆಲವು ವ್ಯಕ್ತಿಗಳು ದೇಶದ ಹಿತಕ್ಕಾಗಿ ಆಡಳಿತ ನಡೆಸುತ್ತಿದ್ದರೆ ಅದನ್ನು ಶ್ರೀಮಂತರ ಪ್ರಭುತ್ವ ಎಂದು ಕರೆಯುತ್ತಾರೆ. ಅಧಿಕಾರವನ್ನು ಹೊಂದಿರುವ ಕೆಲವೇ ಶ್ರೀಮಂತರು ಜನತೆಯ ಆಶೋತ್ತರಗಳಿಗೆ ಅನುಗುಣವಾಗಿ ಆಡಳಿತ ನಡೆಸುತ್ತಿದ್ದರೆ, ದೇಶದ ಅಭಿವೃದ್ಧಿಯ ಗುರಿಯನ್ನು ಹೊಂದಿ ಆಡಳಿತ ನಡೆಸುವ ವ್ಯವಸ್ಥೆಯನ್ನು ಶ್ರೀಮಂತರ ಪ್ರಭುತ್ವ ಎಂದಿದ್ದಾರೆ.

**೪. ಅಲ್ಪ ಜನಾಧಿಪತ್ಯ (ಆಲಿಗಾರ್ಕಿ)**

ಈ ಶ್ರೀಮಂತ ಪ್ರಭುತ್ವವು ಜನತೆಯ ಹಿತಾಸಕ್ತಿಯನ್ನು ಕಡೆಗಣಿಸಿ ತನ್ನ ಮನಬಂದಂತೆ ಆಡಳಿತ ನಡೆಸಿದರೆ ಅದನ್ನು ಶ್ರೀಮಂತ ಪ್ರಭುತ್ವದ ಕೆಟ್ಟ ರೂಪವಾದ ಅಲ್ಪ ಜನಾಧಿಪತ್ಯ ಎಂದು ಕರೆದಿದ್ದಾರೆ.

**೫. ಸುವ್ಯವಸ್ಥಿತ ಸರ್ಕಾರ (ಪಾಲಿಟಿ)**

ಪರಮಾಧಿಕಾರವು ಬಹುಜನರ ಹಿಡಿತದಲ್ಲಿದ್ದು ಅವರು ದೇಶದ ಹಿತಕ್ಕಾಗಿ ಆಡಳಿತ ನಡೆಸುತ್ತಿದ್ದರೆ ಅಂತಹ ಸರ್ಕಾರ ಪದ್ಧತಿಯನ್ನು ಪಾಲಿಟಿ ಅಥವಾ ಸುವ್ಯವಸ್ಥಿತ ಸರ್ಕಾರ ಎಂದು ಕರೆದಿದ್ದಾರೆ.

೬. ಪ್ರಜಾಪ್ರಭುತ್ವ (ಡೆಮೊಕ್ರಸಿ)

ಅರಿಸ್ಟಾಟಲ್‌ರವರು ಪಾಲಿಟಿಯ ಕೆಟ್ಟ ರೂಪ ಪ್ರಜಾಪ್ರಭುತ್ವ ಎಂದು ಹೇಳುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕೇವಲ ಬಡವರ ಹಿತವನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅವರ ಅಭಿವೃದ್ಧಿಗೆ ಕಲ್ಯಾಣಕ್ಕೆ ಶ್ರಮಿಸಲಾಗುವುದರಿಂದ ಎಲ್ಲರ ಅಭಿವೃದ್ಧಿಯ ಧ್ಯೇಯವನ್ನು ಗುರಿಯನ್ನಾಗಿ ಹೊಂದಿರುವುದಿಲ್ಲ. ಇದನ್ನು ದೊಂಬಿ ಆಡಳಿತ ವ್ಯವಸ್ಥೆ ಎಂದೂ ಸಹ ಇವರು ಕರೆಯುತ್ತಾರೆ.

ಅರಿಸ್ಟಾಟಲ್‌ರವರು ತಮ್ಮ ಆರು ವಿಧದ ಸರ್ಕಾರದ ವರ್ಗೀಕರಣದಲ್ಲಿ ಪಾಲಿಟಿಯನ್ನು ಅತ್ಯುತ್ತಮವಾದ ಸರ್ಕಾರ ಎಂದು ಕರೆದಿದ್ದಾರೆ. ಏಕೆಂದರೆ ಪಾಲಿಟಿಯಲ್ಲಿ ಮಧ್ಯಮ ವರ್ಗದವರ ಆಳ್ವಿಕೆ ಇರುವುದರಿಂದ ಇದೊಂದು ಉತ್ತಮವಾದ ಸರ್ಕಾರ ಎಂದು ಹೇಳುತ್ತಾರೆ. ಈ ಸರ್ಕಾರವು ಎಲ್ಲರ ಒಳಿತಿಗಾಗಿ ಬಹುಜನರು ಸೇರಿ ಆಡಳಿತ ನಡೆಸುವ ವ್ಯವಸ್ಥೆಯಾಗಿದ್ದರೆ, ಪಾಲಿಟಿಯ ಕೆಟ್ಟ ರೂಪ ಪ್ರಜಾಪ್ರಭುತ್ವ ಎಂದು ಹೇಳುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕೇವಲ ಬಡವರ ಹಿತವನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅವರ ಅಭಿವೃದ್ಧಿಗೆ ಕಲ್ಯಾಣಕ್ಕೆ ಶ್ರಮಿಸಲಾಗುವುದರಿಂದ ಎಲ್ಲರ ಅಭಿವೃದ್ಧಿಯ ಧ್ಯೇಯವನ್ನು ಗುರಿಯನ್ನಾಗಿ ಹೊಂದಿರದ ಪ್ರಜಾಪ್ರಭುತ್ವ ವ್ಯವಸ್ಥೆಯು ಪಾಲಿಟಿಯ ಕೆಟ್ಟ ರೂಪವಾಗುತ್ತದೆ ಎನ್ನುತ್ತಾರೆ. ಯಾವಾಗ ಎಲ್ಲರ ಹಿತಾಸಕ್ತಿಯನ್ನು ಸಾಧಿಸುವ ಗುರಿಯನ್ನು ಹೊಂದದೇ ಕೇವಲ ಸಮಾಜದ ಒಂದು ವರ್ಗದ ಅಭಿವೃದ್ಧಿಯನ್ನು ಮಾತ್ರ ಸಾಧಿಸಲು ಪ್ರಾರಂಭಿಸುತ್ತಾರೋ ಆಗ ಪಾಲಿಟಿಯು ಪ್ರಜಾಪ್ರಭುತ್ವವಾಗುತ್ತದೆ. ಅರಿಸ್ಟಾಟಲ್‌ರವರ ಪ್ರಕಾರ ಅತ್ಯಂತ ಕೆಟ್ಟ ಸರ್ಕಾರ ವ್ಯವಸ್ಥೆಯೆಂದರೆ ಅದು ಪ್ರಜಾಪ್ರಭುತ್ವ. ಆದ್ದರಿಂದ ಪಾಲಿಟಿಯಲ್ಲಿ ಬಹುಜನರು ಅಧಿಕಾರದಲ್ಲಿರುತ್ತಾರೆ. ಈ ಬಹುಜನರು ದೇಶದ ಎಲ್ಲರ ಅಭಿವೃದ್ಧಿಗೆ ಆಡಳಿತ ನಡೆಸುವುದರಿಂದ ಇದೊಂದು ಅತ್ಯುತ್ತಮ ಸರ್ಕಾರ ಎನ್ನುತ್ತಾರೆ. ಉತ್ತಮವಾದ, ನೀತಿವಂತ ನಾದ ಮತ್ತು ಪ್ರಜೆಗಳ ಕಲ್ಯಾಣವನ್ನು ಬಯಸುವ ಒಬ್ಬ ವ್ಯಕ್ತಿಯ ಆಳ್ವಿಕೆ ಅಂದರೆ ರಾಜ ಪ್ರಭುತ್ವವನ್ನು ಅರಿಸ್ಟಾಟಲ್ ಒಪ್ಪಿಕೊಳ್ಳುತ್ತಾನೆ. ಆದರೆ ಅಂತಹ ಸದ್ಗುಣಗಳನ್ನು ಹೊಂದಿರುವ ವ್ಯಕ್ತಿಯು ದೊರಕುವುದು ಅಸಾಧ್ಯವಾದುದರಿಂದ ಅರಿಸ್ಟಾಟಲ್ ಪಾಲಿಟಿಯ ಕಡೆಗೆ ಹೆಚ್ಚಿನ ಒಲವನ್ನು ತೋರಿಸಿದ್ದಾರೆ.

ಅರಿಸ್ಟಾಟಲ್‌ರವರು, ಅದು ಎಂತಹ ಉತ್ತಮ ಸರ್ಕಾರವಾದರೂ ಸಹ ಶಾಶ್ವತವಾಗಿ ಕಾರ್ಯನಿರ್ವಹಿಸಲು ಸಾಧ್ಯವಿಲ್ಲ, ಸರ್ಕಾರದ ಮಾದರಿಗಳು ಸದಾ ಬದಲಾವಣೆಗೆ ಒಳಗಾಗುತ್ತವೆ ಎನ್ನುತ್ತಾರೆ. ಉತ್ತಮ ಸರ್ಕಾರವು ವಿಕೃತ ರೂಪದ ಸರ್ಕಾರಕ್ಕೆ ದಾರಿ ಮಾಡಿ ಕೊಡಬಹುದು. ಒಂದು ಸರ್ಕಾರದ ಪತನವು ಮತ್ತೊಂದು ಹೊಸ ಸರ್ಕಾರದ ಅಸ್ತಿತ್ವಕ್ಕೆ ನಾಂದಿಯಾಗುತ್ತದೆ. ಯಾವುದೇ ಸರ್ಕಾರವು ಶಾಶ್ವತವಾಗಿ ಅಸ್ತಿತ್ವದಲ್ಲಿರದೇ ಕಾಲಕ್ರಮೇಣ ಬದಲಾಗುತ್ತಿರುತ್ತದೆ. ರಾಜ ಪ್ರಭುತ್ವವು ಕ್ರಮೇಣ ನಿರಂಕುಶ ಪ್ರಭುತ್ವವಾಗಿ, ಶ್ರೀಮಂತರ ಪ್ರಭುತ್ವ ಕ್ರಮೇಣ ಅಲ್ಪ ಜನಾಧಿಪತ್ಯವಾಗಿ, ಪಾಲಿಟಿಯು ಕ್ರಮೇಣ ಪ್ರಜಾಪ್ರಭುತ್ವವಾಗಿ,

ಪ್ರಜಾಪ್ರಭುತ್ವವು ಕಾಲಕ್ರಮೇಣ ರಾಜಪ್ರಭುತ್ವವಾಗಿ ಪರಿವರ್ತನೆ ಯಾಗುತ್ತದೆ. ಈ ರೀತಿಯ ಬದಲಾವಣೆಯ ಪ್ರಕ್ರಿಯೆ ಸದಾ ಬರುತ್ತಿರುತ್ತದೆ ಎಂದು ಅರಿಸ್ಟಾಟಲ್ ಹೇಳಿದ್ದಾರೆ. ಇದನ್ನು ಅರಿಸ್ಟಾಟಲ್ ಸರ್ಕಾರಗಳ ಬದಲಾವಣೆಯ ಚಕ್ರಗತಿ ಎಂದು ಕರೆದಿದ್ದಾರೆ.

**ಟೀಕೆಗಳು**

ಅರಿಸ್ಟಾಟಲ್‌ರವರ ಸರ್ಕಾರಗಳ ವರ್ಗೀಕರಣವು ಅನೇಕ ಟೀಕೆಗಳಿಗೆ ಗುರಿಯಾಗಿದೆ.

೧. ಅರಿಸ್ಟಾಟಲ್‌ರ ಸರ್ಕಾರಗಳ ವರ್ಗೀಕರಣವು ಆಧುನಿಕ ಕಾಲಕ್ಕೆ ಅನ್ವಯ ವಾಗುವುದಿಲ್ಲ. ಅರಿಸ್ಟಾಟಲ್‌ನು ಸಂಸದೀಯ, ಅಧ್ಯಕ್ಷೀಯ, ಸಂಯುಕ್ತ ಹಾಗೂ ಅಧ್ಯಕ್ಷೀಯ, ಸಂಯುಕ್ತ ಹಾಗೂ ಏಕಾತ್ಮಕ ರಾಜಪದ್ಧತಿಯ ಬಗ್ಗೆ ಏನನ್ನೂ ತಿಳಿಸಿಲ್ಲ.

೨. ಪ್ರಜಾಪ್ರಭುತ್ವದ ಬಗ್ಗೆ ಅರಿಸ್ಟಾಟಲ್‌ರ ಟೀಕೆಗಳನ್ನು ಒಪ್ಪುವಂತಿಲ್ಲ. ಅರಿಸ್ಟಾಟಲ್ ವಿವರಿಸಿದಂತೆ ಪ್ರಜಾಪ್ರಭುತ್ವವು ಬಹುಸಂಖ್ಯೆಯಲ್ಲಿರುವ ಬಡವರ ಸರ್ಕಾರವಾಗಿರುವುದಿಲ್ಲ. ಅನೇಕ ಶ್ರೀಮಂತ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಅಸ್ತಿತ್ವದಲ್ಲಿದೆ. ಇಂದಿನ ಪ್ರಜಾಪ್ರಭುತ್ವ ಅಸ್ತಿತ್ವದಲ್ಲಿದೆ ಇಂದಿನ ಪ್ರಜಾಪ್ರಭುತ್ವ ಬಡತನವನ್ನು ಆಧಾರವಾಗಿ ಹೊಂದಿಲ್ಲ. ಬದಲಾಗಿ ಸಮಾನತೆಯ ತತ್ವವನ್ನು ಆಧಾರವಾಗಿ ಹೊಂದಿದೆ.

೩. ಅರಿಸ್ಟಾಟಲ್‌ರವರು ರಾಜ್ಯ ಮತ್ತು ಸರ್ಕಾರಗಳ ನಡುವೆ ಯಾವುದೇ ವ್ಯತ್ಯಾಸವನ್ನು ಗುರುತಿಸಿಲ್ಲ. ರಾಜ್ಯಗಳ ವರ್ಗೀಕರಣವನ್ನು ಮಾಡಲು ಹೋಗಿ ಸರ್ಕಾರಗಳ ವರ್ಗೀಕರಣ ವನ್ನು ತಿಳಿಸಿದ್ದಾರೆ. ಆಳುವವರ ಸಂಖ್ಯೆಗೆ ಅನುಗುಣವಾಗಿ ವರ್ಗೀಕರಿಸುವುದು ಸರ್ಕಾರದ ವರ್ಗೀಕರಣವನ್ನು ತಿಳಿಸುತ್ತದೆಯೇ ಹೊರತು, ರಾಜ್ಯದ ವರ್ಗೀಕರಣವನ್ನಲ್ಲ. ಆಧುನಿಕ ಕಾಲದಲ್ಲಿ ರಾಜ್ಯ ಮತ್ತು ಸರ್ಕಾರ ಬೇರೆ ಬೇರೆಯಾಗಿದ್ದು, ಸರ್ಕಾರವು ರಾಜ್ಯದ ಒಂದು ನಿಯೋಗಿ ಅಥವಾ ಸಾಧನ ಎನಿಸಿದೆ.

ಒಂದು ಸರ್ಕಾರದಲ್ಲಿ ಭಾಗವಹಿಸುವ ವ್ಯಕ್ತಿಗಳ ಸಂಖ್ಯೆ ಮತ್ತು ಅದರ ಗುಣದ ಆಧಾರದ ಮೇಲೆ ಸರ್ಕಾರವನ್ನು ವಿಧಗಳನ್ನು ವಿವರಿಸುವ ಅರಿಸ್ಟಾಟಲ್‌ರವರು ತಮ್ಮ ಈ ವಿಂಗಡಣೆಯಲ್ಲಿ ಪಾಲಿಟಿಯನ್ನು ಉತ್ತಮ ಸರ್ಕಾರ ಎಂದು ಹೇಳುತ್ತಾರೆ. ಯಾವುದೇ ಸರ್ಕಾರವು ನಿರಂತರವಾಗಿ ಅಸ್ಥಿತ್ವದಲ್ಲಿ ಇರಲು ಸಾಧ್ಯವಿಲ್ಲ. ಪ್ರತಿಯೊಂದು ಸರ್ಕಾರದ ಕೆಟ್ಟ ಆಡಳಿತವು ಮತ್ತೊಂದು ಹೊಸ ಸರ್ಕಾರದ ಅಸ್ಥಿತ್ವಕ್ಕೆ ನಾಂದಿಯಾಗುತ್ತದೆ. ಈ ಪ್ರಕ್ರಿಯೆಯು ನಿರಂತರವಾಗಿ ನಡೆಯುತ್ತಿರುತ್ತದೆ ಎಂದು ಅರಿಸ್ಟಾಟಲ್ ತಾವು ವಿವರಿಸಿರುವ ಸರ್ಕಾರದ ವರ್ಗೀಕರಣದಲ್ಲಿ ತಿಳಿಸಿದ್ದಾರೆ.

## ೧.೩ ಕೌಟಿಲ್ಯ

### ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಪ್ರಾಚೀನ ಭಾರತದ ರಾಜನೀತಿಜ್ಞರಲ್ಲಿ ಕೌಟಿಲ್ಯ ಅಗ್ರಗಣ್ಯನು. ಈತನನ್ನು ಪ್ರಾಚೀನ ಪಾಶ್ಚಾತ್ಯ ರಾಜ್ಯಶಾಸ್ತ್ರಜ್ಞನೂ, ರಾಜ್ಯಶಾಸ್ತ್ರದ ಪಿತಾಮಹನೂ ಆದ ಅರಿಸ್ಟಾಟಲ್‌ಗೆ

ಸಮೀಕರಿಸಲಾಗಿದೆ. ಆತನನ್ನು ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರದ ಪಿತಾಮಹ ಎಂದೂ ಪರಿಗಣಿಸಲಾಗಿದೆ. ಆತನು ಕೇವಲ ರಾಜ್ಯಶಾಸ್ತ್ರಜ್ಞನಲ್ಲದೆ ರಾಜತಂತ್ರ ನಿಪುಣನೂ ಆಗಿದ್ದನು. ರಾಜ್ಯದ ಮತ್ತು ರಾಜ್ಯಾಡಳಿತದ ಬಗ್ಗೆ ಕೌಟಿಲ್ಯ ರಚಿಸಿದ **ಅರ್ಥಶಾಸ್ತ್ರ**ವು ಒಂದು ಅತ್ಯುತ್ಕೃಷ್ಟ ಗ್ರಂಥವಾಗಿದೆ. ಈತನ ಅರ್ಥಶಾಸ್ತ್ರವನ್ನು ಮಧ್ಯಕಾಲೀನ ರಾಜ್ಯಶಾಸ್ತ್ರಜ್ಞರಾದ ಮೆಕೆವೆಲ್ಲಿಯ 'ದ ಪ್ರಿನ್ಸ್' ಗ್ರಂಥಕ್ಕೆ ಹೋಲಿಸಲಾಗಿದೆ. ಈತನು ಕೇವಲ ರಾಜನೀತಿಜ್ಞ ಮಾತ್ರವಾಗಿರದೆ ರಾಜತಂತ್ರ ನಿಪುಣನೂ ಆಗಿದ್ದನು. ಕೌಟಿಲ್ಯ ಅರ್ಥಶಾಸ್ತ್ರ ಬೆಳಕಿಗೆ ಬಂದ ಮೇಲೆ, ಪ್ರಾಚೀನ ಭಾರತೀಯರ ರಾಜಕೀಯ ಜ್ಞಾನದ ವಿಚಾರದಲ್ಲಿ ಪಾಶ್ಚಾತ್ಯ ರಾಜಕೀಯ ಚಿಂತಕರಿಗಿದ್ದ ತಪ್ಪು ಅಭಿಪ್ರಾಯಗಳು ತೊಲಗಿ, ಭಾರತೀಯರೂ ಧರ್ಮ, ತತ್ವಶಾಸ್ತ್ರದಂತೆ ರಾಜಕೀಯ ದಲ್ಲೂ ಆಸಕ್ತಿ ಹೊಂದಿದ್ದರು ಎಂಬ ಸ್ಪಷ್ಟ ಅಭಿಪ್ರಾಯಕ್ಕೆ ಬರುವಂತಾಯಿತು. ಹಾಗೂ ಕೌಟಿಲ್ಯನ ಅರ್ಥಶಾಸ್ತ್ರ ಇಂದಿಗೂ ಸಹ ರಾಜ್ಯಶಾಸ್ತ್ರಕ್ಕೆ ಇರುವ ಮೂಲಾಧಾರಗಳಲ್ಲಿ ಅತ್ಯಂತ ಪ್ರಮುಖಕವಾದ ಗ್ರಂಥಗಳಲ್ಲಿ ಇದೂ ಸಹ ಒಂದೆಂದು ಪರಿಗಣಿಸಲ್ಪಟ್ಟಿದೆ. ಕೌಟಿಲ್ಯನ ವಿಚಾರ ಲಹರಿ ಮತ್ತು ವಿದ್ವತ್ತನ್ನು ಮನ್ನಿಸಿಯೇ ಬಹಳಷ್ಟು ವಿದ್ವಾಂಸರು ಈತನನ್ನು 'ಭಾರತದ ಮೆಕೆವೆಲ್ಲಿ' ಎಂದು ಪ್ರಶಂಸಿಸಿದ್ದಾರೆ.

ಪ್ರಾಚೀನ ಭಾರತದ ಪ್ರಖ್ಯಾತ ರಾಜತಂತ್ರ ನಿಪುಣನಾದ ಕೌಟಿಲ್ಯನ ವಂಶಸ್ಥರು, ಬದುಕಿದ್ದ ಕಾಲ, ಈತ ರಚಿಸಿದನೆಂದು ಹೇಳಲಾದ ಅರ್ಥಶಾಸ್ತ್ರದ ಬಗ್ಗೆ ನಿಖರವಾದ ಮಾಹಿತಿಗಳಿಗಿಂತ ಊಹಪೋಹಗಳೇ ಹೆಚ್ಚಾಗಿವೆ. ೧೯೦೫ರಲ್ಲಿ ತಂಜಾವೂರಿನ ಪಂಡಿತರೊಬ್ಬರು "ಅರ್ಥಶಾಸ್ತ್ರ" ಎಂಬ ಕೈಬರಹದ ಹಸ್ತಪ್ರತಿಯನ್ನು ಮೈಸೂರಿನ ಓರಿಯಂಟಲ್ ಲೈಬ್ರರಿಯ ಗ್ರಂಥಾಲಯ ಅಧಿಕಾರಿಯಾದ ಡಾ. ಆರ್. ಶಾಮಾಶಾಸ್ತ್ರಿಯವರಿಗೆ ನೀಡಿದರು. ಇವರು ಇದನ್ನು ಇಂಗ್ಲೀಷ್‌ಗೆ ಅನುವಾದಿಸಿ ೧೯೧೫ರಲ್ಲಿ ಪ್ರಕಟಿಸಿದರು. ತದನಂತರ ಡಾ. ಟಿ. ಶಾಸ್ತ್ರಿಯವರು ಪಂಜಾಬಿನ ಸಂಸ್ಕೃತ ಮಾಲೆಯಲ್ಲಿ ಮತ್ತೊಂದು ಪರಿಷ್ಕೃತ ಮುದ್ರಣವನ್ನು ಹೊರತಂದರು. ಕ್ರಮೇಣವಾಗಿ ಇಂಗ್ಲೀಷ್, ಫ್ರೆಂಚ್, ಜರ್ಮನ್ ಇನ್ನೂ ಹಲವಾರು ಭಾಷೆಗಳಲ್ಲಿ ಕೌಟಿಲ್ಯ ನನ್ನು ಕುರಿತು ಅನೇಕ ವಿಮರ್ಶಾತ್ಮಕ ಗ್ರಂಥಗಳು ಬೆಳಕಿಗೆ ಬಂದವು.

ಕೌಟಿಲ್ಯನ ಬಗ್ಗೆ ಯಾವುದನ್ನೂ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಆದರೂ ಈತ ತಕ್ಷಶಿಲ ಎಂಬಲ್ಲಿ ಜನಿಸಿದನು. ಆಗ ವಿಶ್ವವಿಖ್ಯಾತವಾಗಿದ್ದ ನಳಂದ ವಿಶ್ವವಿದ್ಯಾಲಯದಲ್ಲಿ ಕೌಟಿಲ್ಯ ವಿದ್ಯಾಭ್ಯಾಸ ಮಾಡಿದನು ಹಾಗು ಈತ ತಕ್ಷಶಿಲೆಯ ಬ್ರಾಹ್ಮಣನೆಂಬುದಕ್ಕೆ ಕೆಲವು ಆಧಾರಗಳಿವೆ. ಈತನು ನಂದವಂಶದ ನವನಂದರನ್ನು ನಿರ್ಮೂಲನ ಮಾಡಿ ನಂದವಂಶದ ಕೊನೆಯ ರಾಜನನ್ನು ಸಿಂಹಾಸನದಿಂದ ಉರುಳಿಸಿ ಚಂದ್ರಗುಪ್ತನಿಂದ ರಾಜ್ಯಸ್ಥಾಪನೆ ಮಾಡಿಸಿದನೆಂದು ಹೇಳಲಾಗಿದೆ. ಇದೇ ಅಭಿಪ್ರಾಯವನ್ನು ವಿಷ್ಣುಪುರಾಣ, ಕಮಾಂಡಕನ ನೀತಿಸಾರ, ಕಾಮಂದಕ, ದಂಡಿಯ ದಶಕುಮಾರ ಚರಿತ್ರೆಗಳೂ ಸಹ ಇದೇ ಅಭಿಪ್ರಾಯ ಬರುವಂತೆ ಹೇಳಿದ್ದಾರೆ.

ಕೌಟಿಲ್ಯನ ಅರ್ಥಶಾಸ್ತ್ರ ಕ್ರಿ. ಪೂ. ೩೨೧ ರಿಂದ ೩೦೦ರ ಅವಧಿಯಲ್ಲಿ ರಚಿತವಾಗಿರ ಬಹುದು ಎಂದು ಅಂದಾಜಿಸಲಾಗಿದೆ. ಆದ್ದರಿಂದ ಕೌಟಿಲ್ಯ ಆ ಕಾಲದಲ್ಲೇ ಬದುಕಿದ್ದ

ಎಂಬುದನ್ನು ತಿಳಿಯಬಹುದು. ಚಂದ್ರಗುಪ್ತನನ್ನು ಮಗದ ರಾಜ್ಯದ ರಾಜನನ್ನಾಗಿ ಮಾಡಿ ಯಶಸ್ವಿಯಾದನು ಮತ್ತು ಚಂದ್ರಗುಪ್ತನ ಆಸ್ಥಾನದ ಮಂತ್ರಿಯಾಗಿದ್ದನು ಎಂಬುದನ್ನು ಸಾಬೀತುಪಡಿಸಲು ಕೆಲವು ಆಧಾರಗಳು ದೊರೆತಿವೆ. ಈತನು ಆಡಳಿತದಲ್ಲಿ ಹಲವಾರು ಚಿಂತಕರ ತಂತ್ರಗಳನ್ನು ಬಳಸಿರುವುದರಿಂದ ಕೌಟಿಲ್ಯ ಎಂಬ ಹೆಸರು ಬಂದಿರಬಹುದು ಎಂದು ಹಲವಾರು ಚಿಂತಕರು ಅಭಿಪ್ರಾಯ ಪಟ್ಟಿದ್ದಾರೆ. ಚಂದ್ರಗುಪ್ತನ ಮೌರ್ಯ ಸಾಮ್ರಾಜ್ಯದ ಕಾಲವು ಸುಮಾರು ಕ್ರಿ. ಪೂ. ೪ನೇ ಶತಮಾನದ್ದು ಎಂದು ಇತಿಹಾಸಕಾರರು ಅಭಿಪ್ರಾಯ ಪಡುವುದರಿಂದ ಅವನ ಸಮಕಾಲೀನದ ಚಾಣಕ್ಯನ ಕಾಲವು ಕ್ರಿ. ಪೂ. ೪ನೇ ಶತಮಾನವೆಂದು ಹೇಳಬಹುದಾಗಿದೆ. ಆದ್ದರಿಂದ ಕೌಟಿಲ್ಯ ಕೇವಲ ಊಹಾಪೋಹ ವ್ಯಕ್ತಿಯಾಗಿರದೆ ಚಂದ್ರಗುಪ್ತನ ಕಾಲದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದಿದ್ದ ವ್ಯಕ್ತಿಯಾಗಿದ್ದನು ಎಂದು ಹೇಳಬಹುದಾಗಿದೆ.

ಇನ್ನೂ ಹಲವು ಇತಿಹಾಸಕಾರರು ಈತನ ನಾಮಾಂಕಿತದ ಬಗ್ಗೆ ತಮ್ಮದೇ ಆದ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕುಚೇಲನೆಂಬ ಗೋತ್ರ ಪ್ರವರ್ತಕ ವಂಶದಲ್ಲಿ ಹುಟ್ಟಿದ್ದರಿಂದ ಇವನ ಹೆಸರು ಕೌಟಿಲ್ಯನೆಂದು, ಚಣಕ ದೇಶದಲ್ಲಿ ಹುಟ್ಟಿದ್ದರಿಂದ ಚಾಣಕ್ಯನೆಂದು ಮತ್ತು ಇವನಿಗೆ ತಂದೆ-ತಾಯಿಗಳಿಟ್ಟ ಹೆಸರು ವಿಷ್ಣುಗುಪ್ತನೆಂದು ಇರಬಹುದು ಎಂದು ಡಾ. ಗಣಪತಿ ಶಾಸ್ತ್ರೀಯವರು ಅಭಿಪ್ರಾಯ ಪಟ್ಟಿದ್ದಾರೆ ಹಾಗೂ ಕಾಮಾಂಡಕನ ನೀತಿಸಾರದ "ಜಯ ಮಂಗಲ" ಎಂಬ ವ್ಯಾಖ್ಯಾನವು ಸಹ ವಿಷ್ಣುಗುಪ್ತನಿಗೆ ಕೌಟಿಲ್ಯನೆಂದು ಗೋತ್ರ ನಿಮಿತ್ತವಾದ ಹೆಸರಿತ್ತು ಎಂದು ಸ್ಪಷ್ಟವಾಗಿ ಹೇಳುತ್ತದೆ.

ಕೌಟಿಲ್ಯನನ್ನು ಚಾಣಕ್ಯ, ವಿಷ್ಣುಗುಪ್ತ ಎಂಬುದಾಗಿಯೂ ಕರೆಯಲಾಗುವುದು. ಇವನ ಅರ್ಥಶಾಸ್ತ್ರದ ಗ್ರಂಥವು ಅಧಿಕಾರವನ್ನು ಪಡೆಯುವುದು ಹೇಗೆ? ಅದನ್ನು ಉಳಿಸಿಕೊಳ್ಳುವುದು ಹೇಗೆ? ಎಂಬುದನ್ನು ತಿಳಿಸುವಂಥದ್ದಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರ ಕೇಂದ್ರ ಮತ್ತು ಸ್ಥಳೀಯ ಆಡಳಿತ, ವಿದೇಶಾಂಗ ನೀತಿ ಮತ್ತು ದೇಶೀಯ ನೀತಿ, ಸಿವಿಲ್ ಮತ್ತು ಕ್ರಿಮಿನಲ್ ಕಾಯ್ದೆ, ಯುದ್ಧಕಲೆ ಇವುಗಳ ಬಗ್ಗೆ ಸುದೀರ್ಘ ಮಾಹಿತಿಯನ್ನು ನೀಡುವಲ್ಲಿ ತನ್ನದೇ ಆದ ಛಾಪನ್ನು ಮೂಡಿಸಿಕೊಂಡಿದೆ. ರಾಜ್ಯಕ್ಕೆ ಸಂಬಂಧಿಸಿದ ನಿಯಮಗಳು, ತತ್ವಗಳು ಕೌಟಿಲ್ಯನ ಅರ್ಥ ಸಂಬಂಧಿಸಿದ ನಿಯಮಗಳು, ತತ್ವಗಳು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಒಂದು ವಿಶಿಷ್ಟ ರೀತಿಯಲ್ಲಿ ಬಳಕೆಯಾಗಿದೆ.

ಸಾಮಾನ್ಯವಾಗಿ ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟ ಹಾಗೆ ನೀತಿ ನಿರೂಪಣೆ ಮಾಡುವಾಗ ರಾಜನೀತಿಜ್ಞರು ಪ್ರಾಯೋಗಿಕ ವಿಧಾನವನ್ನು ಬಳಸುವುದುಂಟು. ಆದರೆ ಚಾಣಕ್ಯ ಪ್ರಾಯೋಗಿಕ ವಿಧಾನದ ಜೊತೆಗೆ ತನ್ನ ವಾದವನ್ನು ಸಮರ್ಥಿಸಲು ಕೆಲವು ಹಿಂದಿನ ಐತಿಹಾಸಿಕ ಘಟನೆಗಳನ್ನು ಬಳಸಿಕೊಂಡಿದ್ದಾನೆ, ರಾಜ್ಯದ ಕಾನೂನು ವ್ಯವಸ್ಥೆಗೆ ಸಂಬಂಧಿಸಿದಂತೆ ನಾಲ್ಕು ಅಂಶಗಳಿಗೆ ಮಹತ್ವದ ಸ್ಥಾನ ನೀಡಿದ್ದಾನೆ. ಅವುಗಳೆಂದರೆ ಧರ್ಮ, ಅರ್ಥ, ನ್ಯಾಯ ಮತ್ತು ವ್ಯವಹಾರ. ರಾಜನೂ ಸಹ ಆಡಳಿತದ ಸಿವಿಲ್ ಮತ್ತು ಕ್ರಿಮಿನಲ್ ಕಾಯ್ದೆಗಳಿಗೆ ಒಳಪಡಿಸಬೇಕು ಎಂದು ಹೇಳುವುದರ ಮೂಲಕ ಕಾನೂನಿನ ಆಳ್ವಿಕೆಯನ್ನು ಬೆಂಬಲಿಸಿದ್ದಾರೆ.

ಒಟ್ಟಿನಲ್ಲಿ ಕೌಟಿಲ್ಯನ ಜೀವನ, ಹೆಸರು ಇವುಗಳಿಗಿಂತ ಪ್ರಮುಖವಾಗಿ ಆತನು ರಾಜ್ಯಶಾಸ್ತ್ರಕ್ಕೆ ನೀಡಿದ ಕೊಡುಗೆಯನ್ನು ನಾವು ಗಮನಿಸಲೇಬೇಕು ಮತ್ತು ಆತನ ಅರ್ಥಶಾಸ್ತ್ರ ಗ್ರಂಥವು ಅವಿಸ್ಮರಣೀಯ ಗ್ರಂಥವಾಗಿದೆ.

### ಆ. ಸಪ್ತಾಂಗ ಸಿದ್ಧಾಂತ

ಪಾಶ್ಚಾತ್ಯ ರಾಜ್ಯಶಾಸ್ತ್ರಜ್ಞರು ಜನಸಂಖ್ಯೆ, ಭೂಪ್ರದೇಶ, ಸರ್ಕಾರ ಮತ್ತು ಪರಮಾಧಿಕಾರ ಎಂದು ರಾಜ್ಯದ ನಾಲ್ಕು ಮೂಲಾಂಶಗಳನ್ನು ಗುರುತಿಸಿದ್ದಾರೆ. ಆದರೆ ಕೌಟಿಲ್ಯನು ರಾಜ್ಯಕ್ಕೆ ಅಗತ್ಯವಾದ ಏಳು ಮೂಲಾಂಶಗಳನ್ನು ಗುರುತಿಸಿದ್ದಾನೆ. ಅವು ಯಾವುವೆಂದರೆ:

ಸ್ವಾಮಿ, ಅಮಾತ್ಯ, ಜನಪದ, ದುರ್ಗ, ಕೋಶ, ಸೈನ್ಯ, ಮಿತ್ರ ಇವುಗಳನ್ನು ಕೌಟಿಲ್ಯನ ಸಪ್ತಾಂಗ ಸಿದ್ಧಾಂತವೆಂದು ಕರೆಯಲಾಗಿದೆ. ಈ ಅಂಗಗಳೆಲ್ಲವೂ ರಾಜ್ಯದ ಅಸ್ತಿತ್ವಕ್ಕೆ ಮತ್ತು ಏಳಿಗೆಗೆ ಮುಖ್ಯವಾಗಿವೆ. ರಾಜನೊಬ್ಬನಿಂದಲೇ ಸರ್ಕಾರವನ್ನು ನಡೆಸಲು ಸಾಧ್ಯವಿಲ್ಲ. ಒಂದೇ ಚಕ್ರದಿಂದ ಬಂಡಿಯನ್ನು ಓಡಿಸುವುದು ಹೇಗೆ ಅಸಾಧ್ಯವೋ ಹಾಗೇ ರಾಜ್ಯವೆಂಬ ಬಂಡಿಯನ್ನು ರಾಜನೊಬ್ಬನಿಂದಲೇ ನಡೆಸಲು ಅಸಾಧ್ಯ. ಆದುದರಿಂದ ರಾಜ್ಯಾಡಳಿತದಲ್ಲಿ ಏಳು ಅಂಶಗಳು ಅತ್ಯವಶ್ಯಕವಾಗಿವೆ.

### ೧. ಸ್ವಾಮಿ ಅಥವಾ ರಾಜ

ಕೌಟಿಲ್ಯನ 'ಸ್ವಾಮಿ' ಎಂಬ ಕಲ್ಪನೆಯನ್ನು ನಾವು ರಾಜನಿಗೆ ಹೋಲಿಸಬಹುದು. ರಾಜ್ಯದ ಸಪ್ತಾಂಗಗಳಲ್ಲಿ ರಾಜನು ಅತ್ಯಂತ ಶ್ರೇಷ್ಠಸ್ಥಾನ ಹೊಂದಿರುತ್ತಾನೆ. ರಾಜನು ರಾಜ್ಯದ ಆತ್ಮ. ರಾಜನೇ ಸರ್ಕಾರ. ಆತನು ರಾಜ್ಯದ ಆಧಾರ ಸ್ತಂಭ. ರಾಜ್ಯದ ಪರಮಾಧಿಕಾರ ಹೊಂದಿದ ಏಕೈಕ ವ್ಯಕ್ತಿ. ರಾಜನು ದಕ್ಷನಾಗಿರಬೇಕು. ರಾಜ್ಯದ ಐಕ್ಯತೆ ಮತ್ತು ಸಮಗ್ರತೆಗೆ ರಾಜನೇ ಕಾರಣನಾಗಿರುತ್ತಾನೆ. ಪ್ರಜೆಗಳ ಕಲ್ಯಾಣ, ಆರ್ಥಿಕ ಪ್ರಗತಿ, ನೈತಿಕತೆ ಇವೆಲ್ಲಾ ನಿರ್ವಹಿಸಲು ರಾಜನಿಂದ ಮಾತ್ರ ಸಾಧ್ಯ. ರಾಜನು ತನ್ನ ಉತ್ತಮ ನಡವಳಿಕೆಯ ಮೂಲಕ ಎಲ್ಲರಿಗೂ ಆದರ್ಶಪ್ರಾಯವಾಗಿಬೇಕು.

ರಾಜನು ಸದಾ ಪ್ರಜೆಗಳ ಹಿತದ ಬಗ್ಗೆ ಚಿಂತನೆ ಮಾಡಬೇಕು. ರಾಜ್ಯ ಹಾಗೂ ಸಂಪತ್ತುಗಳಿಗೆ ರಾಜನು ಒಡೆಯನಾಗಿರುತ್ತಾನೆ. ರಾಜ್ಯರಕ್ಷಣೆ, ರಾಜ್ಯ ವಿಸ್ತರಣೆ ಹಾಗೂ ಅದರ ಆಳ್ವಿಕೆ ಇವು ರಾಜತ್ವದ ಧ್ಯೇಯಗಳಾಗಿವೆ. ರಾಜ್ಯದ ಕಾರ್ಯಭಾರದ ಕಾಲದಲ್ಲಿ ನ್ಯಾಯಾನ್ಯಾಯಾಗಳ ಬಗ್ಗೆ ಗಮನ ಇಟ್ಟಿರಬೇಕು. ಇಲ್ಲದ್ದನ್ನು ಸಂಪಾದಿಸುವುದು, ಸಂಪಾದಿಸಿದ್ದನ್ನು ಉಳಿಸಿಕೊಳ್ಳುವುದು, ಉಳಿಸಿದ್ದನ್ನು ಬೆಳೆಸುವುದು, ಬೆಳೆಸಿದ್ದನ್ನು ಹಂಚುವುದು ಇವುಗಳನ್ನು ರಾಜನು ರಕ್ಷಿಸಬೇಕು. ಪ್ರಜೆಗಳ ಕಷ್ಟ-ಕಾರ್ಪಣ್ಯಗಳಿಗೆ ಗಮನ ಕೊಡದಿದ್ದರೆ ರಾಜನ ಬಗ್ಗೆ ಪ್ರಜೆಗಳಲ್ಲಿ ಅತೃಪ್ತಿ ಮನೋಭಾವನೆ ಉಂಟಾಗುತ್ತದೆ. ಪ್ರಜೆಗಳ ಕಲ್ಯಾಣವೇ ತನ್ನ ಕಲ್ಯಾಣವೆಂದು ಭಾವಿಸಿ ರಾಜ್ಯಾಡಳಿತ ನಡೆಸಬೇಕು.

ಒಟ್ಟಿನಲ್ಲಿ, ರಾಜನು ಯುಕ್ತಾಯುಕ್ತತೆ ಉಳ್ಳವನೂ, ವಿನಯವಂತನೂ ಆಗಿರಬೇಕು. ರಾಜನು ಸಪ್ತಾಂಗಗಳ ಮೇಲ್ವಿಚಾರಣೆ, ಪ್ರಜಾಕ್ಷೇಮ, ಆರ್ಥಿಕೋನ್ನತಿ, ಕಲೆ, ಸಾಹಿತ್ಯದ

ಅಭಿವೃದ್ಧಿ, ಧರ್ಮ ಮತ್ತು ನ್ಯಾಯ ಪರಿಪಾಲನೆ ಮುಂತಾದವು ಇವನ ಕರ್ತವ್ಯಗಳಾಗಿವೆ. ರಾಜನೇ ಎಲ್ಲಾ ರೀತಿಯ ಅಧಿಕಾರಿಗಳ ನೇಮಕಾಧಿಕಾರಿಯಾಗಿರುತ್ತಾನೆ.

**೨. ಅಮಾತ್ಯ ಮಂತ್ರಿ**

ಸಪ್ತಾಂಗದಲ್ಲಿ ರಾಜನ ನಂತರದ ಸ್ಥಾನ ಮಂತ್ರಿಗೆ ಸೇರುತ್ತದೆ. ಮಂತ್ರಿಯು ಅದೇ ದೇಶಕ್ಕೆ ಸೇರಿದವನಾಗಿರುತ್ತಾನೆ. ಮಂತ್ರಿಯು ರಾಜನಲ್ಲಿ ಅಪಾರ ನಿಷ್ಠೆಯನ್ನು ಹೊಂದಿರಬೇಕು. ಆಡಳಿತದ ಸಾಧಕ-ಬಾಧಕಗಳನ್ನು ಗಮನಿಸಿ ಮಂತ್ರಿಯು ರಾಜನಿಗೆ ಸಲಹೆ ಸೂಚನೆಗಳನ್ನು ನೀಡಬೇಕು. ಮಂತ್ರಿಯು ರಾಜನಿಗೆ ಕಣ್ಣು-ಕಿವಿ ಇದ್ದಂತೆ. ರಾಜನು ಯಾವುದೇ ನಿರ್ಧಾರಗಳನ್ನು ತೆಗೆದುಕೊಳ್ಳುವ ಮುನ್ನ ಮಂತ್ರಿಗಳೊಡನೆ ಸಮಾಲೋಚನೆ ಮಾಡಬೇಕು. ಮಂತ್ರಿಗಳನ್ನು ಆಯ್ಕೆ ಮಾಡುವಾಗ ಕೆಲವೊಂದು ನಿಯಮಗಳನ್ನು ಪಾಲಿಸಬೇಕು. ಧರ್ಮ, ಅರ್ಥ, ಭಯ ಹಾಗೂ ಕಾಮವನ್ನು ಗೆದ್ದವರನ್ನು ಮಾತ್ರ ಮಂತ್ರಿಯನ್ನಾಗಿ ಮಾಡಿಕೊಳ್ಳಬೇಕು.

ಇವರಲ್ಲಿ ಎರಡು ವರ್ಗದವರಿರುತ್ತಾರೆ. ಮೊದಲನೇ ವರ್ಗವೆಂದರೆ ಒಳಮಂಡಳಿ, ಇದರಲ್ಲಿ ಪ್ರಧಾನಮಂತ್ರಿ, ಪುರೋಹಿತ, ಸೇನಾಧಿಪತಿ ಮತ್ತು ಯುವರಾಜ ಇವರನ್ನೆಲ್ಲಾ ಒಳಗೊಂಡಿರುತ್ತದೆ. ಎರಡನೇ ವರ್ಗವೆಂದರೆ ಹೊರಮಂಡಲಿ, ಇದರಲ್ಲಿ, ಇತರ ಅಮಾತ್ಯರು (ಮಂತ್ರಿಗಳು), ದೌವಾರಿಕಾ (ಅರಮನೆ ಮೇಲ್ವಿಚಾರಕ), ಅಂತರ್ವಂಶಿಕ (ರಾಜನ ಅಂತಪುರ ಮೇಲ್ವಿಚಾರಕ), ಪ್ರಾಶಸ್ತಾ, ಸನ್ನಿದಾತ (ಉಗ್ರಾಣಾಧಿಕಾರಿ), ಪೌರ ಮತ್ತು ಸಮೂಹತ್ರ (ಜನಪದಾಧಿಕಾರಿ) ಇರುತ್ತಾರೆ. ಮಂತ್ರಿಯಾದವನು ದೃಢಚಿತ್ತ, ಶೀಲವಂತ, ಸಂಪ್ರದಾಯ ನಿಷ್ಠ, ದಕ್ಷ ಮತ್ತು ವಾಗ್ಮಿಯಾಗಿರಬೇಕು. ರಾಜನನ್ನು ಕೆಟ್ಟ ಹವ್ಯಾಸಗಳಿಂದ ದೂರವಿರಿಸ ಬೇಕು. ಶತ್ರುಗಳಿಂದ ಒಳಸಂಚಿಗೆ, ಮೋಸ ಮತ್ತು ಕುಟಿಲೋಪಾಯಗಳಿಗೆ ಒಳಗಾಗದಂತೆ ರಾಜನನ್ನು ಮಂತ್ರಿಯಾದವನು ರಕ್ಷಿಸಬೇಕು. ರಾಜ್ಯಾಡಳಿತದಲ್ಲಿ ಮಂತ್ರಿಗಳ ಜವಾಬ್ದಾರಿ ಅತ್ಯಂತ ಗುರುತರವಾದುದಾಗಿದೆ.

**೩. ಜನಪದ**

ಕೌಟಿಲ್ಯನ ಪ್ರಕಾರ ಜನಪದವೆಂದರೆ ಭೂಪ್ರದೇಶ ಮತ್ತು ಜನಸಂಖ್ಯೆಗಳೆರಡನ್ನೂ ಒಳಗೊಳ್ಳುತ್ತದೆ. ಹಸುವಿಲ್ಲದೆ ಹಾಲಿಲ್ಲ ಎನ್ನುವಂತೆ, ಜನಪದವಿಲ್ಲದೆ ರಾಜನೂ ಇರುವುದಿಲ್ಲವೆಂದು ಕೌಟಿಲ್ಯನು ತಿಳಿಸಿದ್ದಾನೆ. ಜನಪದದ ಪ್ರಗತಿ ಮತ್ತು ಅಭ್ಯುದಯಕ್ಕೆ ರಾಜನು ಶ್ರಮಿಸಬೇಕು ಮತ್ತು ಅವರ ಪ್ರಗತಿಗೆ ಮಾರಕವಾಗದ ಶಾಸನಗಳನ್ನು ರಚಿಸಬೇಕು. ಇಲ್ಲವಾದರೆ ಜನರು ಉದ್ರೇಕಗೊಂಡು ರಾಜನ ವಿರುದ್ಧ ದಂಗೆ ಏಳುತ್ತಾರೆ. ಜನಪದವನ್ನು ಕೌಟಿಲ್ಯನು ವಿವಿಧ ಪ್ರಾದೇಶಿಕ ವಿಭಾಗಗಳಾಗಿ ವಿಂಗಡಿಸಿದ್ದಾನೆ. ಗ್ರಾಮ, ಸಂಗ್ರಹಣ, ಬಾರ್ವಪಿತ, ದ್ರೋಣಾಖ ಮತ್ತು ಸ್ಥಾನೀಯ. ಇವು ರಾಜಕೀಯ ವಿಭಾಗಗಳು. ಇವುಗಳಲ್ಲಿ ಗ್ರಾಮವೇ ಅತ್ಯಂತ ಚಿಕ್ಕ ಪ್ರಾದೇಶಿಕ ಮತ್ತು ರಾಜಕೀಯ ವಿಭಾಗವಾಗಿದೆ.

ಇಂತಹ ಪ್ರಾದೇಶಿಕ ವಿಭಾಗಗಳ ಪ್ರಭುತ್ವಕ್ಕಾಗಲಿ, ಪ್ರಜಾಹಿತಕ್ಕಾಗಲಿ ಅಥವಾ ರಾಷ್ಟ್ರದ ಸಮಗ್ರತೆಗಾಗಲಿ ಧಕ್ಕೆ ಉಂಟಾಗದಂತೆ ನೋಡಿಕೊಳ್ಳುವುದು ರಾಜನ ಪ್ರಮುಖ ಕರ್ತವ್ಯ

ವಾಗಿದೆ. ರಾಜ್ಯದ ಆದಾಯದ ಮೂಲಗಳಲ್ಲಿ ಜನಪದದ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಆದ್ದರಿಂದ ಜನಪದದ ಸರ್ವತೋಮುಖ ಅಭಿವೃದ್ಧಿಗೆ ರಾಜನು ಶ್ರಮಿಸಬೇಕು. ಜನಪದದ ಅಭಿವೃದ್ಧಿಗೆ ರಾಜನಾದವನು ಗಮನಹರಿಸದಿದ್ದರೆ ಅವನ ಅಸ್ತಿತ್ವವೇ ನಾಶವಾಗುತ್ತದೆ ಮತ್ತು ರಾಜ್ಯದಲ್ಲಿ ಕ್ರಾಂತಿಗಳು ಮತ್ತು ದಂಗೆಗಳು ನಡೆಯುತ್ತವೆ ಎಂದು ಕೌಟಿಲ್ಯ ಹೇಳಿದ್ದಾನೆ.

**೪. ದುರ್ಗ**

ಈ ದುರ್ಗವೂ ಸಹ ಸಪ್ತಾಂಗಗಳಲ್ಲಿ ಬರುವ ಪ್ರಮುಖ ರಾಜ್ಯದ ಮೂಲಾಂಶವಾಗಿದೆ. ಕೌಟಿಲ್ಯನ ಪ್ರಕಾರ ದುರ್ಗ ಎಂದರೆ ಕೋಟೆ, ಜನಪದವನ್ನು ಒಳನಾಡಿನಿಂದಾಗಲಿ ಅಥವಾ ವಿದೇಶಿಗಳಿಂದಾಗಲಿ ಅಪಾಯ ಬಂದೊದಗದಂತೆ ತಪ್ಪಿಸಲು ಅಗತ್ಯವಾಗಿದೆ. ರಾಜ್ಯದ ರಕ್ಷಣೆಗೆ ಕೋಟೆ ಅತ್ಯಗತ್ಯ. ರಾಜ್ಯವನ್ನು ವಿದೇಶಿ ದಾಳಿಗಳಿಂದ ತಪ್ಪಿಸಲು ರಾಜ್ಯದ ಗಡಿಯುದ್ದಕ್ಕೂ ಹಾಗೂ ಮುಖ್ಯ ಭಾಗಗಳಲ್ಲಿ ಕೋಟೆಗಳನ್ನು ನಿರ್ಮಿಸಬೇಕು ಎಂದು ಕೌಟಿಲ್ಯ ಹೇಳಿದ್ದಾನೆ ಮತ್ತು ಇವನು ನಾಲ್ಕು ರೀತಿಯ ಕೋಟೆಗಳನ್ನು ತಿಳಿಸಿದ್ದಾನೆ. ಅವುಗಳೆಂದರೆ ಗಿರಿದುರ್ಗ, ಜಲದುರ್ಗ, ಬಯಲುದುರ್ಗ ಮತ್ತು ವನದುರ್ಗ.

ಈ ಮೇಲಿನ ನಾಲ್ಕು ಕೋಟೆಗಳಿದ್ದರೆ ರಾಜ್ಯವು ಸಂಪೂರ್ಣವಾದ ರಕ್ಷಣೆಯನ್ನು ಪಡೆದಿರುತ್ತದೆ. ಗಿರಿದುರ್ಗ ಮತ್ತು ಜಲದುರ್ಗ ಕೋಟೆಗಳು ಅತಿ ಮುಖ್ಯವಾಗಿವೆ. ಪರ್ವತ ಪ್ರದೇಶಗಳಲ್ಲಿ ಕೋಟೆಗಳನ್ನು ನಿರ್ಮಿಸಿದರೆ ಶತ್ರುಗಳು ರಾಜ್ಯದ ಒಳಗೆ ದಾಳಿ ಮಾಡುವುದನ್ನು ತಪ್ಪಿಸಬಹುದು ಇದೇ ಗಿರಿದುರ್ಗವಾಗಿದೆ. ಬಯಲು ಪ್ರದೇಶದಲ್ಲಿ ಬಾಹ್ಯಶತ್ರುಗಳು ಸುಲಭವಾಗಿ ಆಕ್ರಮಣಮಾಡಬಹುದು. ಆದ್ದರಿಂದ ಬಯಲು ಪ್ರದೇಶದಲ್ಲಿ ಭದ್ರವಾದ ಕೋಟೆಗಳನ್ನು ನಿರ್ಮಿಸಬೇಕು ಹಾಗೂ ದಟ್ಟವಾದ ಅರಣ್ಯ ಪ್ರದೇಶಗಳಲ್ಲಿಯೂ ಸಹ ಕೋಟೆಗಳನ್ನು ನಿರ್ಮಿಸುವುದರಿಂದ ಶತ್ರುಗಳ ಉಪಟಳವನ್ನು ತಡೆಯಬಹುದು ಎಂದು ಕೌಟಿಲ್ಯ ಅಭಿಪ್ರಾಯಪಟ್ಟಿದ್ದಾನೆ.

**೫. ಕೋಶ**

ಕೋಶ ಎಂದರೆ ಖಜಾನೆ ಎಂದರ್ಥ. ರಾಜ್ಯದ ಪ್ರಗತಿಗೆ ಕೋಶ ಅತ್ಯಾವಶ್ಯಕವಾದುದು. ಕೋಶ ರಾಜ್ಯದ ಚಾಲನಾ ಶಕ್ತಿ. ರಾಜ್ಯಾಡಳಿತಕ್ಕೆ ಮೂಲವೆಂದರೆ ಕೋಶವಾಗಿದ್ದು, ರಾಜ್ಯ ಭಂಡಾರದಲ್ಲಿ ಧನವಿಲ್ಲದಿದ್ದರೆ ರಾಜ್ಯವು ಕಾರ್ಯನಿರ್ವಹಿಸಲು ಸಾಧ್ಯವಿಲ್ಲ. ಅಧಿಕಾರಿಗಳ ವೇತನ, ಸೈನಿಕ ವೆಚ್ಚ, ದಾನಧರ್ಮ ಮುಂತಾದವುಗಳಿಗೆ ಕೋಶದಿಂದಲೇ ಹಣವನ್ನು ಒದಗಿಸಲಾಗುತ್ತದೆ. ತೆರಿಗೆಗಳು, ದಂಡ ವಸೂಲಿಯಿಂದ ಬಂದ ಹಣ, ಗಣಿಕೆಯರಿಂದ ಸಂಗ್ರಹಿಸುವ ತೆರಿಗೆ ಇದೆಲ್ಲವೂ ರಾಜ್ಯ ಭಂಡಾರದ ಆದಾಯದ ಮೂಲಗಳು.

ತೆರಿಗೆಯನ್ನು ಯಾವ ಯಾವ ವಸ್ತುಗಳ ಮೇಲೆ ಹಾಗೂ ಯಾವ ಅಂಶದ ಮೇಲೆ ವಿಧಿಸಬೇಕು ಎಂದು ಕೌಟಿಲ್ಯ ಸ್ಪಷ್ಟವಾಗಿ ವಿವರಿಸಿದ್ದಾನೆ. ಭೂಕಂದಾಯ, ಖನಿ, ಅರಣ್ಯ,

ಉಪ್ಪು, ಮದಿಕಾ, ಸೂನಾಗೃಹ, ಆಮದು ಮತ್ತು ರಫ್ತಿನ ಮೇಲೆ ಕರ ವಿಧಿಸಿ ಸಂಗ್ರಹಿಸುವಂತೆ ಸಲಹೆ ನೀಡಿದ್ದಾನೆ. ತೆರಿಗೆ ವಸೂಲಾತಿಯನ್ನು ಸರಿಯಾದ ನಿಯಮಗಳಡಿ ಮಾಡಬೇಕು. ತಪ್ಪಿದರೆ ಎರಡು ರೀತಿಯ ಪರಿಣಾಮ ಎದುರಿಸಬೇಕಾಗುತ್ತದೆ. ತೆರಿಗೆಯನ್ನು ವಸೂಲಾತಿ ಮಾಡದಿದ್ದರೆ ರಾಜ್ಯದ ಭಂಡಾರ ಬರಿದಾಗಿ ರಾಜ್ಯಾಡಳಿತ ಅಧಃಪತನ ಹೊಂದುತ್ತದೆ. ಅಂತೆಯೇ ತೆರಿಗೆಯನ್ನು ಅತಿಯಾಗಿ ಸಂಗ್ರಹಿಸಬಾರದು. ಜನರ ಆದಾಯಕ್ಕೆ ತಕ್ಕಂತೆ ತೆರಿಗೆ ವಿಧಿಸಿ ಸಂಗ್ರಹಿಸಬೇಕು. ತೆರಿಗೆಯನ್ನು ಜನರ ಆದಾಯಕ್ಕಿಂತ ಹೆಚ್ಚಿದ ಸಂದರ್ಭದಲ್ಲಿ ಜನರು ದಂಗೆ ಏಳಬಹುದು ಅಥವಾ ಆ ರಾಜ್ಯದಿಂದ ಪಲಾಯನಗೈಯಬಹುದು.

ಕೌಟಿಲ್ಯ, ಕೇವಲ ಭಂಡಾರವನ್ನು ಭರ್ತಿ ಮಾಡುವ ಕಾರ್ಯಮಾಡಿದರೆ ಸಾಲದು ಬದಲಿಗೆ ಅದರ ರಕ್ಷಣೆಯೂ ಸಹ ಬಹಳ ಸುವ್ಯವಸ್ಥಿತವಾಗಿರಬೇಕು ಎಂದಿದ್ದಾನೆ. ಭಂಡಾರವನ್ನು ಅತ್ಯಂತ ರಹಸ್ಯ ಸ್ಥಳದಲ್ಲಿಡಬೇಕು ಮತ್ತು ಅದರ ಬಗ್ಗೆ ಬೇರಾವ ಅಧಿಕಾರಿಗಳಿಗೂ ಮಾಹಿತಿ ದೊರಕದಂತೆ ರಾಜನಾದವನು ಮತ್ತು ಜನರ ಅಭಿವೃದ್ಧಿಗಾಗಿಯೇ ಕೋಶವು ಮೀಸಲಾಗಿರ ಬೇಕು ಎಂದಿದ್ದಾನೆ.

**೬. ಬಲ ಸೈನ್ಯ**

ರಾಜ್ಯದ ರಕ್ಷಣೆಗೆ ದುರ್ಗವು ಎಷ್ಟು ಮುಖ್ಯವೋ, ಸೈನ್ಯವೂ ಸಹ ಅಷ್ಟೇ ಮುಖ್ಯ ವಾಗಿರುತ್ತದೆ. ರಾಜ್ಯದ ರಕ್ಷಣೆಯಲ್ಲಿ ಸೈನ್ಯವು ಮಹತ್ವದ ಪಾತ್ರವನ್ನು ವಹಿಸುತ್ತದೆ. ಸೈನ್ಯವು ಚತುರಂಗ ಬಲವನ್ನು ಹೊಂದಿರಬೇಕು ಮತ್ತು ಬಹಳ ಶಿಸ್ತಿನಿಂದ ಸೈನ್ಯವು ಕೂಡಿರಬೇಕು. ಸೈನ್ಯಕ್ಕೆಲ್ಲಾ ಒಬ್ಬ ಮುಖ್ಯ ದಂಡನಾಯಕ, ಆ ನಂತರ ಪ್ರತಿ ಬಲದ ಮೇಲೂ ಒಬ್ಬೊಬ್ಬ ಮುಖ್ಯಾಧಿಕಾರಿ ಇರಬೇಕು. ಸೈನ್ಯವನ್ನು ಸದಾಕಾಲದಲ್ಲಿಯೂ ಸಜ್ಜುಗೊಳಿಸಿಟ್ಟಿರ ಬೇಕು ಎಂದು ಕೌಟಿಲ್ಯ ಸಲಹೆ ನೀಡಿದ್ದಾನೆ.

ದಂಡಯಾತ್ರೆಯ ಸಮಯದಲ್ಲಿ ಆಕ್ರಮಿತ ಪ್ರದೇಶಗಳಲ್ಲಿ ಸ್ತ್ರೀಯರನ್ನು, ದುರ್ಬಲರನ್ನು ಹಾಗೂ ನಿರಾಶ್ರಿತರನ್ನು ಹಿಂಸಿಸಬಾರದು ಮತ್ತು ಆ ಪ್ರದೇಶದ ಕೃಷಿ ಮತ್ತು ಕೈಗಾರಿಕೆಗಳನ್ನು ನಾಶಮಾಡಬಾರದು ಎಂದು ಹೇಳಿದ್ದಾನೆ. ಸೈನ್ಯವು ಅತ್ಯಂತ ಬಲಿಷ್ಠ ವಾಗಿರುವಂತೆ ರಾಜನು ಸದಾ ನೋಡಿಕೊಳ್ಳಬೇಕು ಮತ್ತು ಬಾಹ್ಯದಾಳಿಯಿಂದ ಎದುರಿಸುವಷ್ಟು ಸೈನ್ಯವನ್ನು ಹೊಂದಿರಬೇಕೆಂದೂ ಸಲಹೆ ನೀಡಿದ್ದಾನೆ. ಯಾವುದೇ ಸಂದರ್ಭದಲ್ಲಿಯೂ ಸಹ ಸೈನ್ಯವು ದುರ್ಬಲವಾಗದಂತೆ ನೋಡಿಕೊಳ್ಳಬೇಕು. ಇಲ್ಲವಾದರೆ ಸಂಪೂರ್ಣರಾಜ್ಯವೇ ರಾಜರ ಪರಾಧೀನವಾಗುತ್ತದೆ. ಶತ್ರುಗಳು ಬಹಳ ಪ್ರಬಲವಾಗಿದ್ದರೆ ಅವರನ್ನು ಮೋಸದಿಂದ ಸೋಲಿಸಬೇಕು ಎಂದು ಕೌಟಿಲ್ಯ ಸಲಹೆ ನೀಡಾದ್ದಾನೆ. ಸೈನ್ಯದಲ್ಲಿ ಗಜದಳ, ಅಶ್ವದಳ ಹೆಚ್ಚಾಗಿ ಇರಬೇಕು ಎಂದಿದ್ದಾನೆ.

**೭. ಮಿತ್ರ**

ರಾಜ್ಯವು ಪ್ರಬಲವಾಗಿಯೂ, ಸ್ವತಂತ್ರವಾಗಿಯೂ ಇರಬೇಕಾದರೆ ಅದು ಇತರ ರಾಜ್ಯಗಳೊಡನೆ ವಿವೇಕಯುತ ಸ್ನೇಹ ಸಂಬಂಧವನ್ನು ಹೊಂದಿರಬೇಕು. ನೆರೆಯ

ರಾಜನೊಡನೆ ಸ್ನೇಹಭಾವದಿಂದ ಇರುವವನೇ ಮಿತ್ರ. ಮಿತ್ರರಲ್ಲಿ 'ಸಹಜ' ಮತ್ತು 'ಕೃತ್ರಿಮ' ಎಂಬ ಎರಡು ಬಗೆಯ ಮಿತ್ರರಿರುತ್ತಾರೆಂದು ಕೌಟಿಲ್ಯ ಹೇಳುತ್ತಾನೆ. ತಂದೆ ಅಥವಾ ಪೂರ್ವಜರ ಕಾಲದಿಂದ ಇರುವ ಮಿತ್ರರು ಸಹಜ ಮಿತ್ರರು, ಕೆಲವೊಂದು ಉದ್ದೇಶಗಳಿಗಾಗಿ ಬೆಳೆಸಿಕೊಂಡ ಸ್ನೇಹ ಕೃತ್ರಿಮ ಮಿತ್ರತ್ವವಾಗಿದೆ.

ಯಾರೊಡನೆ ಸ್ನೇಹ ಮಾಡಬೇಕು ಮತ್ತು ಯಾರೊಡನೆ ಸ್ನೇಹ ಮಾಡಬಾರದು ಹಾಗೂ ಯಾರೊಡನೆ ತಟಸ್ಥ ನೀತಿ ಅನುಸರಿಸಬೇಕೆಂದು ರಾಜನು ಆಲೋಚಿಸಬೇಕು. ತಾನು ಹಾಗೂ ತನ್ನ ಮಿತ್ರ ರಾಜ್ಯಗಳು ಹೇಗೆ ಹಿತವಾಗಿ ಬದುಕಬೇಕು ಹಾಗೂ ಶಾಂತಿ ಯಾವಾಗ, ಸಂಧಾನ ಯಾವಾಗ, ಯುದ್ಧ ಯಾವಾಗ ಎಂಬ ವಿಷಯವನ್ನು ಪರ್ಯಾಲೋಚಿಸಬೇಕು. ಕೌಟಿಲ್ಯನ ಪ್ರಕಾರ ಮೂರು ಬಗೆಯ ಮಿತ್ರರು ಇರುತ್ತಾರೆಂದು ಕೆಲವು ಇತಿಹಾಸಕಾರರು ಹೇಳಿದ್ದಾರೆ. ಸಹಜ ಮಿತ್ರರು, ಕೃತ್ರಿಮ ಮಿತ್ರ ಮತ್ತು ಪ್ರಾಕೃತ ಭೇದವೆಂದು ಮೂರು ಬಗೆಯ ಮಿತ್ರರಿರುತ್ತಾರೆ.

ಹೀಗೆ ಕೌಟಿಲ್ಯನು ರಾಜ್ಯಾಡಳಿತದಲ್ಲಿ ಏಳು ಅಂಗಗಳನ್ನು ಹೇಳಿದ್ದಾನೆ. ರಾಜನೊಬ್ಬ ನಿಂದಲೇ ಸರಕಾರವನ್ನು ನಡೆಸಲು ಸಾಧ್ಯವಿಲ್ಲವಾದ್ದರಿಂದ ಇವುಗಳ ಸಹಾಯದಿಂದ ರಾಜ್ಯದ ಏಳಿಗೆಯನ್ನು ಸಾಧಿಸಬೇಕು. ಇವುಗಳಲ್ಲಿ ಸ್ವಾಮಿಗೆ ಅತ್ಯಂತ ಪ್ರಮುಖ ಸ್ಥಾನ ನೀಡಿದ್ದಾನೆ. ಈ ರೀತಿಯ ರಾಜಕೀಯ ನೀತಿ ನಿಯಮಗಳ ಬಗ್ಗೆ ಕೂಲಂಕಷವಾಗಿ ತಿಳಿಸಿರುವುದರಿಂದಲೇ ಈತನನ್ನು ಭಾರತದ 'ಮೆಕೆವಲ್ಲಿ' ಎಂದು ಸಂಬೋಧಿಸಲಾಗಿದೆ.

**೩. ರಾಜತ್ವ ಸ್ಥಾನ ಹಾಗೂ ಕಾರ್ಯಗಳು**

ಕೌಟಿಲ್ಯನು ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ಸಪ್ತಾಂಗದಲ್ಲಿ ಅತ್ಯಂತ ಪ್ರಮುಖ ಸ್ಥಾನ ಹೊಂದಿರುವ ರಾಜನ ಸ್ಥಾನಮಾನ ಹಾಗೂ ಅವನ ಕರ್ತವ್ಯಗಳ ಬಗ್ಗೆ ಕೂಲಂಕಷವಾಗಿ ವಿವರಿಸಿದ್ದಾನೆ.

ಕೌಟಿಲ್ಯನು ರಾಜತ್ವದ ಉಗಮದ ಬಗ್ಗೆ ವಿವರಿಸುತ್ತಾ, ಹಿಂದೆ ರಾಜನ ಅಸ್ತಿತ್ವ ಇಲ್ಲದೇ ಇದ್ದ ಪರಿಸ್ಥಿತಿಯಲ್ಲಿ ಮತ್ಸ್ಯನ್ಯಾಯ ಅಸ್ತಿತ್ವದಲ್ಲಿತ್ತು. ಅಂದರೆ ಬಲವುಳ್ಳವರು ಮಾತ್ರವೇ ಬದುಕುವಂತಹ ಸ್ಥಿತಿ. ಆ ಪರಿಸ್ಥಿತಿಯನ್ನು ಕೊನೆಗೊಳಿಸಲು ಜನರು ಸೂರ್ಯನ ಮಗನಾದ ಮನುವಿನಲ್ಲಿ ಮೊರೆಹೋಗಿ ಒಂದು ಒಪ್ಪಂದವನ್ನು ಮಾಡಿಕೊಂಡರು. ಮನು ಈಗಿನ ರಾಜರುಗಳನ್ನು ಸೃಷ್ಟಿಸಿ ಆಳ್ವಿಕೆ ನಡೆಸಲು ಕಳುಹಿಸಿದ. ಜನರ ಭದ್ರತೆ ಮತ್ತು ಹಿತಸಾಧನೆ ಯನ್ನು ಮಾಡಬೇಕಾದುದು ರಾಜನ ಜವಾಬ್ದಾರಿಯಾದುದರಿಂದ ರಾಜನು ಜನರಿಗೆ ಶಿಕ್ಷೆಯನ್ನು ಕೊಡಬಹುದಾದ ಅಧಿಕಾರವನ್ನು ಹೊಂದಿದ್ದಾನೆ.

ಈತನ ಪ್ರಕಾರ ರಾಜನು ರಾಜ್ಯದ ಸೇವಕ, ಜನರ ಹಿತಕ್ಕಾಗಿ ರಾಜ ತನ್ನ ಮಡದಿಯನ್ನು ಬಿಡಬೇಕಾದ ಸಂದರ್ಭ ಬಂದರೂ ರಾಜ ತನ್ನ ರಾಣಿಯಿಂದ ದೂರವಾಗಲು ಹಿಂಜರಿಯ ಬಾರದು. ತನ್ನ ವ್ಯಕ್ತಿತ್ವವನ್ನು ತನ್ನ ಸವತನದಲ್ಲಿ ಮುಳುಗಿಸಿ ವಿಕಾಸಗೊಳಿಸಬೇಕು. ರಾಜನಿಗೆ ವೈಯಕ್ತಿಕವಾದ ಇಷ್ಟಾನಿಷ್ಟಗಳು ಇರಬಾರದು. ಪ್ರಜೆಗಳಿಗೆ ಏನು ಬೇಕೋ, ಏನು ಬೇಡವೋ

ಅವೇ ರಾಜನ ಬೇಕು-ಬೇಡಗಳು ಆಗಬೇಕು. ಇಂತಹ ತ್ಯಾಗದಿಂದ ರಾಜ ನೈತಿಕವಾಗಿ ಮೇಲೇರಬಹುದು. ದುರ್ಗುಣಗಳನ್ನು ರಾಜ ಗೆಲ್ಲಬೇಕು. ಆಗ ಅವನು ತನ್ನ ಕೀರ್ತಿ ಪರಾಕ್ರಮಗಳನ್ನು ಹೆಚ್ಚಿಸಿಕೊಳ್ಳಬಹುದು. ರಾಜ ಜನರ ಪ್ರೀತಿ ವಿಶ್ವಾಸಗಳನ್ನು ಗಳಿಸಿ ಅವರ ಅಗತ್ಯತೆಗಳನ್ನು ಪೂರೈಸಬೇಕು. ಜನರ ಪ್ರೀತಿ ಗಳಿಸದೆ ಸ್ವಾರ್ಥಿಯಾದರೆ ಜನರನ್ನು ಕಡೆಗಣಿಸಿದರೆ ಅಂತಹ ರಾಜನಿಗೆ ದೇವರೇ ಶಿಕ್ಷೆಯನ್ನು ಕೊಡುತ್ತಾನೆ.

ರಾಜ್ಯದ ಸಪ್ತಾಂಗಗಳಲ್ಲಿ ರಾಜನೇ ಅತಿ ಮುಖ್ಯ ಅಂಗ, ರಾಜನೇ ಸರ್ಕಾರ. ರಾಜನು ರಾಜ್ಯದ ಆತ್ಮವಾದರೆ ಇತರ ಆರು ಅಂಗಗಳು ರಾಜ್ಯದ ದೇಹವಾಗುತ್ತವೆ. ರಾಜನನ್ನು ದೇಶದ ಅಭ್ಯುದಯ ಹಾಗೂ ಅಧೋಗತಿ ಎರಡು ಅವಲಂಬಿತವಾಗಿರುವುದರಿಂದ ರಾಜನಿಗೆ ತನ್ನದೇ ಆದ ಕೆಲವು ಯೋಗ್ಯ ಅರ್ಹತೆಗಳಿರಬೇಕು ಎಂದಿದ್ದಾನೆ. ರಾಜನು ಉತ್ತಮ ವಂಶದಲ್ಲಿ ಹುಟ್ಟಿರಬೇಕು. ಧೈರ್ಯವಂತನಾಗಿರಬೇಕು, ಸದ್ಗುಣವಂತನೂ ಆಗಿರಬೇಕು, ಜ್ಞಾನವಂತನು, ಜ್ಞಾಪಕ ಶಕ್ತಿಯುಳ್ಳವನೂ, ಔದಾರ್ಯವುಳ್ಳವನೂ ಹಾಗೂ ಉತ್ಸಾಹವುಳ್ಳವನೂ ಆಗಿರಬೇಕು. ಇವನು ಅರಿಷಡ್ವರ್ಗಗಳನ್ನು ಗೆದ್ದವನಾಗಿರಬೇಕು ಮತ್ತು ಅನ್ವೀಕ್ಷಿಕೀ (ತತ್ವಶಾಸ್ತ್ರ), ತ್ರಯಿ (ವೇದಶಾಸ್ತ್ರ), ವಾರ್ತಾ (ಅರ್ಥಶಾಸ್ತ್ರ) ಮತ್ತು ದಂಡನೀತಿ ಇವುಗಳ ಅಧ್ಯಯನದಿಂದ ಜ್ಞಾನ ಸಂಪಾದನೆಯನ್ನು ಮಾಡಿ ಪಾರಂಗತನಾಗಿರಬೇಕು ಹಾಗೂ ಮಂತ್ರಾಲೋಚನೆ, ಜನಪದ ರಕ್ಷಣೆ, ಶಿಕ್ಷೆ, ನ್ಯಾಯವ್ಯವಸ್ಥೆಯಲ್ಲಿ ರಾಜನು ಅನುಸರಿಸ ಬೇಕಾದ ನೀತಿ, ನೆರೆ ರಾಜ್ಯಗಳೊಂದಿಗೆ ಸಂಧಿ-ವಿಗ್ರಹಕ್ಕೂ ಸಂಬಂಧಿಸಿದಂತೆ ಕೌಟಿಲ್ಯನು ರಾಜನಿಗೆ ಅನೇಕ ಸಲಹೆಗಳನ್ನು ನೀಡಿದ್ದಾನೆ.

ರಾಜನಾದವನು ಯಾವುದೇ ಕಾರ್ಯವನ್ನು ನಿರ್ಲಕ್ಷಿಸಬಾರದು ಮತ್ತು ಕಾರ್ಯವನ್ನು ಮುಂದೂಡಿ ವಿಳಂಬಗೊಳಿಸಬಾರದು. ಬದಲಿಗೆ ರಾಜನು ಬಹಳ ಕ್ರಿಯಾಶೀಲ ವ್ಯಕ್ತಿಯಾಗಿರಬೇಕು. ಆ ಕಾರ್ಯಗಳಿಗೆ ಸಂಬಂಧಿಸಿದಂತೆ ಮಂತ್ರಿಗಳೊಡನೆ ಸಮಾಲೋಚನೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕು. ರಾಜನು ಉಳಿದ ಆರು ಅಂಗಗಳ ಮೇಲ್ವಿಚಾರಣೆ ನಡೆಸಬೇಕು. ರಾಜ್ಯದ ಐಕ್ಯತೆ ಕಾಪಾಡಬೇಕು. ಪ್ರಜೆಗಳ ಯೋಗಕ್ಷೇಮವನ್ನು ತನ್ನ ಯೋಗಕ್ಷೇಮವೆಂದು ಪರಿಗಣಿಸಿ ರಾಜ್ಯಾಡಳಿತ ನಡೆಸಬೇಕು.

ಕೌಟಿಲ್ಯನು ರಾಜನಾದವನಿಗೆ ಹಲವಾರು ಸಲಹೆಗಳನ್ನು ನೀಡುವ ಮೂಲಕ ಅವನ ಕರ್ತವ್ಯ ಪ್ರಜ್ಞೆಯನ್ನು ಮೂಡಿಸಿದ್ದಾನೆ. ರಾಜನು ತೆರಿಗೆ ವಿಧಿಸುವಾಗ ಪ್ರಜೆಗಳ ಆದಾಯದ ಆಧಾರದ ಮೇಲೆ ತೆರಿಗೆ ವಿಧಿಸಬೇಕು. ತೆರಿಗೆ ಹೊರೆ ಪ್ರಜೆಗಳಿಗೆ ಅಧಿಕವಾದರೆ ರಾಜನ ವಿರುದ್ಧ ದಂಗೆ ಏಳುವ ಸಂಭವವೇ ಹೆಚ್ಚಾಗಿರುತ್ತದೆ. ಅಂತೆಯೇ ತೆರಿಗೆಯನ್ನು ಅತಿ ಕಡಿಮೆ ಪ್ರಮಾಣದಲ್ಲೂ ವಿಧಿಸಬಾರದು. ಇದರಿಂದ ರಾಜ್ಯದಲ್ಲಿ ಯಾವುದೇ ತೆರನಾದ ಪ್ರಗತಿ ಕಾಣಲು ಸಾಧ್ಯವಿಲ್ಲ. ಆದ್ದರಿಂದ ಪ್ರಜೆಗಳ ಆದಾಯಕ್ಕನುಗುಣವಾಗಿ ತೆರಿಗೆಯನ್ನು ವಿಧಿಸಬೇಕು.

ರಾಜನು ಎಲ್ಲಾ ಧರ್ಮಗಳನ್ನೂ ಗೌರವಿಸಬೇಕು ಮತ್ತು ಧರ್ಮಸಹಿಷ್ಣು ಆಗಿರಬೇಕು. ತನ್ನ ಧರ್ಮವನ್ನು ಪ್ರಜೆಗಳು ಪಾಲಿಸುವಂತೆ ಒತ್ತಡ ಹೇರಬಾರದು ಮತ್ತು ರಾಜನು ಶತ್ರುಗಳನ್ನು ಎದುರಿಸಲು ತನ್ನ ಸೈನ್ಯ ಬಲಶಾಲಿಯಾಗಿರುವಂತೆ ನೋಡಿಕೊಳ್ಳಲು ಸಶಕ್ತನಾಗಿರಬೇಕು ಮತ್ತು ಶತ್ರುಗಳ ಆಕ್ರಮಣದ ಬಗ್ಗೆ ಸದಾ ಜಾಗರೂಕನಾಗಿರಬೇಕು. ರಾಜನಾದವನು ಕೇವಲ ತನ್ನ ರಾಜ್ಯದ ಎಲ್ಲೆಯೊಳಗೆ ಪ್ರಭಾವಶಾಲಿ ವ್ಯಕ್ತಿಯಾಗಿರದೆ ಇತರ ರಾಜ್ಯಗಳಲ್ಲಿಯೂ ಪ್ರಭಾವಶಾಲಿ ವ್ಯಕ್ತಿಯಾಗಿರಬೇಕು ಮತ್ತು ಬೇರೆ ರಾಜ್ಯಗಳೊಡನೆ ಉತ್ತಮ ಸುಮಧುರ ಬಾಂಧವ್ಯ ಹೊಂದಲು ಅನುಕೂಲಕ್ಕೆ ತಕ್ಕಂತೆ ವಿದೇಶಾಂಗ ನೀತಿಯನ್ನು ಹೊಂದಿರಬೇಕು.

ರಾಜನು ಆಸ್ಥಾನಕ್ಕೆ ಉನ್ನತ ಅಧಿಕಾರಿಗಳನ್ನು ನೇಮಿಸಿಕೊಳ್ಳುವಾಗ ಅಥವಾ ಆಯ್ಕೆ ಮಾಡಿಕೊಳ್ಳುವಾಗ ಅವರಿಗೆ ಹಲವಾರು ಪರೀಕ್ಷೆಗಳನ್ನು ನಡೆಸಬೇಕು. ರಾಜ ಸದಾ ಜಾಗರೂಕನಾಗಿದ್ದರೆ ಇತರ ಅಧಿಕಾರಿಗಳೂ ಸಹ ಜಾಗರೂಕರಾಗಿರುತ್ತಾರೆ. ರಾಜ ತನ್ನ ಅಧಿಕಾರಿಗಳ ವಿರೋಧಿಗಳ ನಡವಳಿಕೆಯನ್ನು ಜಾಗರೂಕತೆಯಿಂದ ಗಮನಿಸಬೇಕು. ಈ ಕಾರ್ಯಕ್ಕೆ ಕೌಟಿಲ್ಯ ಒಂಭತ್ತು ವರ್ಗದ ಗೂಢಾಚಾರ ವರ್ಗವನ್ನು ಸೂಚಿಸಿ ಅವರುಗಳನ್ನು ಅಗತ್ಯಕ್ಕೆ ತಕ್ಕಂತೆ ಬಳಸಿಕೊಳ್ಳಬೇಕು ಎಂದು ತಿಳಿಸಿದ್ದಾನೆ. ರಾಜನು ತನ್ನ ಪ್ರಜೆಗಳನ್ನು ವಿರೋಧಿಗಳ ಕುತಂತ್ರದಿಂದ ಹೇಗೆ ರಕ್ಷಿಸಬೇಕು ಮತ್ತು ವಿರೋಧಿಯನ್ನು ಹೇಗೆ ಸದೆ ಬಡಿಯಬೇಕು ಎಂಬುದರ ಬಗ್ಗೆ ವಿವರಿಸಿದ್ದಾನೆ. ಕಳ್ಳರನ್ನು ಮತ್ತು ವ್ಯಭಿಚಾರಿಗಳನ್ನು ಕಂಡುಹಿಡಿದು ಅವರನ್ನು ದಸ್ತಗಿರಿ ಮಾಡುವ ವಿಧಾನ, ಕಳ್ಳತನ ಮಾಲುಗಳ್ನು ಶೋಧಿಸುವುದು, ಡಕಾಯಿತಿ ಮಾಡಿದವರ ವಿಚಾರಣೆ ನಡೆಸುವುದು, ಅಧಿಕಾರಿಗಳು ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಾಗ ಮತ್ತು ಇತರ ವಿವಿಧ ತಪ್ಪುಗಳನ್ನು ಮಾಡಿದಾಗ ಅಂತಹವರನ್ನು ಹೇಗೆ ವಿಚಾರಣೆ ನಡೆಸಬೇಕು ಎಂಬುದನ್ನು ಕೂಲಂಕಷವಾಗಿ ವಿವರಿಸಿದ್ದಾನೆ.

ಹಳ್ಳಿಗಳನ್ನು ಎಲ್ಲಾ ವಿಧದಲ್ಲೂ ಅಭಿವೃದ್ಧಿಪಡಿಸಬೇಕು. ರೋಗ-ರುಜಿನ ಬರದಂತೆ ಮುನ್ನೆಚ್ಚರಿಕೆ ಕ್ರಮ ಕೈಗೊಳ್ಳಬೇಕು. ಬರಗಾಲ ಬಂದಂತಹ ಸಂದರ್ಭದಲ್ಲಿ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು. ದುಂದು ವೆಚ್ಚದಿಂದ ಕೂಡಿದ ವಿನೋಧದಲ್ಲಿ ಜನರು ತೊಡಗದಂತೆ ನೋಡಿಕೊಳ್ಳಬೇಕು. ಬೇಸಾಯವನ್ನು ಅಭಿವೃದ್ಧಿಗೊಳಿಸಬೇಕು, ಕಳ್ಳಕಾಕರಿಂದ ಮತ್ತು ದುಷ್ಟಮೃಗಗಳಿಂದ ಜಾನುವಾರುಗಳನ್ನು ರಕ್ಷಿಸಬೇಕು. ವಾಣಿಜ್ಯ ವ್ಯವಹಾರಗಳು ಸುಗಮವಾಗಿ ನಡೆಯುವಂತೆ ನೋಡಿಕೊಳ್ಳಬೇಕು. ಕಾಡುಗಳನ್ನು ರಕ್ಷಿಸುವುದು, ಹೊಸದಾಗಿ ನೀರಾವರಿ, ಗಣಿ ಕೆಲಸ-ಕಾರ್ಯಗಳನ್ನು ಪ್ರಾರಂಭಿಸುವುದು ಮುಂತಾದವುಗಳು ರಾಜನು ಕೈಗೊಳ್ಳಬೇಕಾದ ಕ್ರಮಗಳಾಗಿವೆ.

ರಾಜನು ಖಾಲಿಯಾದ ಖಜಾನೆಯನ್ನು ಪುನಹ ತುಂಬಬೇಕು ಎಂಬುದರ ಬಗ್ಗೆ ಹೇಳುತ್ತಾ ರಾಜ ಗೂಢಚಾರರು ಮತ್ತು ಸರ್ಕಾರಿ ಅಧಿಕಾರಿಗಳ ಮೂಲಕ ಕಾನೂನು ಬಾಹಿರವಾದ ವಿಧಾನಗಳ ಮೂಲಕವಾದರೂ, ಶಕ್ತಿಯನ್ನು ಬಳಸಿಯಾದರೂ ಖಜಾನೆಯನ್ನು ತುಂಬಬೇಕು.

ರಾಜ್ಯಕ್ಕೆ ಹಣದ ಅಗತ್ಯವಿದ್ದ ಸಂದರ್ಭದಲ್ಲಿ ಶಕ್ತಿ ಪ್ರದರ್ಶನ ಮತ್ತು ಕಾನೂನು ಬಾಹಿರ ಕ್ರಮಗಳನ್ನು ತೆಗೆದುಕೊಳ್ಳುವುದು ಸರಿ ಎಂದು ಕೌಟಿಲ್ಯ ಹೇಳಿದ್ದಾನೆ. ರಾಜ್ಯದ ವಿರೋಧಿಗಳ, ಪಾಪಕೃತ್ಯ ಮಾಡಿದವರ ಆಸ್ತಿಯನ್ನು ರಾಜ್ಯದ ಹಿತದೃಷ್ಟಿಯಿಂದ ಮುಟ್ಟುಗೋಲು ಹಾಕಿಕೊಳ್ಳುವುದನ್ನು ಕೌಟಿಲ್ಯ ಸಮರ್ಥಿಸಿದ್ದಾನೆ, ರಾಜ್ಯದ ಹಿತದೃಷ್ಟಿಯಿಂದ ರಾಜ ನೈತಿಕ ಎಲ್ಲೆಯನ್ನು ಮೀರಿ ವರ್ತಿಸಬಹುದು ಎಂಬುದು ಚಾಣಕ್ಯನ ಅಭಿಪ್ರಾಯವಾಗಿದೆ.

ರಾಜ ದುರ್ಬಲನಾಗಿದ್ದಾಗ ಆಕ್ರಮಣಕ್ಕೊಳಗಾದ ಅಂತಹ ದುರ್ಬಲ ರಾಜ ಪ್ರಬಲನಾದ ರಾಜನಿಗೆ ಶರಣಾಗಬೇಕು ಅಥವಾ ದಾಳಿಗೆ ಬಗ್ಗದ ಅಭೇದ್ಯವಾದ ಕೋಟೆಯಲ್ಲಿ ಅಡಗಿ ಕುಳಿತುಕೊಳ್ಳಬೇಕು ಎಂದು ಕೌಟಿಲ್ಯ ತಿಳಿಸಿದ್ದಾನೆ. ಆದ್ದರಿಂದ ಕೌಟಿಲ್ಯನು ರಾಜನ ಗುಣ, ಅರ್ಹತೆ, ಸ್ಥಾನಮಾನಗಳನ್ನು ಹಲವಾರು ದೃಷ್ಟಿಕೋನಗಳಿಂದ ಬಿಂಬಿಸಿದ್ದಾನೆ.

### ೧.೪ ಸಾರಾಂಶ

ಈ ಅಧ್ಯಾಯದ ಮೂವರು ಪ್ರಮುಖ ಪ್ರಾಚೀನ ರಾಜನೀತಿ ಚಿಂತಕರು ತಮ್ಮದೇ ಆದ ವಿಶಿಷ್ಟ ಕೊಡುಗೆಗಳ ಮೂಲಕ ಇಂದಿಗೂ ರಾಜ್ಯಶಾಸ್ತ್ರದ ಅಧ್ಯಯನದಲ್ಲಿ ತಮ್ಮ ಛಾಪನ್ನು ಉಳಿಸಿಕೊಂಡಿದ್ದಾರೆ.

ಸಮಾಜದ ವರ್ಗೀಕರಣದಿಂದಾಗಿ ಸಮಾಜದಲ್ಲಿ ಗುಂಪುಗಾರಿಕೆ ಹೆಚ್ಚಾಗಿ ಸಮಾಜ ಅಧಃಪತನ ಹೊಂದಬಹುದು. ಇವನ ಸಮತಾವಾದದ ತತ್ವಗಳು ಪ್ರಕೃತಿ ಧರ್ಮಕ್ಕೆ ವಿರುದ್ಧವಾದುದಾಗಿವೆ. ಪ್ಲೇಟೋವಿನ ಆದರ್ಶ ರಾಜ್ಯವನ್ನು ಕಲ್ಪನಾ ರಾಜ್ಯವೆಂದು ಟೀಕಿಸಲಾಗಿದ್ದರೂ ಉತ್ತಮ ರಾಜ್ಯ ಹೇಗಿರಬೇಕೆಂದು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಪ್ಲೇಟೋನ ಸದ್ಗುಣವನ್ನು ಹೊಂದಿದ ತತ್ವಜ್ಞಾನಿಯೇ ಆದರ್ಶ ರಾಜ್ಯವನ್ನು ಆಳಬೇಕೆಂಬ ಪ್ರತಿಪಾದನೆಯು ಇಂದಿಗೂ ರಾಜನೀತಿಜ್ಞರ ಚರ್ಚೆಗೆ ಗ್ರಾಸವಾಗಿದೆ ಮತ್ತು ಚಿಂತನಾರ್ಹ ವಾಗಿದೆ. ಪ್ಲೇಟೋರವರು ಹೇಳುವಂತೆ ತತ್ವಜ್ಞಾನಿಗಳು ಅರಸರಾಗದ ಹೊರತು, ಇಲ್ಲವೇ ಅರಸರು ತತ್ವಜ್ಞಾನಿಗಳಾಗದ ಹೊರತು ರಾಜ್ಯದಲ್ಲಿ ದಕ್ಷ ಆಡಳಿತ ನಡೆಸಲು ಸಾಧ್ಯವಿಲ್ಲ. ಜಾಣ್ಮೆ, ಪ್ರಾಮಾಣಿಕತೆ, ನಿಸ್ವಾರ್ಥತೆ ಹಾಗೂ ಸೇವಾ ಮನೋಭಾವ ಇವೇ ಮುಂತಾದ ಸದ್ಗುಣಗಳನ್ನು ತತ್ವಜ್ಞಾನಿಗಳು ಮಾತ್ರ ಹೊಂದಿರುವುದರಿಂದ ಅವರು ಆಡಳಿತವರ್ಗ ದಲ್ಲಿರಬೇಕು. ಆಡಳಿತ ಬುದ್ಧಿವಂತರ ಮತ್ತು ಜ್ಞಾನಿಗಳ ಕೈಯಲ್ಲಿದ್ದಾಗ ರಾಷ್ಟ್ರದ ಹಿತ ಸಾಧನೆಯಾಗುತ್ತದೆ. ವಿವೇಕ ಮತ್ತು ವಿವೇಚನಾ ಶಕ್ತಿಯನ್ನು ಹೊಂದಿರುವವರು ಮಾತ್ರ ದೇಶದ ಆಡಳಿತವನ್ನು ಸಮರ್ಥ ರೀತಿಯಲ್ಲಿ ನಿರ್ವಹಿಸಲು ಸಾಧ್ಯ. ಪ್ರಾಮಾಣಿಕತೆ ಬುದ್ಧಿವಂತಿಕೆ, ನಿಸ್ವಾರ್ಥ ಸೇವಾ ಮನೋಭಾವ, ಜ್ಞಾನ ಮುಂತಾದ ಸದ್ಗುಣಗಳು ಆಡಳಿತಗಾರರಲ್ಲಿ ಇರಬೇಕಾಗುತ್ತದೆ. ಈ ಎಲ್ಲಾ ಸದ್ಗುಣಗಳು ತತ್ವಜ್ಞಾನಿಗಳಲ್ಲಿ ಇರುವುದರಿಂದ ಅವರು ಅರಸರಾಗಬೇಕು. ಒಂದು ರಾಜ್ಯ ಆದರ್ಶ ರಾಜ್ಯವಾಗಬೇಕಾದರೆ ತತ್ವಜ್ಞಾನಿಗಳು ಅರಸರಾಗಬೇಕು ಅಥವಾ ರಾಜರು ತತ್ವಜ್ಞಾನದ ಸಾಮರ್ಥ್ಯ ಹಾಗೂ ಚೈತನ್ಯ ಹೊಂದಿರಬೇಕು. ಆಡಳಿತವು ಜ್ಞಾನಿಗಳ ಕೈಯಲ್ಲಿದ್ದಾಗ ರಾಷ್ಟ್ರದ ಹಿತ ಸಾಧನೆಯಾಗುತ್ತದೆ. ತತ್ವಜ್ಞಾನಿಗಳ ಆಳ್ವಿಕೆಯಿಂದ ರಾಜಕೀಯ

ಸ್ವಾರ್ಥ ಮತ್ತು ಅಸಮರ್ಥತೆಗಳು ಕಾಣದಂತಾಗುತ್ತವೆ ಎಂಬ ಮುಂತಾದ ಈತನ ಕಲ್ಪನೆಗಳು ಇಂದಿನ ಪ್ರಭುತ್ವದಲ್ಲಿರುವ ಬಹುತೇಕ ಸಮಸ್ಯೆಗಳಿಗೆ ಕಾರಣಗಳು ಮತ್ತು ಅವುಗಳಿಗೆ ಪರೋಕ್ಷವಾಗಿ ಪರಿಹಾರಗಳನ್ನು ಸೂಚಿಸುವಂತಿವೆ.

ಇನ್ನು, ಅರಿಸ್ಟಾಟಲ್ ಸ್ವಲ್ಪಮಟ್ಟಿಗೆ ಪ್ಲೇಟೊಗಿಂತ ವಾಸ್ತವವಾದಿಯಂತೆ ಕಂಡು ಬರುತ್ತಾರೆ. ಇವರು ಐತಿಹಾಸಿಕವಾಗಿ ಸರ್ಕಾರ, ರಾಜ್ಯದ ಸ್ವರೂಪದಲ್ಲಿನ ಬದಲಾವಣೆ ಮತ್ತು ಅದರ ಕಾರಣಗಳನ್ನು ವಿವರಿಸುವ ಜೊತೆಗೆ, ವಾಸ್ತವವಾಗಿ ಜಾರಿಗೊಳಿಸಬಹುದಾದ ಉತ್ತಮ ರಾಜ್ಯದ ಕಲ್ಪನೆಗೆ ಪ್ರಯತ್ನಿಸಿದ್ದಾರೆ. ಇವರ ಪ್ರಕಾರ ಮಧ್ಯಮ ವರ್ಗದ ಜನರ ಹಿತವನ್ನು ಸಾಧಿಸುವ ಸರ್ಕಾರ ಉತ್ತಮ ಎಂದಿದ್ದಾರೆ. ವಿಶಾಲವಾದ ರಾಷ್ಟ್ರ ಉತ್ತಮವಾದ ರಾಷ್ಟ್ರ ಎಂಬುದು ಇವರ ಅಭಿಪ್ರಾಯವಾಗಿದೆ. ಸಮಾಜ ಮತ್ತು ರಾಜ್ಯದಲ್ಲಿ ನೈತಿಕ ಮೌಲ್ಯಗಳಿಗೆ ಹೆಚ್ಚಿನ ಸ್ಥಾನವಿರಬೇಕು ಮತ್ತು ಪವಿತ್ರವಾದ ರಾಜಕೀಯ ಜೀವನವಿರಬೇಕು. ಉತ್ತಮವಾದ ಶಿಕ್ಷಣ ವ್ಯವಸ್ಥೆ ಇರಬೇಕು. ಮಿತಿಮೀರಿದ ಜನಸಂಖ್ಯೆ ಇರಬಾರದು ಮತ್ತು ಜನಸಂಖ್ಯೆಯನ್ನು ಹೇಗೆ ನಿಯಂತ್ರಿಸಬೇಕು ಎಂಬುದನ್ನು ಕೂಡ ಇವರು ತಿಳಿಸಿದ್ದಾರೆ. ಇವರು ರಾಜಪ್ರಭುತ್ವ ಮತ್ತು ಸರ್ವಾಧಿಕಾರವನ್ನು ವಿರೋಧಿಸಿದ್ದಾರೆ. ರಾಜ್ಯದಲ್ಲಿ ವ್ಯಕ್ತಿಯ ಇಚ್ಛೆಗಿಂತ ವಿವೇಚನಾ ಶಕ್ತಿಗೆ ಹೆಚ್ಚಿನ ಬೆಲೆ ಇರಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಅರಿಸ್ಟಾಟಲ್‌ರವರು ವಿಶ್ಲೇಷಿಸಿರುವಂತೆ ಎಂತಹ ಉತ್ತಮ ಸರ್ಕಾರವಾದರೂ ಸಹ ಶಾಶ್ವತವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಿಲ್ಲ, ಸರ್ಕಾರದ ಮಾದರಿಗಳು ಸದಾ ಬದಲಾವಣೆಗೆ ಒಳಗಾಗುತ್ತವೆ ಎನ್ನುತ್ತಾರೆ. ಉತ್ತಮ ಸರ್ಕಾರವು ವಿಕೃತ ರೂಪದ ಸರ್ಕಾರಕ್ಕೆ ದಾರಿ ಮಾಡಿಕೊಡಬಹುದು. ಒಂದು ಸರ್ಕಾರದ ಪತನವು ಮತ್ತೊಂದು ಹೊಸ ಸರ್ಕಾರದ ಅಸ್ತಿತ್ವಕ್ಕೆ ನಾಂದಿಯಾಗುತ್ತದೆ. ಯಾವುದೇ ಸರ್ಕಾರವು ಶಾಶ್ವತವಾಗಿ. ಅಸ್ತಿತ್ವದಲ್ಲಿರದೇ ಕಾಲ ಕ್ರಮೇಣ ಬದಲಾಗುತ್ತಿರುತ್ತದೆ. ರಾಜ ಪ್ರಭುತ್ವವು ಕ್ರಮೇಣ ನಿರಂಕುಶ ಪ್ರಭುತ್ವವಾಗಿ, ಪ್ರಜಾಪ್ರಭುತ್ವವು ಕಾಲಕ್ರಮೇಣ ರಾಜಪ್ರಭುತ್ವವಾಗಿ ಪರಿವರ್ತನೆಯಾಗುತ್ತದೆ. ಈ ರೀತಿಯ ಬದಲಾವಣೆಯ ಪ್ರಕ್ರಿಯೆ ಸದಾ ಬರುತ್ತಿರುತ್ತದೆ ಎಂಬ ಅರಿಸ್ಟಾಟಲ್ ಹೇಳಿಕೆ ಐತಿಹಾಸಿಕ ವಾಗಿಯೂ ಕೂಡ ಮಹತ್ವವನ್ನು ಪಡೆದಿದೆ.

ಕೊನೆಯದಾಗಿ, ಕೌಟಿಲ್ಯನ ಚಿಂತನೆಯು, ರಾಜ್ಯಶಾಸ್ತ್ರಕ್ಕೆ ಪ್ರಾಚೀನ ಭಾರತೀಯರ ಕೊಡುಗೆ ಕಡಿಮೆ ಏನೂ ಅಲ್ಲ ಎಂಬುದಕ್ಕೆ ದಿಟ್ಟ ಉದಾಹರಣೆಯಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರ ಬೆಳಕಿಗೆ ಬಂದ ಮೇಲೆ, ಪ್ರಾಚೀನ ಭಾರತೀಯ ರಾಜಕೀಯ ಜ್ಞಾನದ ವಿಚಾರದಲ್ಲಿ ಪಾಶ್ಚಾತ್ಯ ರಾಜಕೀಯ ಚಿಂತಕರಿಗಿದ್ದ ತಪ್ಪು ಅಭಿಪ್ರಾಯಗಳು ತೊಲಗಿ, ಭಾರತೀಯರೂ ಧರ್ಮ, ತತ್ವಶಾಸ್ತ್ರದಂತೆ ರಾಜಕೀಯದಲ್ಲೂ ಆಸಕ್ತಿ ಹೊಂದಿದ್ದರು ಎಂಬ ಸ್ಪಷ್ಟ ಅಭಿಪ್ರಾಯಕ್ಕೆ ಬರುವಂತಾಯಿತು. ಈತನ ಅರ್ಥಶಾಸ್ತ್ರದಲ್ಲಿ ಕೇಂದ್ರ ಮತ್ತು ಸ್ಥಳೀಯ ಆಡಳಿತ, ವಿದೇಶಾಂಗ ನೀತಿ ಮತ್ತು ದೇಶೀಯ ನೀತಿ, ಸಿವಿಲ್ ಮತ್ತು ಕ್ರಿಮಿನಲ್ ಕಾಯ್ದೆ, ಯುದ್ಧಕಲೆ ಇವುಗಳ ಬಗ್ಗೆ ಸುದೀರ್ಘ ಮಾಹಿತಿಯನ್ನು ನೀಡುವಲ್ಲಿ ತನ್ನದೇ ಆದ ಛಾಪನ್ನು

ಮೂಡಿಸಿಕೊಂಡಿದೆ. ರಾಜ್ಯಕ್ಕೆ ಸಂಬಂಧಿಸಿದ ನಿಯಮಗಳು, ತತ್ವಗಳು ಕೌಟಿಲ್ಯನ ಅರ್ಥ, ಸಂಬಂಧಿಸಿದ ನಿಯಮಗಳು, ತತ್ವಗಳು ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಒಂದು ವಿಶಿಷ್ಟ ರೀತಿಯಲ್ಲಿ ಬಳಕೆಯಾಗಿದೆ ಹಾಗೂ ಕೌಟಿಲ್ಯನ ಅರ್ಥಶಾಸ್ತ್ರ ಇಂದಿಗೂ ಸಹ ರಾಜ್ಯಶಾಸ್ತ್ರಕ್ಕೆ ಇರುವ ಮೂಲಾಧಾರಗಳಲ್ಲಿ ಅತ್ಯಂತ ಪ್ರಮುಖವಾದ ಗ್ರಂಥಗಳಲ್ಲಿ ಇದೂ ಸಹ ಒಂದೆಂದು ಪರಿಗಣಿಸಲ್ಪಟ್ಟಿದೆ. ಕೌಟಿಲ್ಯನ ವಿಚಾರ ಲಹರಿ ಮತ್ತು ವಿದ್ವತ್ತನ್ನು ಮನ್ನಿಸಿಯೇ ಬಹಳಷ್ಟು ವಿದ್ವಾಂಸರು ಈತನನ್ನು 'ಭಾರತದ ಮೆಕೆವಲ್ಲಿ' ಎಂದು ಪ್ರಶಂಸಿಸಿದ್ದಾರೆ.

### ೧.೫ ಪಾರಿಭಾಷಿಕ ಪದಕೋಶ

Rule of law - ಕಾನೂನಿನ ಆಳ್ವಿಕೆ
Kingship - ರಾಜತ್ವ
Communism - ಸಮತಾವಾದ
Similarity - ಹೋಲಿಕೆ
Ideal State - ಆದರ್ಶರಾಜ್ಯ
Philosopher - ತತ್ವಜ್ಞಾನಿ
Virtue - ಸದ್ಗುಣ

### ೧.೬. ಪ್ರಶ್ನೆಗಳು

**ಅ. ಒಂದು ಅಂಕದ ಪ್ರಶ್ನೆಗಳು**

೧. ಪ್ಲೇಟೋರವರು ಎಲ್ಲಿ ಜನಿಸಿದರು?
೨. ಪ್ಲೇಟೋರವರ ಪ್ರಮುಖ ಕೃತಿಗಳನ್ನು ಹೆಸರಿಸಿರಿ.
೩. ಆದರ್ಶ ರಾಜ್ಯವನ್ನು ಯಾರು ಆಳಬೇಕೆಂಬುದು ಪ್ಲೇಟೋರವರ ಅಭಿಪ್ರಾಯವಾಗಿತ್ತು?
೪. ಪ್ಲೇಟೋರವರು ಎಂತಹ ಶಿಕ್ಷಣವನ್ನು ಪ್ರತಿಪಾದಿಸಿದ್ದಾರೆ?
೫. ಆದರ್ಶ ರಾಜ್ಯ ಪರಿಕಲ್ಪನೆಯನ್ನು ಪ್ಲೇಟೋರವರು ಯಾವ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ?
೬. ರಾಜ್ಯಶಾಸ್ತ್ರ ಪಿತಾಮಹನಾರು?
೭. ಅರಿಸ್ಟಾಟಲ್‌ರವರ ಪ್ರಮುಖವಾದ ಎರಡು ಕೃತಿಗಳನ್ನು ಹೆಸರಿಸಿರಿ.
೮. ಅರಿಸ್ಟಾಟಲ್‌ರವರ ಸರ್ಕಾರಗಳ ವರ್ಗೀಕರಣವು ಯಾವ ತಳಹದಿಯ ಮೇಲಿದೆ?
೯. ಅರಿಸ್ಟಾಟಲ್‌ರವರ ಪ್ರಕಾರ ಅತ್ಯಂತ ಕೆಟ್ಟ ಸರ್ಕಾರ ಯಾವುದು?
೧೦. ಅರಿಸ್ಟಾಟಲ್‌ರವರ ಪ್ರಕಾರ ಅತ್ಯಂತ ಒಳ್ಳೆಯ ಸರ್ಕಾರ ಯಾವುದು?
೧೧. 'ಭಾರತದ ಮೆಕೆವಲ್ಲಿ' ಎಂದು ಗುರುತಿಸಲ್ಪಟ್ಟವರಾರು?
೧೨. ಕೌಟಿಲ್ಯನು ಜನಿಸಿದ ಸ್ಥಳವನ್ನು ಹೆಸರಿಸಿ.
೧೩. ಅರ್ಥಶಾಸ್ತ್ರದ ಕರ್ತೃ ಯಾರು?

೧೪. ಸಪ್ತಾಂಗ ಸಿದ್ಧಾಂತದ ಪ್ರವರ್ತಕ ಯಾರು?
೧೫. ಸಪ್ತಾಂಗ ಸಿದ್ಧಾಂತದ ಅತೀ ಪ್ರಮುಖ ಅಂಗ ಯಾವುದು?
೧೬. ಕೌಟಿಲ್ಯನ ಅರ್ಥಶಾಸ್ತ್ರವನ್ನು ಯಾವ ಗ್ರಂಥಕ್ಕೆ ಹೋಲಿಸಲಾಗಿದೆ?

**ಆ. ಎರಡು ಅಂಕದ ಪ್ರಶ್ನೆಗಳು**

೧. ಪ್ಲೇಟೋರವರ ಕಾಲಾವಧಿ ಮತ್ತು ಕೃತಿಗಳನ್ನು ತಿಳಿಸಿ.
೨. 'ಸದ್ಗುಣವೇ ಜ್ಞಾನ' ಪರಿಕಲ್ಪನೆಯ ವಿವರಣೆಯನ್ನು ನೀಡಿ.
೩. 'ರಾಜ್ಯನಿಯಂತ್ರಿತ ಶಿಕ್ಷಣವನ್ನು' ವಿವರಿಸಿ.
೪. ಪ್ಲೇಟೋರವರ ಸಮಾಜದ ವರ್ಗೀಕರಣ ಯಾವ ತಳಹದಿಯನ್ನು ಹೊಂದಿದೆ?
೫. ಆದರ್ಶ ರಾಜ್ಯದ ಜನಸಂಖ್ಯೆ ಎಷ್ಟಿರಬೇಕೆಂದು ಪ್ಲೇಟೋ ಅಭಿಪ್ರಾಯ ಪಟ್ಟಿದ್ದಾರೆ?
೬. ಅರಿಸ್ಟಾಟಲ್‌ರವರ ಕಾಲಾವಧಿ ಕೃತಿಗಳನ್ನು ಹೆಸರಿಸಿ.
೭. ಅರಿಸ್ಟಾಟಲ್‌ರವರು ವರ್ಗೀಕರಿಸಿರುವ ವಿವಿಧ ಸರ್ಕಾರಗಳನ್ನು ಹೆಸರಿಸಿ.
೮. ಪಾಲಿಟಿ ಸರ್ಕಾರದ ಅರ್ಥ ವಿವರಣೆಯನ್ನು ಕೊಡಿ?
೯. ಕೌಟಿಲ್ಯನು ಉಲ್ಲೇಖಿಸಿರುವ ಒಳಮಂಡಳಿ ಮತ್ತು ಹೊರಮಂಡಳಿಯ ಅರ್ಥವನ್ನು ತಿಳಿಸಿ.
೧೦. ಕೌಟಿಲ್ಯರವರ 'ಕಾನೂನಿನ ಆಳ್ವಿಕೆ' ಎಂದರೇನು?
೧೧. ಕೌಟಿಲ್ಯ ವಿವರಿಸಿರುವ ವಿವಿಧ ದುರ್ಗಗಳನ್ನು ಹೆಸರಿಸಿ.
೧೨. ಜನಪದದ ರಾಜಕೀಯ ವಿಭಾಗಗಳನ್ನು ಹೆಸರಿಸಿ.
೧೩. ಅಮಾತ್ಯರ ಆಯ್ಕೆಯ ಪರೀಕ್ಷಾ ವಿಧಾನಗಳನ್ನು ಹೆಸರಿಸಿ.
೧೪. ಕೌಟಿಲ್ಯನ ಪ್ರಕಾರ ಇರುವ ಮಿತ್ರ ಬಗೆಗಳನ್ನು ಹೆಸರಿಸಿ.
೧೫. ಸಪ್ತಾಂಗ ಸಿದ್ಧಾಂತದಲ್ಲಿ ಬರುವ ಅಂಗಗಳಾವುವು?

**ಇ. ಐದು ಅಂಕದ ಪ್ರಶ್ನೆಗಳು**

೧. ಪ್ಲೇಟೋರವರ 'ಸದ್ಗುಣವೇ ಜ್ಞಾನ' ಪರಿಕಲ್ಪನೆಯನ್ನು ವಿವರಿಸಿ.
೨. ಪ್ಲೇಟೋರವರ ಜೀವನ ಮತ್ತು ಕೃತಿಗಳನ್ನು ವಿವರಿಸಿ.
೩. ಆದರ್ಶ ರಾಜ್ಯದ ಪರಿಕಲ್ಪನೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.
೪. ಕೌಟಿಲ್ಯನ ಜೀವನ ಮತ್ತು ಕೃತಿಗಳನ್ನು ವಿವರಿಸಿ.
೫. ಕೌಟಿಲ್ಯನ 'ಸ್ವಾಮಿ'ಯ ಪರಿಕಲ್ಪನೆಯನ್ನು ವಿವರಿಸಿ.
೬. ಅರಿಸ್ಟಾಟಲ್‌ರವರ ಜೀವನ ಮತ್ತು ಕೃತಿಗಳನ್ನು ವಿವರಿಸಿ.
೭. ಅರಿಸ್ಟಾಟಲ್‌ರವರ 'ರಾಜ್ಯದ ವರ್ಗೀಕರಣ'ವನ್ನು ಸಂಕ್ಷಿಪ್ತವಾಗಿ ವಿವರಿಸಿ.
೮. ಕೌಟಿಲ್ಯನ ಪ್ರಕಾರ 'ರಾಜನ ಸ್ಥಾನಮಾನ'ವನ್ನು ಸಂಕ್ಷಿಪ್ತವಾಗಿ ವಿವರಿಸಿ.
೯. ಕೌಟಿಲ್ಯನ ಸಪ್ತಾಂಗ ಸಿದ್ಧಾಂತದಲ್ಲಿನ 'ಮಿತ್ರ' ಪರಿಕಲ್ಪನೆಯನ್ನು ವಿವರಿಸಿ.
೧೦. ಪ್ಲೇಟೋವಿನ ತತ್ವಜ್ಞಾನಿ ಅರಸನ ಪರಿಕಲ್ಪನೆಯನ್ನು ವಿವರಿಸಿ.

**ಈ. ಹತ್ತು ಅಂಕದ ಪ್ರಶ್ನೆಗಳು**

೧. ತತ್ವಜ್ಞಾನ ಅರಸರ ಆಳ್ವಿಕೆಯನ್ನು ಪ್ಲೇಟೋರವರು ಹೇಗೆ ಸಮರ್ಥಿಸಿದ್ದಾರೆ?

೨. ಪ್ಲೇಟೋವಿನ ಆದರ್ಶ ರಾಜ್ಯದ ಪರಿಕಲ್ಪನೆಯನ್ನು ವಿವರಣಾತ್ಮಕವಾಗಿ ವಿವರಿಸಿ.

೩. ಅರಿಸ್ಟಾಟಲ್‌ರವರ ಸರ್ಕಾರಗಳ ವರ್ಗೀಕರಣವನ್ನು ವಿವರಿಸಿ.

೪. ಕೌಟಿಲ್ಯನ ಸಪ್ತಾಂಗ ಸಿದ್ಧಾಂತವನ್ನು ವಿವರಿಸಿ.

೫. ಕೌಟಿಲ್ಯನ 'ರಾಜನ ಸ್ಥಾನಮಾನದ' ವಿವರಣೆಯನ್ನು ನೀಡಿ.

೬. ಕೌಟಿಲ್ಯನ 'ಅರ್ಥಶಾಸ್ತ್ರ ಗ್ರಂಥವು ಅರ್ಥಶಾಸ್ತ್ರವೇ ಅಥವಾ ರಾಜ್ಯಶಾಸ್ತ್ರವೇ' ವಿವರಿಸಿ.

೭. ರಾಜನೀತಿಜ್ಞರಲ್ಲಿ ಕೌಟಿಲ್ಯನ ಸ್ಥಾನ ಮತ್ತು ಕೊಡುಗೆಗಳನ್ನು ವಿವರಿಸಿ.

**ಉ. ಅಭ್ಯಾಸ ಚಟುವಟಿಕೆಗಳು**

೧. ಪ್ಲೇಟೋವಿನ ಆದರ್ಶ ರಾಜ್ಯ ಪರಿಕಲ್ಪನೆಯು ವಾಸ್ತವವಾಗಿ ಜಾರಿಗೆ ತರಲು ಸಾಧ್ಯವೇ? ಚರ್ಚಿಸಿ.

೨. ಪ್ಲೇಟೋರವರು ರಾಜಕೀಯ ಚಿಂತನೆಗೆ ನೀಡಿರುವ ಕೊಡುಗೆಗಳನ್ನು ತಿಳಿಸಿರಿ.

೩. ಕೌಟಿಲ್ಯನ ಅರ್ಥಶಾಸ್ತ್ರ ಗ್ರಂಥವು ಹೊಂದಿರುವ ರಾಜಕೀಯ ವಿಚಾರಗಳನ್ನು ಪಟ್ಟಿಮಾಡಿ.

೪. ಅರಿಸ್ಟಾಟಲ್‌ರವರ ಸರ್ಕಾರಗಳ ವರ್ಗೀಕರಣದಂತೆ ಆಧುನಿಕ ಜಗತ್ತಿನಲ್ಲಿರುವ ಸರ್ಕಾರಗಳ ವರ್ಗೀಕರಣ ಮಾಡಿ ಅದರ ಗುಣ-ದೋಷಗಳನ್ನು ಪರಾಮರ್ಶಿಸಿ.

# ಅಧ್ಯಾಯ ೨

# ಪ್ರಮುಖ ರಾಜಕೀಯ ಚಿಂತಕರು : ಭಾಗ - ೨

## ೨.೧ ಜೆ. ಎಸ್. ಮಿಲ್ (೧೮೦೬-೧೮೭೩)

ಸಾಂಪ್ರದಾಯಿಕ ಪಂಥದ ಕೊನೆಯ ಮುಖ್ಯ ರಾಜಕೀಯ ಅರ್ಥಶಾಸ್ತ್ರಜ್ಞರಾದ ಜೆ.ಎಸ್. ಮಿಲ್ ಹತ್ತೊಂಬತ್ತನೆಯ ಶತಮಾನದ ಮುಖ್ಯ ಉದಾರವಾದೀ ಚಿಂತಕರಾಗಿದ್ದಾರೆ.

### ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಸಾಂಪ್ರದಾಯಿಕ ಪಂಥದ ಪ್ರಮುಖ ಚಿಂತಕರಲ್ಲಿ ಒಬ್ಬರಾದ ಜೆ. ಎಸ್. ಮಿಲ್ ೧೮೦೬ರ ಮೇ, ೨೦ ರಂದು ಲಂಡನ್‌ನಲ್ಲಿ ಜನ್ಮ ತಾಳಿದರು. ಇವರ ತಂದೆ ಜೇಮ್ಸ್ ಮಿಲ್ ಸುಪ್ರಸಿದ್ಧ ಇತಿಹಾಸಕಾರ, ತತ್ವಜ್ಞಾನಿ ಹಾಗೂ ರಾಜಕೀಯ ಅರ್ಥಶಾಸ್ತ್ರಜ್ಞರಾಗಿದ್ದರಲ್ಲದೆ ತಮ್ಮ ಬುದ್ಧಿಶಕ್ತಿಗೆ ಬಹಳ ಪ್ರಸಿದ್ಧರಾಗಿದ್ದರು. ಇಂತಹ ಮೇಧಾವಿ ತಂದೆಯ ಮಗನಾಗಿ ಜನಿಸಿದ ಜೆ.ಎಸ್. ಮಿಲ್ ಸಹಜವಾಗಿಯೇ ಹೆಚ್ಚು ಬುದ್ಧಿವಂತಿಕೆಯನ್ನು ಮೈಗೂಡಿಸಿಕೊಂಡಿದ್ದರು. ತಮ್ಮ ಮೂರನೆ ವಯಸ್ಸಿನಲ್ಲಿಯೇ ಗ್ರೀಕ್ ವ್ಯಾಸಂಗವನ್ನು ಆರಂಭಿಸಿದ ಮಿಲ್ ಎಂಟನೆ ವಯಸ್ಸಿನಲ್ಲಿ ಲ್ಯಾಟಿನನ್ನು ಅಧ್ಯಯನ ಮಾಡಿದರು. ಚಿಕ್ಕ ವಯಸ್ಸಿನಲ್ಲಿಯೇ ಇವುಗಳ ಜೊತೆಗೆ ಇತಿಹಾಸ, ತರ್ಕಶಾಸ್ತ್ರಗಳನ್ನು ಆಳವಾಗಿ ಅಧ್ಯಯನ ಮಾಡಿದ ಇವರು ಹದಿಮೂರನೆ ವಯಸ್ಸಿಗೆ ರಾಜಕೀಯ ಅರ್ಥಶಾಸ್ತ್ರದ ಜ್ಞಾನವನ್ನು ಪಡೆದುಕೊಂಡರು. ಹದಿನೆಂಟನೆಯ ವಯಸ್ಸಿಗಾಗಲೇ ಅವರು ಬೆಂಥಮ್‌ನ ಕೃತಿಗಳನ್ನು ಪರಿಚಯಿಸಿ ಮುದ್ರಿಸಿದರು. ೧೮೨೩ ರಲ್ಲಿ ಮಿಲ್ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಒಬ್ಬ ನೌಕರರಾಗಿ ಸೇರಿ ನಂತರ ೨೫ ವರ್ಷಗಳ ಕಾಲ ಅದೇ ಹುದ್ದೆಯಲ್ಲಿದ್ದರು. ೧೮೫೮ ರಿಂದ ೧೮೬೮ರ ವರೆಗೆ ಬ್ರಿಟಿಷ್ ಸಂಸತ್ ಸದಸ್ಯರಾಗಿಯೂ ಸೇವೆ ಸಲ್ಲಿಸಿದರು. ಆ ಸಮಯದಲ್ಲಿ ಮಿಲ್ ಕಾರ್ಮಿಕರ ಕಲ್ಯಾಣ ಮತ್ತು ಸ್ತ್ರೀಯರ ಸ್ಥಾನಮಾನಕ್ಕಾಗಿ ಅವಿರತವಾಗಿ ಶ್ರಮಿಸಿದರು. ಇಂತಹ ಮೇಧಾವಿ ರಾಜಕೀಯ ಅರ್ಥಶಾಸ್ತ್ರಜ್ಞ ೧೮೭೩ ರಲ್ಲಿ ಮರಣ ಹೊಂದಿದರು.

### ಕೃತಿಗಳು

ಜೆ. ಎಸ್. ಮಿಲ್‌ರ ಪ್ರಮುಖ ಕೃತಿಗಳೆಂದರೆ

೧. ತರ್ಕಶಾಸ್ತ್ರದ ವಿಧಾನಗಳು (systems of logic, 1843)

೨. ರಾಜಕೀಯ ಅರ್ಥಶಾಸ್ತ್ರದಲ್ಲಿ ನಿರ್ಧಾರವಾಗದ ಕೆಲವು ಸಮಸ್ಯೆಗಳ ಮೇಲಿನ ಪ್ರಬಂಧಗಳು (Essys on some unsettled Problems in Political Economy, 1844)

೩. ರಾಜಕೀಯ ಅರ್ಥಶಾಸ್ತ್ರದ ತತ್ವಗಳು (Principles of Political Economy, 1848)
೪. ಸ್ವಾತಂತ್ರ್ಯದ ಬಗ್ಗೆ (On Liberty, 1853)
೫. ತುಷ್ಟಿಗುಣ ಪರವಾದ (Utilitarianism, 1863)
೬. ಸ್ತ್ರೀ ಪರಾಧೀನತೆ (Subjection of Women, 1869)
೭. ಆತ್ಮ ಚರಿತ್ರೆ (Auotobiography, 1873)
೮. ಸಮಾಜವಾದದ ಅಧ್ಯಾಯಗಳು (Lessons on Socialism, 1879) ಇತ್ಯಾದಿ

### ಉದಾರವಾದ

'ಉದಾರವಾದ' ಎಂಬ ಪದವನ್ನು ಪ್ರಥಮ ಬಾರಿಗೆ ೧೮೧೧ ರಲ್ಲಿ ಸ್ಪೇನ್‌ನಲ್ಲಿ ಬಳಸಲಾಯಿತು. ಅನಂತರ ೨೦ನೇ ಶತಮಾನದಲ್ಲಿ ಹೆಚ್ಚು ಪ್ರಬುದ್ಧಮಾನಕ್ಕೆ ಬಂದುದಾಗಿದೆ. 'ಉದಾರವಾದ' ಎಂಬ ಪದವು ಇಂಗ್ಲಿಷ್‌ನ 'ಲಿಬರಿಸಂ' ಎಂಬ ಪದದ ಅನುವಾದವಾಗಿದೆ. 'ಲಿಬರಿಸಂ' ಎಂಬ ಇಂಗ್ಲಿಷ್ ಪದವು ಲಿಬರ್ (liber) ಎಂಬ ಲ್ಯಾಟಿನ್ ಪದದಿಂದ ಬಂದಿದೆ. ಲಿಬರ್ (liber) ಎಂದರೆ ಸ್ವಾತಂತ್ರ್ಯ (liberty) ಎಂದರ್ಥ.

### ಉದಾರವಾದದ ಐತಿಹಾಸಿಕ ಬೆಳವಣಿಗೆ

ಉದಾರವಾದವು ಒಂದು ಸಂಕೀರ್ಣ ಸಿದ್ಧಾಂತವಾಗಿದ್ದು ಅದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅದರ ಐತಿಹಾಸಿಕ ಹಿನ್ನೆಲೆಯ ಅಧ್ಯಯನ ಅಗತ್ಯವಾಗಿದೆ.

### ೧. ಕೈಗಾರಿಕಾ ಕ್ರಾಂತಿಯ ಪ್ರಭಾವ

ಮಧ್ಯಯುಗದಲ್ಲಿ ಕೃಷಿ ಆಧಾರಿತ ಆರ್ಥಿಕ ವ್ಯವಸ್ಥೆಯಿತ್ತು. ಜಮಿನ್ದಾರಿ ವ್ಯವಸ್ಥೆಯಲ್ಲಿ ರೈತರು ಹೀನಾಯ ಬದುಕನ್ನು ನಿರ್ವಹಿಸುತ್ತಿದ್ದರು. ಅಂದಿನ ಯುಗದಲ್ಲಿ ವ್ಯಾಪಾರಿ ವರ್ಗಕ್ಕೆ ಮತ್ತು ಧಾರ್ಮಿಕ ಸಂಸ್ಥೆಗಳು ಆರ್ಥಿಕ ವ್ಯವಹಾರದಲ್ಲಿ ಭಾಗವಹಿಸುತ್ತಿದ್ದವು. ಆದರೆ ಸ್ವಾತಂತ್ರ್ಯವಿಲ್ಲದ್ದರಿಂದ ಅವುಗಳ ಸ್ಥಿತಿಯೂ ದುರ್ಭರವಾಗಿದ್ದಿತು. ಹದಿನೆಂಟನೇ ಶತಮಾನ ದಲ್ಲಿ ಪಶ್ಚಿಮ ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿ ನಡೆಯಿತು, ಅದರಿಂದ ಸಾಮಾನ್ಯ ವರ್ಗದಲ್ಲಿ ಯಾವುದೇ ಬದಲಾವಣೆಗಳಿದ್ದರೂ ಕೈಗಾರಿಕೋದ್ಯಮಿಗಳ ಒಂದು ಹೊಸ ವರ್ಗ ಅಸ್ತಿತ್ವಕ್ಕೆ ಬಂದಿತು. ಈ ಶ್ರೀಮಂತ ವರ್ಗ ಆಸ್ತಿ ಸಂಗ್ರಹಣೆಯನ್ನು ಮಿತಿಗೊಳಿಸುವ ಎಲ್ಲಾ ಕಾನೂನುಗಳನ್ನು ವಿರೋಧಿಸತೊಡಗಿತು. ಕಾಲಕ್ರಮೇಣ ಈ ವಿರೋಧವೆ ಅಂದರೆ ವ್ಯಕ್ತಿ ಜೀವನದ ಆರ್ಥಿಕ ವ್ಯವಹಾರಗಳಲ್ಲಿ ಯಾವುದೇ ರೀತಿಯ ಮಿತಿಯಿರಬಾರದು ಎಂಬುದು ಉದಾರವಾದದ ಭಾವನೆಗೆ ತಳಹದಿಯಾಯಿತು.

### ೨. ಕಲೆ ಮತ್ತು ಸಾಹಿತ್ಯದ ಪುನರುಜ್ಜೀವನ

ಕೈಗಾರಿಕಾ ಕ್ರಾಂತಿ ಎಲ್ಲಾ ಅಧಿಕಾರಗಳನ್ನು ಬಂಡವಾಳಗಾರರಿಗೆ ನೀಡಿತು, ಇದು ಎಲ್ಲಾ ವ್ಯವಸ್ಥೆಗಳನ್ನು ವಿರೋಧಿಸುವುದಕ್ಕೆ ಸಾಧ್ಯವಾಗುವುದರ ಜೊತೆಗೆ ವ್ಯಕ್ತಿ ಸ್ವಾತಂತ್ರ್ಯಕ್ಕೆ, ವ್ಯಕ್ತಿ ಕಲ್ಯಾಣಕ್ಕೆ ಹೆಚ್ಚು ಒತ್ತನ್ನು ನೀಡಿತು. ಇದರಿಂದ ಉದಾರವಾದದ ಬೆಳವಣಿಗೆಗೆ ಅವಕಾಶ ಕಲ್ಪಿಸಿತು.

೩. ಸುಧಾರಣೆಗಳು

ಮಧ್ಯಯುಗದಲ್ಲಿ ಪೋಪರು ಧಾರ್ಮಿಕ ನಿರಂಕುಶ ಪ್ರಭುಗಳಾಗಿದ್ದರು. ಇದನ್ನು ವಿರೋಧಿಸಿ ಮಾರ್ಟಿನ್ ಲೂಥರ್ ಮತ್ತು ಕಾಲ್ವಿನ್‌ರವರು ಪೋಪರ ಧಾರ್ಮಿಕ ಕ್ಷೇತ್ರದಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಹಾದಿ ಮಾಡಿಕೊಟ್ಟರು.

೪. ನಿರಂಕುಶಾಧಿಕಾರದ ಆಳ್ವಿಕೆಗೆ ವಿರೋಧ

ಹದಿನಾರು ಮತ್ತು ಹದಿನೇಳನೆ ಶತಮಾನದಲ್ಲಿ ಯುರೋಪ್‌ನಲ್ಲಿ ಉಗಮ ಸಿದ್ಧಾಂತದಲ್ಲಿ ನಂಬಿಕೆಯನ್ನು ಹೊಂದಿದ್ದು ನಿರಂಕುಶಾಧಿಕಾರನನ್ನು ವಿರೋಧಿಸುವ ಮೂಲಕ ಉದಾರವಾದದ ಬೆಳವಣಿಗೆಗೆ ಕಾರಣರಾದರು.

## ಉದಾರವಾದದ ಉದಯ ಮತ್ತು ಬೆಳವಣಿಗೆ

ಉದಾರವಾದದ ಮೂಲವನ್ನು ಗ್ರೀಕರ ಕಾಲದ ಪ್ರಜೆಗಳ ಅಭಿಪ್ರಾಯದ ಸ್ವಾತಂತ್ರ್ಯ ಮತ್ತು ರಾಜಕೀಯ ಸ್ವಾತಂತ್ರ್ಯಗಳಲ್ಲಿ ಗುರುತಿಸಬಹುದು. ಮಧ್ಯಯುಗದಲ್ಲಿ ಮಧ್ಯಕಾಲೀನ ಸಮಾಜದ ಅವನತಿಯಾಗಿ ಘರ್ಷಣೆಯ ಮೂಲಕವಾಗಿ ಶ್ರೀಮಂತ ಪ್ರಭುಗಳ ರಾಜ್ಯ ಪದ್ಧತಿ ನಾಶವಾಗಿ ಉದಾರತಾ ಬಂಡವಾಳಶಾಹಿ ರಾಜ್ಯ ಸ್ಥಾಪನೆಗೊಂಡಿತು.

ಪ್ರಪ್ರಥಮವಾಗಿ ಉದಾರವಾದದ ಸಂಪೂರ್ಣ ವಿವರಣೆ ಹಾಗೂ ಪ್ರಾಯೋಗಿಕ ಕಲ್ಪನೆಯನ್ನು ನೀಡಿದ ಕೀರ್ತಿ ಜೆ.ಎಸ್. ಮಿಲ್‌ರಿಗೆ ಸೇರುತ್ತದೆ. ಈತನು ವಿಜ್ಞಾನದ ಮೂಲಕ ಮಾತ್ರವೇ ಸತ್ಯವನ್ನು ಸಾಧಿಸಬಹುದು ಎಂಬ ನಂಬಿಕೆಯಿಂದ ತಮ್ಮ ವಿಚಾರವನ್ನು ಮಂಡಿಸಿ ರುತ್ತಾರೆ. ವಿಜ್ಞಾನವು ಅಭಿಪ್ರಾಯ ವ್ಯಕ್ತಪಡಿಸುವ ಹಾಗೂ ಭಾವನೆಯ ಸ್ವಾತಂತ್ರ್ಯವನ್ನು ಒಳಗೊಂಡಿರುತ್ತದೆ. ಈ ಸ್ವಾತಂತ್ರ್ಯವಿಲ್ಲದೆ ಸತ್ಯವನ್ನು ಕಂಡುಹಿಡಿಯಲಾಗುವುದಿಲ್ಲ. ಆಹಾರ, ಗಾಳಿ, ನೀರಿನಂತೆಯೇ ಸಮುದಾಯಕ್ಕೆ ಸ್ವಾತಂತ್ರ್ಯವೂ ಅತ್ಯವಶ್ಯಕವಾಗಿರುತ್ತದೆ. ಇವರು ಅಭಿಪ್ರಾಯ, ಮಾತು, ಬರವಣಿಗೆ ಹಾಗೂ ಪ್ರಕಟಣೆಯ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದ್ದಾರೆ. ರಚನಾ ವ್ಯವಸ್ಥೆಯಲ್ಲಿಯೂ ಸ್ವಾತಂತ್ರ್ಯವಿರ ಬೇಕೆಂದಿರುವ ಜೆ.ಎಸ್. ಮಿಲ್ ಯಾವುದೇ ಸಮಸ್ಯೆಯ ಚರ್ಚೆಯಲ್ಲಿ ಬಹುಸಂಖ್ಯಾತರು ಮತ್ತು ಅಲ್ಪ ಸಂಖ್ಯಾತ ರಿಬ್ಬರಿಗೂ ಸಮಸ್ಯೆಗಳ ಪರಿಹಾರದಲ್ಲಿ ಜಾತ್ಯಾತೀತ ಭಾವನೆ ಹಾಗೂ ಅಭಿವೃದ್ಧಿಗೊಳ್ಳುವಿಕೆ, ವ್ಯಕ್ತಿಯ ಸಾಮರ್ಥ್ಯದ ಬಗ್ಗೆ ನಂಬಿಕೆ ಮುಂತಾದವು ಸೇರಿದೆ ಎಂದಿದ್ದಾರೆ.

ಮಿಲ್‌ರವರು ಸಮಾನವಾದ ಅವಕಾಶ ನೀಡಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇದರಲ್ಲಿ ವ್ಯಕ್ತಿ ಸ್ವಾತಂತ್ರ್ಯವೂ ಸೇರಿದೆ. ವಾಕ್ ಸ್ವಾತಂತ್ರ್ಯ, ಅಭಿಪ್ರಾಯದ ಸ್ವಾತಂತ್ರ್ಯ, ಸಂಘ ರಚಿಸುವ ಸ್ವಾತಂತ್ರ್ಯ, ವ್ಯಕ್ತಿಯ ವ್ಯಕ್ತಿತ್ವ ಹಾಗೂ ಗೌರವದ ಬಗ್ಗೆ ನಂಬಿಕೆ, ತಾಳ್ಮೆ, ಧರ್ಮವನ್ನು ರಾಜಕೀಯದಿಂದ ಪ್ರತ್ಯೇಕಿಸುವಿಕೆ, ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳ ಪರಿಹಾರದಲ್ಲಿ ಜಾತ್ಯಾತೀತ ಭಾವನೆ ಹಾಗೂ ಅಭಿವೃದ್ಧಿಗೊಳ್ಳುವಿಕೆ, ವ್ಯಕ್ತಿಯ ಸಾಮರ್ಥ್ಯದ ಬಗ್ಗೆ ನಂಬಿಕೆ ಮುಂತಾದವು ಸೇರಿವೆ.

ಜೆ.ಎಸ್. ಮಿಲ್ ರವರು ವ್ಯಕ್ತಿಯ ದೈಹಿಕ, ಮಾನಸಿಕ, ಆರ್ಥಿಕ ವಿಕಾಸಕ್ಕೆ ಸ್ವಾತಂತ್ರ್ಯವೇ ಮೂಲ ಆಧಾರವೆಂದು ಹೇಳಿದ್ದಾರೆ. ತಮ್ಮ ಕೃತಿಯಾದ 'ಆನ್ ಲಿಬರ್ಟಿ'ಯಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ಪ್ರಾಮುಖ್ಯತೆ ನೀಡಿದ್ದು, ವ್ಯಕ್ತಿಗೆ ಸ್ವಾತಂತ್ರ್ಯವಿದ್ದಾಗ ಮಾತ್ರವೇ ಸಮಾಜದ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯ ಎಂದಿದ್ದಾರೆ.

ರಾಜ್ಯವು ಅನಗತ್ಯವಾಗಿ ವ್ಯಕ್ತಿಯ ಜೀವನ ಹಾಗೂ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡುವುದನ್ನಾಗಲಿ ಅಥವಾ ನಿಯಂತ್ರಣ ಹೇರುವುದನ್ನಾಗಲೀ ಮಿಲ್ ವಿರೋಧಿಸಿದ್ದಾರೆ. ವ್ಯಕ್ತಿಗೆ ತನಗೆ ಸರಿ ಎನಿಸಿದ್ದನ್ನು ಅನುಸರಿಸಲು ಸ್ವಾತಂತ್ರ್ಯವಿರಲೇಬೇಕು. ಆದರೆ ಒಬ್ಬ ವ್ಯಕ್ತಿಯ ವರ್ತನೆ ಇತರೇ ವ್ಯಕ್ತಿ ಅಥವಾ ವ್ಯಕ್ತಿಗಳ ಮೇಲೆ ಪ್ರತಿಕೂಲ ಪರಿಣಾಮ ಉಂಟು ಮಾಡಿದಲ್ಲಿ ಮಾತ್ರವೇ ರಾಜ್ಯ ಮಧ್ಯ ಪ್ರವೇಶಿಸಿ ವ್ಯಕ್ತಿಯ ವರ್ತನೆಯನ್ನು ನಿಯಂತ್ರಿಸಬೇಕು.

ರಾಜ್ಯವು ಕಾನೂನುಗಳ ಮೂಲಕ ವ್ಯಕ್ತಿಯನ್ನು ನಿಯಂತ್ರಿಸುವ ಪ್ರಯತ್ನ ಸರಿಯಲ್ಲ ಎಂಬುದು ಮಿಲ್‌ರ ಸಲಹೆ. ಹಾಗೂ ರಾಜ್ಯವು ವ್ಯಕ್ತಿಯ ನ್ಯಾಯವಾದ ಸ್ವಾತಂತ್ರ್ಯವನ್ನು ರಕ್ಷಿಸಬೇಕು. ವ್ಯಕ್ತಿಗೆ ತಾನು ಏನಾಗಿರಬೇಕು ಹಾಗೂ ಯಾವುದು ಸರಿ ಎಂಬುದು ಗೊತ್ತಿದ್ದು, ಸರ್ಕಾರಕ್ಕೆ ವ್ಯಕ್ತಿಯ ಮೇಲೆ ಯಾವುದು ಸರಿ ಎಂದು ಹೇಳುವ ಅಧಿಕಾರವಿಲ್ಲ ಎಂದು ಮಿಲ್ ಅಭಿಪ್ರಾಯ ಪಟ್ಟಿದ್ದಾರೆ.

ಜೆ.ಎಸ್. ಮಿಲ್ ರಾಜ್ಯದ ಕಾರ್ಯಗಳು ಮಿತಿಗೆ ಒಳಪಟ್ಟಿರಬೇಕು ಎಂದಿದ್ದಾರೆ. ರಾಜ್ಯದ ಕಾರ್ಯವ್ಯಾಪ್ತಿ ಹೆಚ್ಚಾದಂತೆ ವ್ಯಕ್ತಿಯ ಸ್ವಾತಂತ್ರ್ಯ ಮೊಟಕುಗೊಳ್ಳುತ್ತದೆ. ಆದುದರಿಂದ ರಾಜ್ಯದ ಕಾರ್ಯ ಕೆಲವೇ ಕೆಲವು ಪ್ರಮಾಣದಲ್ಲಿರಬೇಕು ಎಂದು ಹೇಳಿದ್ದಾರೆ. ಹೀಗೆ ಜೆ.ಎಸ್. ಮಿಲ್ ವ್ಯಕ್ತಿಗೆ ಸ್ವಾತಂತ್ರ್ಯವಿರಬೇಕೆಂದು ಹೇಳಿದ ಒಬ್ಬ ಶ್ರೇಷ್ಠ ಉದಾರವಾದಿ ಚಿಂತಕರಾಗಿದ್ದಾರೆ.

### ಆ. ಸ್ವಾತಂತ್ರ್ಯ ಮತ್ತು ಅಲ್ಪ ಸಂಖ್ಯಾತರ ಹಕ್ಕುಗಳ ಪರಿಭಾವನೆ

ಜೆ.ಎಸ್. ಮಿಲ್‌ರವರು ತಮ್ಮ ಸಾಂಪ್ರದಾಯಿಕ ಉದಾರವಾದದಲ್ಲಿ ಅಲ್ಪಸಂಖ್ಯಾತರ ಹಕ್ಕುಗಳನ್ನು ಕ್ರೋಢೀಕರಣ ಮಾಡಿದ್ದಾರೆ. ಇವರ ಪ್ರಕಾರ ಅಲ್ಪ ಸಂಖ್ಯಾತರು ತಮ್ಮೆಲ್ಲಾ ಧಾರ್ಮಿಕ, ಸಾಂಸ್ಕೃತಿಕ ಹಕ್ಕುಗಳನ್ನು ರಕ್ಷಿಸಿಕೊಂಡು ಹೋಗಲು ಮುಕ್ತ ಅವಕಾಶವಿರಬೇಕು. ಅಲ್ಪಸಂಖ್ಯಾತರ ಹಕ್ಕುಗಳು ರಕ್ಷಿತವಾಗಲು ಅವರಿಗೆ ಶಾಸನೀಯ ಸ್ಥಾನಗಳಲ್ಲೂ ಪ್ರಾತಿನಿಧ್ಯ ವಿರಬೇಕು. ಜೆ.ಎಸ್.ಮಿಲ್‌ರ ಅಭಿಪ್ರಾಯದಲ್ಲಿ ನೈಜ ಸಮಾನತೆಯ ಪ್ರಜಾ ಪ್ರಭುತ್ವದಲ್ಲಿ ತಮ್ಮ ಹಕ್ಕುಗಳ ರಕ್ಷಣೆಗೆ ಪ್ರತಿಯೊಂದು ವರ್ಗವೂ ಮತ್ತು ಯಾವುದೇ ವರ್ಗವೂ ಪ್ರಮಾಣಾನುಗುಣವಾಗಿ ಪ್ರತಿನಿಧಿಸಲ್ಪಡಬೇಕೇ ಹೊರತು ಅಸಮ ಪ್ರಮಾಣಾನುಗುಣವಾಗಿ ಅಲ್ಲ. ಆದ್ದರಿಂದ ಅಲ್ಪಸಂಖ್ಯಾತರಲ್ಲಾದರೂ ಶಾಸಕಾಂಗದಲ್ಲಿ ಪ್ರಾತಿನಿಧ್ಯ ಹೊಂದಿರಬೇಕು ಎಂದಿದ್ದಾರೆ. ಆದ್ದರಿಂದಲೇ ಜೆ.ಎಸ್.ಮಿಲ್‌ರವರು ಪ್ರಮಾಣಾವಾರು ಪ್ರಾತಿನಿಧ್ಯ ಮಾದರಿಯ ಚುನಾವಣಾ ವಿಧಾನವನ್ನು ಸಮರ್ಥಿಸಿದ್ದಾರೆ.

ವ್ಯಕ್ತಿ ಸ್ವಾತಂತ್ರ್ಯ ಮತ್ತು ಮುಕ್ತ ಪೈಪೋಟಿಯನ್ನು ಪ್ರತಿಪಾದಿಸಿದ ಇವರು ಕೆಲವೊಂದು ಆರ್ಥಿಕ ಚಟುವಟಿಕೆಗಳಲ್ಲಿ ಸರ್ಕಾರದ ಮಧ್ಯಸ್ಥಿಕೆಯು ಅನುಕೂಲವೆಂದು ಪರಿಗಣಿಸಿದ್ದಾರೆ. ಸರ್ಕಾರದ ದುಡಿಮೆಯ ಅವಧಿಯ ನಿಯಂತ್ರಣ, ಲೋಕೋಪಯೋಗಿ ಕಾರ್ಯಗಳು, ವೈಜ್ಞಾನಿಕ ಪ್ರಯೋಗ, ಶಿಕ್ಷಣ, ದತ್ತಿ ಮತ್ತು ದಾನ ಸಂಸ್ಥೆಗಳ ಆಡಳಿತ ಅನುಭೋಗಿ ಆಸಕ್ತಿಗಳ ರಕ್ಷಣೆ, ಗಲಭೆಗಳ ನಿಯಂತ್ರಣ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅನುಷ್ಠಾನಕ್ಕೆ ತಂದ ಯಾವೊಂದು ಶಾಸನಗಳು ಒಳ್ಳೆಯದೆಂದೇ ಅಭಿಪ್ರಾಯ ಪಡುತ್ತಾರೆ. ಹೀಗೆ ಸರ್ಕಾರದ ಮಧ್ಯಸ್ಥಿಕೆ ಮತ್ತು ವ್ಯಕ್ತಿಯ ಹಕ್ಕುಗಳ ಬಗ್ಗೆ ಹೆಚ್ಚು ಸಡಿಲ ಧೋರಣೆಯನ್ನು ತಳೆದಿದ್ದಾರೆ.

### ೨.೨ ಕಾರ್ಲ್‌ಮಾರ್ಕ್ಸ್ (೧೮೧೮ - ೧೮೮೩)

### ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಕಾರ್ಲ್‌ಮಾರ್ಕ್ಸ್ ೧೮೧೮ರ ಮೇ ತಿಂಗಳ ೫ ರಂದು ಆಗ್ನೇಯ ಜರ್ಮನಿಯ ಪ್ರಯರಿ ಎಂಬಲ್ಲಿ ಮಧ್ಯಮ ವರ್ಗಕ್ಕೆ ಸೇರಿದ ವಕೀಲರೊಬ್ಬರ ಮಗನಾಗಿ ಜನಿಸಿದರು. ಅವರ ತಂದೆಯು ಒಬ್ಬ ಯೆಹೂದಿಯಾಗಿದ್ದು ೧೮೨೪ ರಲ್ಲಿ ಪ್ರೊಟೆಸ್ಟೆಂಟ್ (Protestant) ಮತದ ಅನುಯಾಯಿಯಾದರು. ಕಾರ್ಲ್‌ಮಾರ್ಕ್ಸ್ ಬಾನ್ ಮತ್ತು ಬರ್ಲಿನ್ ವಿಶ್ವವಿದ್ಯಾನಿಲಯ ಗಳಲ್ಲಿ ನ್ಯಾಯಶಾಸ್ತ್ರ, ಇತಿಹಾಸ ಮತ್ತು ತತ್ವಜ್ಞಾನಗಳನ್ನು ಅಧ್ಯಯನ ಮಾಡಿದರು. ಅವರು ೧೮೪೧ ರಲ್ಲಿ ತಮ್ಮ ೩೨ನೇ ವಯಸ್ಸಿನಲ್ಲಿ ಹೆಗೆಲ್‌ನ ತತ್ವಗಳ ಆಧಾರದ ಮೇಲೆ 'ಸಂತೋಷವೇ ಸರ್ವಸ್ವ' ಎಂಬ ಎಪಿಕ್ಯುರಸ್‌ನ ತತ್ವಜ್ಞಾನದ ಮೇಲಿನ ತನ್ನ ಡಾಕ್ಟರಲ್ ಪದವಿಯ ಪೌಢ ಪ್ರಬಂಧವನ್ನು ರಚಿಸಿ ಜೇನಾ ವಿಶ್ವವಿದ್ಯಾನಿಲಯದ ಶಿಕ್ಷಕ ವೃತ್ತಿಯನ್ನು ಪಡೆಯುವ ಇವರ ಬಯಕೆ ಈಡೇರಲಿಲ್ಲ. ಆದ್ದರಿಂದಾಗಿ ಕಾರ್ಲ್‌ಮಾರ್ಕ್ಸ್ ತಮ್ಮ ಗಮನವನ್ನು ಪತ್ರಿಕೋದ್ಯಮದ ಕಡೆ ಕೇಂದ್ರೀಕರಿಸಿದರಲ್ಲದೆ, ೧೮೪೨ರಲ್ಲಿ **'ರೈಸ್ ಪತ್ರಿಕೆ'**ಯ ಪ್ರಧಾನ ಸಂಪಾದಕರಾಗಿ ನೇಮಕಗೊಂಡರು. ಆದರೆ ಈ ಪತ್ರಿಕೆಯು ಮಾರ್ಕ್ಸ್ ರವರ ಕ್ರಾಂತಿಕಾರಿ ಪ್ರಜಾಪ್ರಭುತ್ವ ತತ್ವಗಳನ್ನು ಪ್ರಕಟಿಸುತ್ತಿತ್ತಲ್ಲದೆ, ಇಡೀ ಕಾರ್ಮಿಕ ವರ್ಗವನ್ನೇ ಒಂದುಗೂಡಿಸಿ ಸರ್ಕಾರದ ವಿರುದ್ಧ ಬಂಡೇಳುವಂತೆ ಪ್ರಚೋದಿಸುತ್ತಿದ್ದ ಅಭಿಪ್ರಾಯಗಳನ್ನು ಪ್ರಕಟಿಸುತ್ತಿದ್ದ ಕಾರಣ ಸರ್ಕಾರವು ೧೮೪೩ ರಲ್ಲಿ ಕಾನೂನಿನ ಮೂಲಕ ಈ ಪತ್ರಿಕೆಯನ್ನು ರದ್ದು ಪಡಿಸಿತು. ಇದೇ ಸಮಯದಲ್ಲಿ ಮಾರ್ಕ್ಸ್ ಚೆನ್ನಿ ಪೋನ್ ವೆಸ್ಟ್ ಪಾಲನ್ ಅವರನ್ನು ತಮ್ಮ ಬಾಳ ಸಂಗಾತಿಯಾಗಿ ಸ್ವೀಕರಿಸಿದರು. ೧೮೪೩ರ ಕೊನೆಯ ಭಾಗದಲ್ಲಿ ಜರ್ಮನ್ ಫ್ರೆಂಚ್ ವಾರ್ಷಿಕ ನಿಯತಕಾಲಿಕೆ ಪತ್ರಿಕೆಯ ಸಂಪಾದಕರಾಗಿ ನೇಮಕಗೊಂಡ ಇವರು **"ಹೆಗೆಲ್‌ನ ಹಕ್ಕು ತತ್ವದ ಮೇಲಿನ ವಿಮರ್ಶೆಯ ಪೀಠಿಕೆ"** ಎಂಬ ಲೇಖನವನ್ನು ಪ್ರಕಟಿಸಿದರು. ಇದೇ ವೇಳೆಗೆ ಮಾರ್ಕ್ಸ್‌ನ ಜೀವನವಿಡೀ ಸಹಕರಿಸಿದಂತಹ ಫ್ರೆಡರಿಕ್ ಏಂಜೆಲ್ಸ್‌ರ ಪರಿಚಯ ಮಾರ್ಕ್ಸ್ ಅವರಿಗುಂಟಾಯಿತು. ೧೮೪೭ ರಲ್ಲಿ ಮಾರ್ಕ್ಸ್ ತನ್ನ **"ತತ್ವ ಶಾಸ್ತ್ರದ ದಾರಿದ್ರ್ಯ"** ಎಂಬ ಗ್ರಂಥವನ್ನು ರಚಿಸಿ ಪೌಧಾನ್‌ರ "ದಾರಿದ್ರ್ಯದ ತತ್ವಶಾಸ್ತ್ರ" ಎಂಬ ಗ್ರಂಥವನ್ನು

ಸಂಪೂರ್ಣವಾಗಿ ಕಡೆಗಣಿಸುವಂತೆ ಮಾಡಿದರು. ಇವರ ಕ್ರಾಂತಿಕಾರಕ ಮನೋಭಾವನೆ ಯಿಂದಾಗಿ ಪ್ರಷ್ಯಾ ಸರ್ಕಾರದ ಕೋರಿಕೆಯ ಮೇರೆಗೆ ಇವರನ್ನು ಪ್ಯಾರಿಸ್‌ನಿಂದ ಗಡಿಪಾರು ಮಾಡಲಾಯಿತು. ಅಲ್ಲಿಂದ ಬ್ರಿಸಲ್ಸ್‌ಗೆ ತೆರಳಿದ ಮಾರ್ಕ್ಸ್ ಏಂಜೆಲ್ಸ್‌ರೊಂದಿಗೆ ಕಮ್ಯೂನಿಸ್ಟ್ ಚಳುವಳಿಯ ರಹಸ್ಯ ಪ್ರಚಾರಕ ಸಂಸ್ಥೆಗೆ ಸೇರಿ ೧೮೪೮ ರಲ್ಲಿ ಪ್ರಖ್ಯಾತ "ಕಮ್ಯೂನಿಸ್ಟ್ ಪ್ರಣಾಳಿಕೆ"ಯನ್ನು ಹೊರತಂದರು. ಈ ಕೃತಿಯು ಬಂಡವಾಳಶಾಹಿ ವ್ಯವಸ್ಥೆಯ ನ್ಯೂನತೆಗಳನ್ನು ಪ್ರತಿಪಾದಿಸಿತು.

೧೮೪೮ ರಿಂದ ೧೮೮೩ ರ ಅವರ ಮರಣದವರೆಗೂ ಮಾರ್ಕ್ಸ್ ಬಹಳ ಕಷ್ಟದ ಜೀವನ ನಡೆಸಿದರು. ಅವರನ್ನು ಫೆಬ್ರವರಿ ೧೮೪೮ ರಲ್ಲಿ ಬೆಲ್ಜಿಯಂನಿಂದ ಮತ್ತು ಮೇ ೧೮೪೯ ರಲ್ಲಿ ಜರ್ಮನಿಯಿಂದ ಮತ್ತು ಜೂನ್ ೧೮೪೯ ರಲ್ಲಿ ಪ್ಯಾರಿಸ್‌ನಿಂದ ಗಡಿಪಾರು ಮಾಡಲಾಯಿತು. ಆಗ ಅವರು ಲಂಡನ್‌ಗೆ ಹೋಗಿ ತಮ್ಮ ಉಳಿದ ಜೀವಮಾನವನ್ನೆಲ್ಲ ಲಂಡನ್ನಿನ ಬ್ರಿಟಿಷ್ ಮ್ಯೂಸಿಯಂ ಗ್ರಂಥ ಬಂಡಾರದಲ್ಲಿಯೇ ಕಳೆದರು. ಈ ಅವಧಿಯಲ್ಲಿ ಅವರ ಬಹುತೇಕ ಬರಹಗಳು ಪ್ರಕಟವಾದವು. ಸ್ವತಂತ್ರ ಮನೋಭಾವನೆ ಮತ್ತು ಕ್ರಾಂತಿಕಾರಿ ಪ್ರವೃತ್ತಿಯನ್ನು ಹೊಂದಿದ್ದ ಕಾರ್ಲ್‌ಮಾರ್ಕ್ಸ್ ಜೀವಮಾನವೆಲ್ಲ ಹಣಕಾಸಿನ ಸಂಕಷ್ಟ ದಲ್ಲಿಯೇ ಕಳೆದರು. ೧೮೮೧ರ ಡಿಸೆಂಬರ್‌ನಲ್ಲಿ ಅವರ ಪತ್ನಿ ತೀರಿಕೊಂಡಳು. ೧೮೮೩ರ ಮಾರ್ಚ್ ೧೪ ರಂದು ಮಾರ್ಕ್ಸ್ ತಮ್ಮ ಸುಖಾಸನದಲ್ಲಿರುವ ವೇಳೆಯಲ್ಲಿ ಪ್ರಶಾಂತ ವಾಗಿಯೇ ಮರಣಹೊಂದಿದರು.

**ಕೃತಿಗಳು :** ಕಾರ್ಲ್‌ಮಾರ್ಕ್ಸ್‌ರವರು ಬರೆದ ಪ್ರಮುಖ ಗ್ರಂಥಗಳು ಕೆಳಕಂಡಂತಿವೆ-

೧. ಹೆಗೆಲ್‌ರ ಹಕ್ಕು ತತ್ವದ ಮೇಲೆ ವಿಮರ್ಶೆಯ ಪೀಠಿಕೆ (1843, Introduction to the Critique of Hegelion Phylosophy)

೨. ತತ್ವಶಾಸ್ತ್ರದ ದಾರಿದ್ರ್ಯತೆ (1847, Poverty of Philosophy)

೩. ಸಮಾಜವಾದ ಪ್ರಣಾಳಿಕೆ (1848, Communist Manifesto)

೪. ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆ (1859, A Critiqui of Political Economy)

೫. ದಾಸ್ ಕ್ಯಾಪಿಟಲ್ (1867, 1885, 1894, Das Capital)

೬. ದಿ ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ ( 1848, Communist Manifesto, with Engels)

**ಆ. ವೈಜ್ಞಾನಿಕ ಸಮಾಜವಾದ (ಸಮತಾವಾದ)**

ಮಾನವನಿಂದ ಮಾನವನ ಶೋಷಣೆ ಇಲ್ಲದ ಸಮಾಜವಾದವನ್ನು ಒಂದು ವಿವೇಚನೆ ಶೀಲ ಆಧಾರದ ಮೇಲೆ ಸ್ಥಾಪಿಸುವ ಉದ್ದೇಶದಿಂದ ಸಮಾಜದಲ್ಲಿ ಪ್ರತಿಯೊಬ್ಬರು ಶಾಂತಿಯುತವಾಗಿ, ಸೌಹಾರ್ದಯುತವಾಗಿ ಮುಕ್ತ ಸ್ವಾತಂತ್ರ್ಯವನ್ನು ಅನುಭವಿಸುತ್ತಾ ತಮ್ಮ ವ್ಯಕ್ತಿತ್ವ ಹಾಗೂ ಸಾಮರ್ಥ್ಯವನ್ನು ಪರಿಪೂರ್ಣವಾಗಿ ಬೆಳೆಸಿಕೊಳ್ಳಲು ಅವಕಾಶವನ್ನು ಹೊಂದಿರುತ್ತಾರೆ. ಈ ಸಮಾಜವನ್ನು ಮಾರ್ಕ್ಸ್‌ರವರು ಸಮತಾವಾದಿ ಸಮಾಜವೆಂದು ಕರೆದಿದ್ದು ಅದೊಂದು ವರ್ಗರಹಿತ, ರಾಜ್ಯರಹಿತ ಆದರ್ಶ ಸಮಾಜವಾಗಿರುತ್ತದೆ. ಇದನ್ನು

ವೈಜ್ಞಾನಿಕವಾಗಿ ಸಮರ್ಥಿಸಿದ ಕಾರ್ಲ್‌ಮಾರ್ಕ್ಸ್ ವೈಜ್ಞಾನಿಕ ಸಮಾಜವಾದ ಎಂದು ಕರೆದಿದ್ದಾರೆ.

ಸಮತಾವಾದ ಸಿದ್ಧಾಂತವನ್ನು ಕಾರ್ಲ್‌ಮಾರ್ಕ್ಸ್‌ನ ಚಿಂತನೆಯಿಂದಲೇ ಪ್ರಾರಂಭಿಸಿದರೂ, ಪ್ರಾಚೀನ ಗ್ರೀಕ್ ರಾಜಕೀಯ ತತ್ವಜ್ಞಾನಿ ಪ್ಲೇಟೋ, ಸರ್ ಥಾಮಸ್ ಮೋರ್, ಸೈಂಟ್ ಸೈಮನ್, ರಾಬರ್ಟ್ ಓವೆನ್, ಚಾರ್ಲ್ಸ್ ಫ್ಯೂರಿಯರ್, ಜಾನ್ ಗ್ರೇ, ಲೂಯಿಸ್ ಬ್ಲಾನ್ಸ್ ಇವರೇ ಮೊದಲಾದವರ ಬರವಣಿಗೆಯಲ್ಲಿಯೂ ಗುರುತಿಸಬಹುದಾಗಿದೆ. ಆದರೆ ಇವರ ಚಿಂತನೆಯನ್ನು ಆದರ್ಶ ತತ್ವಗಳೆಂದೇ ಕಾರ್ಲ್‌ಮಾರ್ಕ್ಸ್ ಟೀಕಿಸಿದ್ದು, ವೈಜ್ಞಾನಿಕ ಸಮಾಜ ವಾದಿ ಸಿದ್ಧಾಂತವನ್ನು ಮೊದಲ ಬಾರಿಗೆ ಸಿದ್ಧಪಡಿಸಿದರು. ಇವರು ಸಮಾಜವಾದವನ್ನು ವೈಜ್ಞಾನಿಕಗೊಳಿಸಲು ಪ್ರಯತ್ನಿಸಿದ್ದು ಹಾಗೂ ಇದು ವೈಜ್ಞಾನಿಕವೂ ಹಾಗೂ ಕಾರ್ಯರೂಪಕ್ಕೆ ತರಲು ಸಾಧ್ಯವೂ ಆಯಿತು. ಆದ್ದರಿಂದಲೇ ಕಾರ್ಲ್‌ಮಾರ್ಕ್ಸ್‌ರನ್ನು ವೈಜ್ಞಾನಿಕ ಸಮಾಜವಾದ ಅಥವಾ ಸಮತಾವಾದದ ಪಿತಾಮಹರೆಂದು ಕರೆಯಲಾಗುತ್ತದೆ. ಮಾರ್ಕ್ಸ್‌ರ ಸಿದ್ಧಾಂತವನ್ನು ರಷ್ಯಾದಲ್ಲಿ (೧೯೧೭ ರ ಕ್ರಾಂತಿ) ಕೆಲವೊಂದು ಮಾರ್ಪಾಡುಗಳೊಂದಿಗೆ ಅಳವಡಿಸಿ ಕೊಳ್ಳಲಾಗಿತ್ತು.

ಕಾರ್ಲ್‌ಮಾರ್ಕ್ಸ್‌ನ ಸಮತಾವಾದವು ಮೂರು ಮುಖ್ಯ ಅಂಶ ಅಥವಾ ಪಂಥದಿಂದ ಪ್ರಭಾವಿತವಾಗಿದೆ. ಮೊದಲನೆಯದಾಗಿ, ಮಾರ್ಕ್ಸ್‌ನ "ತಾರ್ಕಿಕ ಭೌತಿಕವಾದವು" ಜರ್ಮನಿಯ ಹೆಗೆಲ್‌ನ ಚಿಂತನೆಯಿಂದಲೂ, ಎರಡನೆಯದಾಗಿ, "ಉತ್ಪಾದನಾ ಪ್ರಕ್ರಿಯೆ ಯಲ್ಲಿ ಕಾರ್ಮಿಕನೇ ಬಹುಮುಖ್ಯ ಪಾತ್ರಧಾರಿ" ಎಂಬ ತತ್ವವು ಇಂಗ್ಲೆಂಡಿನ ಅರ್ಥಶಾಸ್ತ್ರಜ್ಞರ ಚಿಂತನೆಯಿಂದಲೂ, ಮೂರನೆಯದಾಗಿ "ಕ್ರಾಂತಿ" ಯ ಮೂಲಕ ಸಮಾಜದ ಬದಲಾವಣೆ ಸಾಧ್ಯ ಎಂಬ ತತ್ವವು ಫ್ರಾನ್ಸ್‌ನ ಮಹಾಕ್ರಾಂತಿ ಹಾಗೂ ಫ್ರಾನ್ಸ್‌ನ ಸಮಾಜವಾದಿ ಚಿಂತಕರ ಬರವಣಿಗೆಯಿಂದ ಪ್ರಭಾವಿತವಾಗಿರುವುದು ಕಂಡುಬರುತ್ತದೆ.

### ಮಾರ್ಕ್ಸ್‌ವಾದದ ಮೂಲ ತತ್ವಗಳು

ಕಾರ್ಲ್‌ಮಾರ್ಕ್ಸ್‌ನ ಸಮತಾವಾದದ ಮೂಲ ತತ್ವಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದಾಗಿದೆ.

### ಅ. ದ್ವಂದ್ವಾತ್ಮಕ ಅಥವಾ ತಾರ್ಕಿಕ ಭೌತಿಕವಾದ

ಡೈಯಲೆಕ್ಟಿಕ್ (Dialectic) ಎಂಬ ಪದವು ಗ್ರೀಕ್‌ನ ಡೈಯಲಾಗೊ (Dialego) ಎಂಬ ಪದದಿಂದ ಬಂದಿದೆ. ಅಂದರೆ 'ಸಂವಾದ' ಅಥವಾ 'ಚರ್ಚೆ' ಎಂದರ್ಥ. ಯಾವುದೇ ವಿಚಾರವನ್ನು ಮಂಡಿಸಿ, ಚರ್ಚಿಸಿ ಅನಂತರ ಸತ್ಯಾನ್ವೇಷಣೆಯ ಮೂಲಕ ಒಂದು ಒಪ್ಪುವಂತಹ ತೀರ್ಮಾನಕ್ಕೆ, ವಿಚಾರಕ್ಕೆ ಬರುವುದು, ಆದ್ದರಿಂದ ಡೈಲೆಕ್ಟಿಕ್ ಎಂದರೆ ಬದಲಾವಣೆಯ ಪ್ರಕ್ರಿಯೆ ಎಂದರಿವಾಗುತ್ತದೆ.

ಗ್ರೀಕ್‌ರ ನಂತರ ಜರ್ಮನಿಯ ತತ್ವಜ್ಞಾನಿ ಹೆಗೆಲ್ ಡೈಯಲೆಕ್ಟಿಕಲ್ ಎಂಬ ಪದವನ್ನು ವೈಜ್ಞಾನಿಕವಾಗಿ ಉಪಯೋಗಿಸಿದರು. ಹೆಗೆಲ್ ಪ್ರಕಾರ ಇತಿಹಾಸದ ಬದಲಾವಣೆಯು

ಡೈಯಲೆಕ್ಟಿಕಲ್ ಪ್ರಕ್ರಿಯೆಯಾಗಿದ್ದು, ಈ ಪ್ರಕ್ರಿಯೆಯನ್ನು ಹೆಗೆಲ್ (ಅ) ವಾದ (Thesis), (ಆ) ಪ್ರತಿವಾದ (Anti thesis) ಮತ್ತು (ಇ) ಸಂಯೋಜಕವಾದ (Synthesis) ಎಂದು ಕರೆದಿದ್ದಾರೆ. ಪ್ರತಿಯೊಂದು ಒಂದು ನಿರ್ದಿಷ್ಟ ಕಾಲದ ಇತಿಹಾಸವು ವಾದವಾಗಿರುತ್ತದೆ. ಆದರೆ ಸ್ವಲ್ಪ ಕಾಲದ ನಂತರ ಪ್ರತಿವಾದ ಬೆಳವಣಿಗೆಯಾಗಿರುತ್ತದೆ. ಇವೆರಡರ (ವಾದ-ಪ್ರತಿವಾದ) ನಡುವಿನ ಚರ್ಚೆ, ತರ್ಕ, ಸಂವಾದದ ಪರಿಣಾಮವಾಗಿ ಈ ಎರಡಕ್ಕೂ ಉನ್ನತವಾದ "ಸಂಯೋಜಕವಾದ" ಬೆಳವಣಿಗೆಯಾಗುತ್ತದೆ. ಈ ಪ್ರಕ್ರಿಯೆ ನಿರಂತರವಾಗಿ ಬದಲಾಗುತ್ತಿರುತ್ತದೆ. ಇದನ್ನು ಐತಿಹಾಸಿಕ ಬದಲಾವಣಾ ನಿರಂತರ ಪ್ರಕ್ರಿಯೆ ಎಂದಿರುವ ಹೆಗೆಲ್, ಇದಕ್ಕೆ ಕಾರಣವೆಂದರೆ 'ವಿಚಾರ', ಜ್ಞಾನ, ಪ್ರಜ್ಞೆ, ವೈಚಾರಿಕತೆ, ದೇವರು ಇವೇ ಆಗಿದೆ ಎಂದಿದ್ದಾರೆ. ಆದರೆ ಕಾರ್ಲ್‌ಮಾರ್ಕ್ಸ್ ಇತಿಹಾಸದ ಬದಲಾವಣಾ ಪ್ರಕ್ರಿಯೆಯು 'ವಿಚಾರ' ಫಲವಾಗಿರದೆ, ಭೌತಿಕ ಪರಿಸ್ಥಿತಿಯೆ ಕಾರಣವೆಂದಿದ್ದಾರೆ. ಎಂದರೆ ಇತಿಹಾಸದ ಬದಲಾವಣಾ ಪ್ರಕ್ರಿಯೆಯು ವಿಚಾರಕ್ಕಿಂತ ಭೌತಿಕ ವಸ್ತುಗಳ ಉತ್ಪಾದನೆ ಮಾಡುವ ರೀತಿ, ಕ್ರಮ, ಮಾರ್ಗವೇ ಆಗಿದೆ ಎಂದಿದ್ದಾರೆ. ಈ ಭೌತಿಕ ವಾದವನ್ನು ಮಾರ್ಕ್ಸ್ ಸಮಾಜಕ್ಕೆ ಅಳವಡಿಸಿದ್ದಾರೆ. ಮಾರ್ಕ್ಸ್ ಹೇಳುವಂತೆ ಪ್ರಸ್ತುತ ಸಮಾಜದಲ್ಲಿ ಬಂಡವಾಳಶಾಹಿ ವರ್ಗವು 'ವಾದ' ಆರ್ಥಿಕ ನಿಯಂತ್ರಣ ಹೊಂದುವ ಮೂಲಕ ದೇಶದ ಆರ್ಥಿಕತೆಯನ್ನು ನಿಯಂತ್ರಿಸಿದರೆ, ಇದು ಕಾರ್ಮಿಕ ವರ್ಗದಿಂದ 'ಪ್ರತಿವಾದ'ವನ್ನು ಎದುರಿಸುತ್ತದೆ. ಇಲ್ಲಿ ಬಂಡವಾಳಶಾಹಿ (ವಾದ) ಮತ್ತು ಕಾರ್ಮಿಕ ವರ್ಗ (ಪ್ರತಿವಾದ) ನಡುವೆ ಪರಸ್ಪರ ಹೋರಾಟ, ಕಲಹ, ಯುದ್ಧ ಘರ್ಷಣೆ ಅಥವಾ ವರ್ಗ ಸಂಘರ್ಷವಿದ್ದು ಅಂತಿಮವಾಗಿ ವರ್ಗರಹಿತ ಸಮಾಜ ಸ್ಥಾಪನೆಯಾಗುತ್ತದೆ ಎಂದಿದ್ದಾರೆ. ಇದನ್ನೇ 'ಸಂಯೋಜಕವಾದ' ಎಂದಿರುವುದು.

**ಆ. ಐತಿಹಾಸಿಕ ಭೌತಿಕವಾದ**

ಭೌತಿಕವಾದವನ್ನು ಆಧಾರವಾಗಿಟ್ಟುಕೊಂಡು ಇತಿಹಾಸದ ಬದಲಾವಣೆಯನ್ನು ವಿವರಿಸಲು ಪ್ರಯತ್ನಿಸಿದ್ದಾರೆ. ಮಾರ್ಕ್ಸ್‌ಗಿಂತ ಹಿಂದೆಯೇ ಈ ರೀತಿಯ ಚರ್ಚೆ, ಚಿಂತನೆ ನಡೆದಿತ್ತು, ಕೆಲವು ತತ್ವಜ್ಞಾನಿಗಳು ಇತಿಹಾಸದ ಬದಲಾವಣೆಗೆ ದೇವರೇ ಕಾರಣವೆಂದರೆ ಇತರೆ ಕೆಲವು ವ್ಯಕ್ತಿವಾದಿಗಳು ರಾಜರು, ಶಾಸಕಾಂಗದ ಸದಸ್ಯರು ಕಾರಣ ಎಂದಿದ್ದಾರೆ. ಹಾಗೂ ಹೆಗೆಲ್ ಐತಿಹಾಸಿಕ ಬದಲಾವಣೆಗೆ 'ವಿಚಾರ'ಗಳೇ ಕಾರಣ ಎಂದಿದ್ದಾರೆ. ಆದರೆ ಮಾರ್ಕ್ಸ್ ಹೆಚ್ಚು ವಾಸ್ತವವಾದಿಯಾಗಿ ಇತಿಹಾಸದ ಬದಲಾವಣೆಗೆ ಭೌತಿಕ ಅಥವಾ ಆರ್ಥಿಕ ಅಂಶಗಳೇ ಕಾರಣ ಎಂದಿದ್ದಾರೆ. ಅದಕ್ಕೆ ಉದಾಹರಣೆಯಾಗಿ ಊಳಿಗಮಾನ್ಯ ಪದ್ಧತಿ ಸಮಾಜ ಮತ್ತು ಬಂಡವಾಳಶಾಹಿ ಪದ್ಧತಿ ಸಮಾಜದಲ್ಲಿ ಒಂದು ವರ್ಗ ಉತ್ಪಾದನಾ ಸಾಧನಗಳ ನಿಯಂತ್ರಣ ಹೊಂದಿರುವ ಮೂಲಕ ಮತ್ತೊಂದು ವರ್ಗವನ್ನು ಶೋಷಣೆ ಮಾಡುತ್ತಾ ಬಂದಿರುವುದನ್ನು ಇತಿಹಾಸದಿಂದ ತಿಳಿಯುವುದನ್ನೆ ಮಾರ್ಕ್ಸ್‌ರ ಆರ್ಥಿಕ ಐತಿಹಾಸಿಕ ವ್ಯಾಖ್ಯೆ ಎಂದು ಹೆಸರಾಗಿದೆ.

### ೩. ಅಧಿಕ ಮೌಲ್ಯ ಸಿದ್ಧಾಂತ

ಕಾರ್ಲ್‌ಮಾರ್ಕ್ಸ್‌ರ ಈ ಚಿಂತನೆ ಸಂಪ್ರದಾಯವಾದ ಅರ್ಥಶಾಸ್ತ್ರಜ್ಞರಾದ ಆ್ಯಡಂಸ್ಮಿತ್ ಮತ್ತು ಡೇವಿಡ್ ರೆಕಾರ್ಡೊರ ಚಿಂತನೆಯಿಂದ ಪ್ರಭಾವಿತವಾಗಿ ಉತ್ಪಾದನಾ ಪ್ರಕ್ರಿಯೆಯಲ್ಲಿ 'ಕಾರ್ಮಿಕರು' ಮಾತ್ರವೇ ಮುಖ್ಯರು ಎಂಬ ವಾದದ ಮೇಲೆ ಅಧಿಕ ಮೌಲ್ಯ ಸಿದ್ಧಾಂತ ನಿಂತಿದೆ. ಈ ಸಿದ್ಧಾಂತದ ಪ್ರಕಾರ ಉತ್ಪಾದನಾ ವಸ್ತುಗಳ ಮಾರುಕಟ್ಟೆಯ ಬೆಲೆಯೆಲ್ಲವೂ ಕಾರ್ಮಿಕರಿಗೆ ಸೇರಬೇಕಾದುದು. ಆದರೆ ಬಂಡವಾಳಶಾಹಿ ವರ್ಗ 'ಲಾಭ'ದ ಹೆಸರಿನಲ್ಲಿ ಬಹುಪಾಲನ್ನು ಪಡೆಯುತ್ತಿದ್ದು, ಇದನ್ನು 'ಅಧಿಕ ಮೌಲ್ಯ' ಎಂದು ಕರೆಯಲಾಗಿದೆ. ಕಾರ್ಮಿಕನಿಗೆ ನೀಡುವ ವೇತನ ಹಾಗೂ ಕಾರ್ಮಿಕನು ಉತ್ಪಾದಿಸಿದ ವಸ್ತುವಿನ ಮಾರುಕಟ್ಟೆಯ ಬೆಲೆ ಈ ಎರಡರ ನಡುವಿನ ಅಂತರದ ಮೊತ್ತವೇ ಅಧಿಕ ಮೌಲ್ಯವಾಗಿರುತ್ತದೆ. ಉದಾ: ಕಾರ್ಮಿಕ ದಿನ ಒಂದಕ್ಕೆ ೧೦೦ ರೂಪಾಯಿ ಮೌಲ್ಯದ ವಸ್ತು ಉತ್ಪಾದಿಸುತ್ತಾನೆ ಎಂದಾದರೆ, ಬಂಡವಾಳಗಾರ ಆತನಿಗೆ ದಿನ ಒಂದಕ್ಕೆ ೫೦ ರೂಪಾಯಿ ವೇತನ (ಕೂಲಿ) ನೀಡುತ್ತಾನೆ ಎಂದಿಟ್ಟುಕೊಳ್ಳೋಣ, ಇನ್ನುಳಿದ ೫೦ ರೂಪಾಯಿಯೇ ಅಧಿಕ ಮೌಲ್ಯ. ಇದರಲ್ಲಿ ಎರಡು ವಿಧ:

೧. ಅಪರಿಮಿತ ಅಧಿಕ ಮೌಲ್ಯ

೨. ಸಂಬಂಧೀ ಅಧಿಕ ಮೌಲ್ಯ

ಅಪರಿಮಿತ ಅಧಿಕ ಮೌಲ್ಯ ಎಂದರೆ, ಕಾರ್ಮಿಕರಿಂದ ಹೆಚ್ಚು ದುಡಿಸಿಕೊಂಡು ಕಡಿಮೆ ಕೂಲಿ ನೀಡುವ ಮೂಲಕ ಬರುವ ಲಾಭ. ಸಂಬಂಧೀ ಅಧಿಕ ಮೌಲ್ಯ ಎಂದರೆ, ಕಾರ್ಮಿಕರ ದುಡಿಮೆಯ ಅವಧಿಯನ್ನು ಕಡಿಮೆ ಮಾಡಿ, ಉತ್ಪಾದನೆಯಿಂದ ಬರುವ ಲಾಭ.

ಮಾರ್ಕ್ಸ್, ಉತ್ಪಾದನೆಯಲ್ಲಿ ಶ್ರಮಕ್ಕೆ ಮಾತ್ರ ಮಹತ್ವ ನೀಡಿ, ಉತ್ಪಾದನೆಗೆ ಬೇಕಾದ ಕಚ್ಚಾವಸ್ತು, ಬಂಡವಾಳ, ಸಂಘಟನೆಯನ್ನು ಪರಿಗಣನೆಗೆ ತೆಗೆದುಕೊಳ್ಳದೆ ಅವುಗಳನ್ನೆಲ್ಲಾ ನೈಸರ್ಗಿಕ ಅಥವಾ ಪ್ರಕೃತಿದತ್ತವಾದವುಗಳು ಎಂದು ಭಾವಿಸಿದ್ದಾರೆ.

### ಈ. ವರ್ಗ ಸಂಘರ್ಷ

ವರ್ಗ ಸಂಘರ್ಷ ತತ್ವವು ಮಾರ್ಕ್ಸ್‌ರ ದ್ವಂದ್ವಾತ್ಮಕ ಭೌತಿಕವಾದ ಮತ್ತು ಅಧಿಕ ಮೌಲ್ಯ ಸಿದ್ಧಾಂತದ ಉಪಸಿದ್ಧಾಂತವಾಗಿದೆ. "ಮಾನವ ಸಮಾಜದ ಇತಿಹಾಸವು ವರ್ಗ ಸಂಘರ್ಷ ಅಥವಾ ವರ್ಗ ಕಲಹದ ಇತಿಹಾಸವೇ ಆಗಿದೆ" ಎಂದಿರುವ ಮಾರ್ಕ್ಸ್, ಪ್ರತಿಯೊಂದು ಮಾನವಸಮಾಜ ಎರಡು ವರ್ಗಗಳಿಂದ ಕೂಡಿದ್ದಿತು ಎಂಬುದನ್ನು ಐತಿಹಾಸಿಕ ಆಧಾರದ ಮೇಲೆ ವಿವರಿಸಿದ್ದಾರೆ. ಈ ಎರಡು ವರ್ಗಗಳೆಂದರೆ ಒಂದು ಶೋಷಕ ವರ್ಗ ಮತ್ತು ಶೋಷಿತ ವರ್ಗ. ಆಳುವವರು ಮತ್ತು ಗುಲಾಮರು, ಭೂ ಒಡೆಯರು ಮತ್ತು ಭೂ ರಹಿತರು, ಶ್ರೀಮಂತರು ಮತ್ತು ಬಡವರು, ಬಂಡವಾಳಶಾಹಿಗಳು ಮತ್ತು ಕಾರ್ಮಿಕರು ಎಂಬೆರೆಡು ವರ್ಗಗಳನ್ನು ಮಾನವ ಇತಿಹಾಸದ ಪ್ರತಿ ಘಟ್ಟದಲ್ಲಿಯೂ ಗುರುತಿಸಬಹುದಾಗಿದ್ದು, ಈ ಎರಡೂ ವರ್ಗಗಳ ನಡುವಿನ ಸಂಘರ್ಷ, ಕಲಹ, ಶಾಶ್ವತ ಲಕ್ಷಣವಾಗಿದೆ.

ಈ ಎರಡೂ ವರ್ಗಗಳು ತಮ್ಮ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಸಂಘರ್ಷಕ್ಕೆ ಇಳಿಯುತ್ತವೆ.

ಅಂತಿಮವಾಗಿ 'ಕ್ರಾಂತಿ'ಯ ಮೂಲಕ ವರ್ಗ ಸಂಘರ್ಷ ಅಂತ್ಯಗೊಂಡು ಹೊಸ ಸಾಮಾಜಿಕ ವ್ಯವಸ್ಥೆ ರೂಪುಗೊಳ್ಳುತ್ತದೆ. ಇದನ್ನೇ ಸಮತಾವಾದಿ ಸಾಮಾಜಿಕ ವ್ಯವಸ್ಥೆ ಎಂದು ಕರೆದಿರುವ ಮಾರ್ಕ್ಸ್, ಇಲ್ಲಿ ಒಂದೇ ವರ್ಗವಿದ್ದು, ಅದೆಂದರೆ ದುಡಿಯುವ ಅಥವಾ ಕಾರ್ಮಿಕ ವರ್ಗವಾಗಿದ್ದು ಇಲ್ಲಿ ಶೋಷಣೆಗೆ ಅವಕಾಶವೇ ಇರುವುದಿಲ್ಲ ಎಂದಿದ್ದಾನೆ.

### ಉ. ಕಾರ್ಮಿಕರ ಸರ್ವಾಧಿಕಾರತ್ವ

ಬಂಡವಾಳಶಾಹಿ ವರ್ಗದ ನಾಶದ ನಂತರ ವರ್ಗ ಸಂಘರ್ಷ ಕೊನೆಗೊಂಡು ವರ್ಗರಹಿತ ಸಮಾಜ ಸೃಷ್ಟಿಗೊಳ್ಳುತ್ತದೆ. ಈ ವರ್ಗರಹಿತ ಸಮಾಜ ಸ್ಥಾಪನಾ ಪೂರ್ವ ಸ್ಥಿತಿಯಲ್ಲೇ ಅಥವಾ ಮಧ್ಯಂತರ ಕಾಲದಲ್ಲೇ ಕಾರ್ಮಿಕರು ಸರ್ವಾಧಿಕಾರತ್ವದ ಸರಕಾರವನ್ನು ಸ್ಥಾಪಿಸುತ್ತಾರೆ. ಇದು ತಾತ್ಕಾಲಿಕವಾಗಿದ್ದು, ಸಂಪೂರ್ಣವಾಗಿ ಬಂಡವಾಳಶಾಹಿ ವರ್ಗವನ್ನು ನಾಶಪಡಿಸುವವರೆಗೆ ಅಸ್ತಿತ್ವದಲ್ಲಿರುತ್ತದೆ. ಈ ಹಂತದಲ್ಲಿ ಅಥವಾ ಕಾಲದಲ್ಲಿ ಕಾರ್ಮಿಕ ಸಾಮರ್ಥ್ಯಕ್ಕೆ ತಕ್ಕಂತೆ ವೇತನ ವ್ಯವಸ್ಥೆಯಿದ್ದು, ಇಲ್ಲಿ ಪ್ರತಿಯೊಬ್ಬರೂ ತಮ್ಮ ಸಾಮರ್ಥ್ಯ ಹಾಗೂ ಕೆಲಸಕ್ಕೆ ಸಮಾನವಾದುದನ್ನು ಪಡೆಯುವ ತತ್ವವೇ ಅಸ್ತಿತ್ವದಲ್ಲಿರುತ್ತದೆ. ರಾಜ್ಯವು ತನ್ನ ಸರ್ವಾಧಿಕಾರದಿಂದ ರಾಜ್ಯದ ಎಲ್ಲಾ ನೈಸರ್ಗಿಕ ಸಂಪತ್ತನ್ನು ರಾಷ್ಟ್ರೀಕರಣಗೊಳಿಸುತ್ತದೆ. ರಾಜ್ಯವು ಅಂತಿಮವಾಗಿ ವರ್ಗರಹಿತ, ರಾಜ್ಯರಹಿತ ಸಮಾಜದ ಸ್ಥಾಪನೆಯಲ್ಲಿ ಕೇವಲ ಒಂದು ಸಾಧನ ಮಾತ್ರವೇ ಆಗಿರುತ್ತದೆ. ಈ ಬದಲಾವಣೆಯ ನಂತರ ಪರಿಪೂರ್ಣವಾದ ಸಮತಾವಾದಿ ಸಮಾಜ ಸ್ಥಾಪನೆಯಾಗುತ್ತದೆ ಎಂದಿದ್ದಾರೆ ಮಾರ್ಕ್ಸ್.

### ಊ. ರಾಜ್ಯದ ನಾಶ

ಯಾವಾಗ ಬಂಡವಾಳಶಾಹಿ ವ್ಯವಸ್ಥೆಯ ಸಮಾಜ ನಾಶವಾಗುತ್ತದೋ ಆಗ ರಾಜ್ಯದ ಅಗತ್ಯವೇ ಇರುವುದಿಲ್ಲ ಎಂಬುದು ಕಾರ್ಲ್‌ಮಾರ್ಕ್ಸ್‌ರ ಅಭಿಪ್ರಾಯ. ಏಕೆಂದರೆ ರಾಜ್ಯ ಎಂಬುದು ಶೋಷಣೆಯ ಸಾಧನವಾಗಿದ್ದುಆರ್ಥಿಕ ನಿಯಂತ್ರಣ ಹೊಂದಿರುವ ಬಂಡವಾಳಶಾಹಿ ವರ್ಗದ ರಕ್ಷಣೆಯನ್ನೇ ತನ್ನ ಪರಮ ಧ್ಯೇಯವನ್ನಾಗಿ ಹೊಂದಿತ್ತು. ಯಾವಾಗ ಆರ್ಥಿಕ ನಿಯಂತ್ರಣ ಹೊಂದಿರುವ ಬಂಡವಾಳಶಾಹಿ ವರ್ಗವೇ ನಾಶವಾಗಿ ಹೋಗುತ್ತದೋ ಆಗ ರಾಜ್ಯಕ್ಕೆ ಕೆಲಸವೇ ಇರುವುದಿಲ್ಲ. ಆದ್ದರಿಂದ ರಾಜ್ಯ ಕ್ರಮೇಣ ನಾಶವಾಗಿ ಹೋಗುತ್ತದೆ. ಸಮತಾವಾದದ ಉದ್ದೇಶವೂ ರಾಜ್ಯರಹಿತ, ವರ್ಗರಹಿತ ಸಮಾಜದ ಸೃಷ್ಟಿಯೇ ಆಗಿದೆ. ಇದೇ ಸಮತಾವಾದದ ಅಂತಿಮ ಘಟ್ಟ ಅಥವಾ ಹಂತವಾಗಿರುತ್ತದೆ. ಅಂದರೆ ಪರಿಪೂರ್ಣ ಸಮತಾವಾದಿ ಸಮಾಜದಲ್ಲಿ ಪೋಲೀಸರಿಗಾಗಲಿ ಅಥವಾ ಮಿಲಿಟರಿಗಾಗಲಿ ಕೆಲಸವೇ ಇರುವುದಿಲ್ಲ. ಇದನ್ನೇ ಮಾರ್ಕ್ಸ್ ಅತ್ಯುತ್ಕೃಷ್ಟ ವೈಜ್ಞಾನಿಕ ಸಮಾಜ ಎಂದು ಕರೆದಿರುವುದು. ಇಲ್ಲಿ ವರ್ಗಗಳಾಗಲಿ ಅಥವಾ ವರ್ಗ ಕಲಹವಾಗಲಿ, ಶೋಷಣೆಯಾಗಲಿ ರಾಜ್ಯವಾಗಲಿ ಇರುವುದಿಲ್ಲ.

ಈ ಸಿದ್ಧಾಂತವು ಜಗತ್ತಿನ ಕಾರ್ಮಿಕರ ಸ್ಥಿತಿಗತಿಯನ್ನು ಉತ್ತಮಪಡಿಸುವಲ್ಲಿ ಸಹಾಯ ಮಾಡಿದ್ದು, ಕಾರ್ಮಿಕರಲ್ಲಿ ಹೊಸ ಚೈತನ್ಯ ತುಂಬುವುದರಲ್ಲಿ ಯಶಸ್ವಿಯಾಗಿದೆ.

### ೨.೩ ಮಹಾತ್ಮ ಗಾಂಧಿ (೧೮೬೯ - ೧೯೪೮)

#### ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)

ಮೋಹನದಾಸ ಕರಮಚಂದ್ ಗಾಂಧೀಯವರು ೧೮೬೯ರ ಅಕ್ಟೋಬರ್ ೨ ರಂದು ಗುಜರಾತಿನ ಪೋರ್‌ಬಂದರ್ ಎಂಬ ಸ್ಥಳದಲ್ಲಿ ಜನಿಸಿದರು. ೧೯೪೮ ಜನವರಿ ೩೦ ರಂದು ಹಂತಕನ ಗುಂಡಿಗೆ ಆಹುತಿಯಾಗುವುದರ ಮೂಲಕ ಭಾರತ ಇತಿಹಾಸದ ಒಂದು ಮಹತ್ವದ ಅಧ್ಯಾಯ ಕೊನೆಗೊಂಡಿತು. ಮಹಾತ್ಮ ಗಾಂಧೀಯವರು ೨೦ನೇ ಶತಮಾನದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಚಿಂತಕರಲ್ಲಿ ಅಗ್ರಗಣ್ಯರು. ಭಾರತದ ಸ್ವಾತಂತ್ರ್ಯ ಶಿಲ್ಪಿಯು, ಅಹಿಂಸಾತ್ಮಕವಾದಿಯೂ ಆದ ಇವರು ಭಾರತದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯವನ್ನು ಅಂತ್ಯಗೊಳಿಸಿ, ತಮ್ಮ ಇಡೀ ಜೀವನವನ್ನೇ ಸತ್ಯ ಶೋಧನೆಗಾಗಿ ಮುಡಿಪಿಟ್ಟ ಮಹಾತ್ಮರು.

ಗಾಂಧೀಜಿಯವರು ಮೂಲತಃ ರಾಜ್ಯಶಾಸ್ತ್ರಜ್ಞರೂ ಅಲ್ಲ ಮತ್ತು ಗಾಂಧಿವಾದ ಒಂದು ರಾಜಕೀಯ ಸಿದ್ಧಾಂತ ಅಥವಾ ವಿಶಿಷ್ಟವಾದ ರಾಜಕೀಯ ತತ್ವವೂ ಅಲ್ಲ. ಗಾಂಧೀಜಿಯವರು ಧಾರ್ಮಿಕ ಮನೋಭಾವನೆಯುಳ್ಳ ತತ್ವಶಾಸ್ತ್ರಜ್ಞರಾದರೆ, ಗಾಂಧಿವಾದವು ಒಂದು ಜೀವನ ಸಂದೇಶದ ತತ್ವಶಾಸ್ತ್ರವಾಗಿದೆ.

ಮಹಾತ್ಮ ಗಾಂಧೀಜಿಯವರು ತಮ್ಮ ಪ್ರಾರಂಭಿಕ ವಿದ್ಯಾಭ್ಯಾಸವನ್ನು ಭಾರತದಲ್ಲಿ ಮುಗಿಸಿ, ಕಾನೂನು ಪದವಿಯನ್ನು ಇಂಗ್ಲೆಂಡಿನಲ್ಲಿ ಮುಗಿಸಿದರು. ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿ ಪ್ರವಾಸಮಾಡಿ ಅಲ್ಲಿನ ಜನರ ಸಮಸ್ಯೆಯ ವಿರುದ್ಧ ಹೋರಾಡಿದರಲ್ಲದೆ, ಉಪ್ಪಿನ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ, ಸ್ವದೇಶಿ ಚಳುವಳಿ ಮುಂತಾದ ಉಗ್ರ ಹೋರಾಟಗಳಲ್ಲಿ ತೊಡಗಿಸಿಕೊಂಡರು.

ಗಾಂಧೀಜಿಯವರು ಮೊದಲು ರಾಜಕೀಯ ನಾಯಕರಾಗಿ ಬೆಳಕಿಗೆ ಬಂದದ್ದು ದಕ್ಷಿಣ ಆಫ್ರಿಕಾದಲ್ಲಿ. ತಮ್ಮ ವಕೀಲಿ ವೃತ್ತಿಯ ಅನುಸಾರವಾಗಿ ದಕ್ಷಿಣ ಆಫ್ರಿಕಾಗೆ ಹೋಗಿದ್ದ ಗಾಂಧೀಜಿಯವರು ಅಲ್ಲಿ ಭಾರತೀಯರು ಅನುಭವಿಸುತ್ತಿದ್ದ ಸಂಕಷ್ಟಗಳನ್ನು ನೋಡಿ ಸಹಿಸದಾದರು. ದಕ್ಷಿಣ ಆಫ್ರಿಕಾ ಸರಕಾರದ ತಾರತಮ್ಯ ಭಾರತೀಯರ ಮೇಲೆ ಅವರಿಗಿದ್ದ ಕೀಳು ಮನೋಭಾವನೆ ವಿರುದ್ಧ ಹೋರಾಟ ನಡೆಸಿ ಸತ್ಯ, ಅಹಿಂಸೆ, ಮಾನವನ ಘನತೆ, ಗೌರವಗಳಿಗೆ ಹೆಸರುವಾಸಿಯಾದರು.

೧೯೧೪ಕ್ಕೆ ದಕ್ಷಿಣ ಆಫ್ರಿಕಾದಿಂದ ಮರಳಿ ಮಾತೃಭೂಮಿಗಾಗಿ ತಮ್ಮನ್ನು ಮುಡುಪಾಗಿಟ್ಟರು. ಬ್ರಿಟಿಷರನ್ನು ಭಾರತದಿಂದ ತೊಲಗಿಸಲು ಕಂಕಣಬದ್ಧರಾದರು. ಮೊದಲನೆ ಮಹಾಯುದ್ಧದ ಅಂತ್ಯದಲ್ಲಿ ಭಾರತೀಯರ ನ್ಯಾಯಯುತವಾದ ಆಸೆ ಆಕಾಂಕ್ಷೆಗಳನ್ನು ನಿರ್ದಾಕ್ಷಿಣ್ಯವಾಗಿ, ಕ್ರೂರವಾಗಿ ಮೊಟಕುಗೊಳಿಸಿದ ಬ್ರಿಟಿಷರ ವರ್ತನೆಯನ್ನು ಗಾಂಧೀಜಿ ಸಹಿಸದಾದರು. ಅಲ್ಲಿಯವರೆಗೆ ಲೋಕಮಾನ್ಯ ತಿಲಕ್ ಮುಂತಾದ ನಾಯಕರುಗಳಿಂದ ಸೃಷ್ಟಿಯಾಗಿದ್ದ

ವಾತಾವರಣವನ್ನು ಸದುಪಯೋಗಪಡಿಸಿಕೊಂಡು ಗಾಂಧೀಜಿ ಭಾರತದ ಸ್ವಾತಂತ್ರ್ಯದ ನಾಯಕತ್ವವನ್ನು ಸಮರ್ಥವಾಗಿ ನಿರ್ವಹಿಸಿದರು. ಇಡೀ ವಿಶ್ವದಲ್ಲಿಯೇ ಪ್ರಥಮಬಾರಿಗೆ ಓರ್ವ ಸಾಧು, ರಾಜಕಾರಣಿ ಕೋಟ್ಯಾಂತರ ಮಂದಿ ಗುಲಾಮರ ನಾಯಕರಾಗಿ, ಅಹಿಂಸೆ, ಅಸಹಕಾರ, ಕಾನೂನು ಭಂಗ ಮುಂತಾದ ಅಸ್ತ್ರಗಳ ಶಾಂತಿಯುತ ಬಳಕೆಯನ್ನು ಬೋಧಿಸಿದರು. ೧೯೪೨ರಲ್ಲಿ ಗಾಂಧೀಜಿಯವರು ಇಂಗ್ಲೀಷರಿಗೆ "ಭಾರತ ಬಿಟ್ಟು ತೊಲಗಿರಿ" ಎಂಬ ಕರೆಯನ್ನು ಕೊಟ್ಟರು. ಭಾರತೀಯರಿಗೆ 'ಮಾಡು ಇಲ್ಲವೆ ಮಡಿ' ಎಂಬ ಘೋಷಣೆ ಮೂಲಕ ಸ್ಫೂರ್ತಿಯನ್ನು ನೀಡಿದರು. ಈ ಕರೆಯನ್ನು ಕೊಟ್ಟ ದಿನದಿಂದ ಚಳುವಳಿ ತೀವ್ರಗೊಂಡು ೧೯೪೭ ಆಗಸ್ಟ್ ೧೫ ರಂದು ಭಾರತ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಿತು.

ಕೃತಿಗಳು : ಗಾಂಧೀಜಿಯವರ ಕೃತಿಗಳನ್ನು ಕೆಳಗೆ ಪಟ್ಟಿ ಮಾಡಲಾಗಿದೆ.

೧. ದಿ ಸ್ಟೋರಿ ಆಫ್ ಮೈ ಎಕ್ಸ್‌ಪೆರಿಮೆಂಟ್ ವಿತ್ ಟ್ರೂತ್ (1929 The Story of my Experiment with Truth)
೨. ಇಂಡಿಯನ್ ಹೋಮ್‌ರೂಲ್ ಅಥವಾ ಹಿಂದ್ ಸ್ವರಾಜ್ (Indian Home Rule or Hind Swaraj)
೩. ಸತ್ಯಾಗ್ರಹ ಇನ್ ಸೌತ್ ಆಫ್ರಿಕಾ (1925, Sathyagraha in South Africa)
೪. ಎಕನಾಮಿಕ್ಸ್ ಆಫ್ ಖಾದಿ (1941, Economic of Khadi)
೫. ಉಮೆನ್ ಅಂಡ್ ಸೋಷಿಯಲ್ ಇನ್‌ಜಸ್ಟೀಸ್ (Women and Social Injustice)
೬. ಇಂಡಿಯನ್ ಸ್ಟೇಟ್ ಪ್ರಾಬ್ಲಮ್ಸ್ (1941, Indian State Problems)
೭. ನಾನ್ ವಯಲೆನ್ಸ್ ಇನ್ ಪೀಸ್ ಅಂಡ್ ವಾರ್ (Non - Violence in Peace and war)
೮. ಗೀತಾ ದಿ ಮದರ್ (1947, Geeta the Mother)
೯. ಟುವರ್ಡ್ಸ್ ನಾನ್ ವಯಲೆಂಟ್ ಸೊಸೈಟಿ (Towards Non - Violent Society)
೧೦. ಟುವರ್ಡ್ಸ್ ನಾನ್ ವಯಲೆಂಟ್ ಸೋಷಿಯಾಲಿಸಂ (Towards Non - Violent Socialism)
೧೧. ಇಂಡಿಯನ್ ಕೇಸ್ ಫಾರ್ ಸ್ವರಾಜ್ (1932, Indian Case for Swaraj)
೧೨. ದಿ ಎಕನಾಮಿಕ್ಸ್ ಆಫ್ ವಿಲೇಜ್ ಇಂಡಸ್ಟ್ರೀಸ್ (1938, The Economic of Village Industries)

ಹಾಗೂ ಹರಿಜನ ಮತ್ತು ಯಂಗ್ ಇಂಡಿಯಾ ಎಂಬ ಪತ್ರಿಕೆಗಳನ್ನೂ ನಡೆಸುತ್ತಿದ್ದರು.

### ಆ. ಸತ್ಯಾಗ್ರಹ ಮತ್ತು ಸರ್ವೋದಯ

ಸತ್ಯಾಗ್ರಹವೆಂದರೆ, ಸತ್ಯಾಗ್ರಹಿಯು ಸತ್ಯಕ್ಕಾಗಿ ಆಗ್ರಹಿಸುವುದು ಎಂದರ್ಥ. ವ್ಯಕ್ತಿ, ಸಮಾಜ, ರಾಜ್ಯದ ದಬ್ಬಾಳಿಕೆ, ದುರಾಡಳಿತ, ಅಶಿಸ್ತು, ಅನ್ಯಾಯ ಇವೇ ಮೊದಲಾದ ಕೃತ್ಯಗಳನ್ನು ಎಸಗುವುದನ್ನು ತಡೆಯಲು ಸತ್ಯಾಗ್ರಹ ಯಶಸ್ವಿ ಅಸ್ತ್ರವೆಂದು ಗಾಂಧೀಜಿಯವರು ಭಾವಿಸಿದ್ದರು. ಇದು ದೈಹಿಕ ಶಕ್ತಿಗಿಂತ ಶ್ರೇಷ್ಠವಾದ ನೈತಿಕ ಶಕ್ತಿಯಾಗಿದ್ದು, ಆತ್ಮಬಲದ

ಆಧಾರದ ಮೇಲಿರುವ ನೈತಿಕ ಅಸ್ತ್ರವಾಗಿದೆ. ದಬ್ಬಾಳಿಕೆ, ದುರಾಡಳಿತ, ಅನ್ಯಾಯ ಇವೇ ಮೊದಲಾದವುಗಳನ್ನು ಪ್ರೀತಿ, ವಿಶ್ವಾಸದಿಂದ ಗೆಲ್ಲುವುದೇ ಆಗಿದ್ದು, ಈ ಪ್ರಯೋಗವನ್ನು ದಕ್ಷಿಣ ಆಫ್ರಿಕಾ ಹಾಗೂ ಭಾರತದಲ್ಲಿ ಮಾಡುವ ಮೂಲಕ ಗಾಂಧೀಜಿಯವರು ಯಶಸ್ವಿಯಾಗಿದ್ದಾರೆ.

### ಸತ್ಯಾಗ್ರಹದ ತಂತ್ರಗಳು

ಮಹಾತ್ಮ ಗಾಂಧೀಜಿಯವರು ಪ್ರಯೋಗಿಸಿದ ಸತ್ಯಾಗ್ರಹದ ಹಲವು ರೂಪಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

### ೧. ಅಸಹಕಾರ

ಇದು ಸರ್ಕಾರದ ಅಥವಾ ಅಧಿಕಾರದ ವಿರುದ್ಧ ಬಳಸುವ ಒಂದು ಅಸ್ತ್ರವಾಗಿದೆ. ವ್ಯಕ್ತಿಯಾಗಲಿ ಅಥವಾ ಅಧಿಕಾರಿಯಾಗಲಿ ಅಥವಾ ಸರಕಾರವಾಗಲಿ ಅನ್ಯಾಯ, ದಬ್ಬಾಳಿಕೆ, ದುರಾಡಳಿತದಲ್ಲಿ ತೊಡಗಿದ್ದರೆ ಅಂತಹುದರ ವಿರುದ್ಧ ಚಳುವಳಿ ಹೂಡುವುದು ಅನ್ಯಾಯಕ್ಕೊಳಗಾಗಿರುವವರ ಕರ್ತವ್ಯವಾಗಿದೆ. ಈ ರೀತಿ ಜನರು ವ್ಯಕ್ತಿ, ಸಂಸ್ಥೆ, ಅಧಿಕಾರಿ ಅಥವಾ ಸರಕಾರದೊಡನೆ ಸಹಕರಿಸದಿದ್ದಾಗ ಸೋಲಬೇಕಾಗುತ್ತದೆ. ಹಾಗೂ ದಬ್ಬಾಳಿಕೆ, ದುರಾಡಳಿತ ಹಾಗೂ ಅನ್ಯಾಯ ಅಂತ್ಯಗೊಳ್ಳುತ್ತದೆ. ಈ ಅಸಹಕಾರ ಚಳುವಳಿಗೆ ಹಲವಾರು ರೂಪಗಳಿವೆ. ಅವುಗಳೆಂದರೆ :

**ಅ. ಹರತಾಳ :** ಅನ್ಯಾಯ, ದಬ್ಬಾಳಿಕೆ, ದುರಾಡಳಿತ ನಡೆಸುವವರ ಮನಸ್ಸನ್ನು ಬದಲಾಯಿಸುವಂತೆ ಮಾಡಲು ತಮ್ಮ ತಮ್ಮ ಕೆಲಸವನ್ನು ನಿಲ್ಲಿಸಿ ಪ್ರತಿಭಟಿಸುವುದೇ ಹರತಾಳವಾಗಿದೆ.

**ಆ. ಸಾಮಾಜಿಕ ಬಹಿಷ್ಕಾರ :** ವಿಶೇಷವಾದ ಸನ್ನಿವೇಶ ಅಥವಾ ಸಂದರ್ಭಗಳಲ್ಲಿ ಸ್ವಹಿತ ಸಾಧನೆಗೆ ಯತ್ನಿಸಿದ ವ್ಯಕ್ತಿ ಹಾಗೂ ಸಾಮಾಜಿಕ ಪ್ರತಿಭಟನೆಯಲ್ಲಿ ಪಾಲ್ಗೊಳ್ಳುವಂತಹ ವ್ಯಕ್ತಿಗಳಿಗೆ ಸಾಮಾಜಿಕ ಬಹಿಷ್ಕಾರವನ್ನು ಹಾಕಬಹುದಾಗಿದೆ. ಆದರೆ ಇದನ್ನು ಸಮಾಜ ದ್ರೋಹಿಗಳಿಗೆ ಮಾತ್ರ ಹಾಕಿ ಅವರ ಮನಸ್ಸನ್ನು ಪರಿವರ್ತಿಸುವಂತೆ ಗಾಂಧೀ ಕರೆ ನೀಡಿದ್ದಾರೆ.

**ಇ. ಪಿಕೆಟಿಂಗ್ :** ಯಾವುದೇ ಹಿಂಸಾತ್ಮಕ ಮಾರ್ಗವನ್ನು ಅನುಸರಿಸದೆ, ಶಾಂತಿಯುತವಾಗಿ ವ್ಯಕ್ತಿ ಅಥವಾ ಅಧಿಕಾರಿ ಅಥವಾ ಸರಕಾರ ಕಾರ್ಯನಿರ್ವಹಿಸಲು ಸಾಧ್ಯವಾಗದಂತೆ ತಡೆ ಹಾಕುವುದೇ ಆಗಿದೆ.

### ೨. ಕಾನೂನು ಭಂಗ ಚಳುವಳಿ

ರಾಜ್ಯದ ಅನ್ಯಾಯ ದಬ್ಬಾಳಿಕೆಯನ್ನು ವಿರೋಧಿಸಲು ಸವಿನಯ ಕಾನೂನು ಭಂಗ ಚಳುವಳಿಯನ್ನು ಹಮ್ಮಿಕೊಳ್ಳುವಂತೆ ಗಾಂಧೀಜಿಯವರು ಕರೆ ನೀಡಿದ್ದಾರೆ. ಇದು ಅಸಹಕಾರ ಚಳುವಳಿಯ ಕೊನೆಯ ಅಥವಾ ತೀವ್ರ ರೀತಿಯ ಸತ್ಯಾಗ್ರಹ ವಿಧಾನವಾಗಿದ್ದು, ಸರಕಾರ ಅಸಹಕಾರ ಚಳುವಳಿಯ ಮೊದಲ ವಿಧಾನಗಳಿಂದ ತನ್ನ ಧೋರಣಾ ನೀತಿಯನ್ನು ಬದಲಿಸಿಕೊಳ್ಳದಿದ್ದಂತಹ ಸಂದರ್ಭದಲ್ಲಿ ಈ ವಿಧಾನವನ್ನು ಉಪಯೋಗಿಸುವಂತೆ ಹೇಳಿದ್ದಾರೆ.

**೩. ಹಿಜರತ್**

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವುದಕ್ಕೆ ಹಿಜರತ್ ಎಂದು ಕರೆಯಲಾಗುತ್ತದೆ. ಇದು ಸತ್ಯಾಗ್ರಹದಲ್ಲಿ ಭಾಗವಹಿಸುವ ಸತ್ಯಾಗ್ರಹಿಯ ವಿಶಿಷ್ಟ ಬಗೆಯ ಸಾಧನವಾಗಿದ್ದು, ದಬ್ಬಾಳಿಕೆ, ಅನ್ಯಾಯ, ಶೋಷಣೆಯಿಂದ ಮುಕ್ತವಾಗಲು ಸತ್ಯಾಗ್ರಹಿಗಳು ಆತ್ಮ ಹಾಗೂ ಸ್ವಯಂ ಸಂತೋಷದಿಂದ ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದು. ಇದೊಂದು ರೀತಿಯಲ್ಲಿ ಸ್ವಯಂ ಗಡಿಪಾರು ಕ್ರಮವೆನ್ನಬಹುದಾಗಿದೆ.

**೪. ಉಪವಾಸ**

ಉಪವಾಸ ಸತ್ಯಾಗ್ರಹಕ್ಕೆ ಗಾಂಧೀಜಿಯವರು ಅತ್ಯಂತ ಶ್ರೇಷ್ಠಸ್ಥಾನವನ್ನು ನೀಡಿದ್ದಾರೆ. ಅನ್ಯಾಯ, ದಬ್ಬಾಳಿಕೆ, ದುರಾಡಳಿತದ ವಿರುದ್ಧ ಅನ್ನಸತ್ಯಾಗ್ರಹ ಅಥವಾ ಉಪವಾಸದಂತಹ ಸತ್ಯಾಗ್ರಹ ಮಾರ್ಗವನ್ನು ಅನುಸರಿಸಬೇಕಾದರೆ, ಸತ್ಯಾಗ್ರಹಿಯು ಅಹಿಂಸಾ ತತ್ವದಲ್ಲಿ ನಂಬಿಕೆ, ಶಿಸ್ತು, ಸಂಯಮ, ಶ್ರದ್ಧೆಯನ್ನು ಹೊಂದಿದ್ದರೆ ಮಾತ್ರ ಬಳಸಬಹುದು ಎಂದಿದ್ದಾರೆ. ಇದನ್ನು ಅತ್ಯಂತ ಎಚ್ಚರಿಕೆಯಿಂದ ಬಳಸಬೇಕೆಂದಿರುವ ಗಾಂಧೀಜಿಯವರು, ಉದ್ದೇಶಿತ ಗುರಿ ಸಾಧನೆಗಾಗಿ ಪ್ರಾಣ ತ್ಯಾಗಕ್ಕಾದರೂ ಸಿದ್ಧರಿರುವರು ಈ ಅಸ್ತ್ರವನ್ನು ಉಪಯೋಗಿಸಬೇಕು ಎಂದಿದ್ದಾರೆ.

**೫. ಮುಷ್ಕರ**

ಕೆಲಸವನ್ನು ಸ್ಥಗಿತಗೊಳಿಸುವುದೇ ಮುಷ್ಕರ. ಕೈಗಾರಿಕಾ ಮಾಲೀಕರು ಅಥವಾ ಬಂಡವಾಳ ಶಾಹಿ ವರ್ಗದ ವಿರುದ್ಧ ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಕಾರ್ಮಿಕರು ಈ ರೀತಿಯ ಮುಷ್ಕರವನ್ನು ಸಾಮಾನ್ಯವಾಗಿ ಉಪಯೋಗಿಸುತ್ತಾರೆ.

**೬. ಕರ ನಿರಾಕರಣೆ**

ಅಸಹಕಾರ ಮತ್ತು ಕಾಯ್ದೆ ಭಂಗದ ಸಂಮಿಶ್ರಣವೇ ಕರ ನಿರಾಕರಣೆಯಾಗಿದ್ದು, ಅನ್ಯಾಯವಾಗಿ ವಿಧಿಸಲ್ಪಡುವ ಕರ(Tax)ವನ್ನು ಸರಕಾರಕ್ಕೆ ಸಲ್ಲಿಸದೆ, ಕಾನೂನಿನ ಮೂಲಕ ವಿಧಿಸುವ ಶಿಕ್ಷೆಯನ್ನು ಪ್ರತಿರೋಧ ವ್ಯಕ್ತಪಡಿಸದೇ ಸ್ವೀಕರಿಸುವುದೇ ಆಗಿದೆ. ಈ ಕರ ನಿರಾಕರಣೆ ಚಳುವಳಿಯಿಂದಾಗಿ ಸರ್ಕಾರದ ಖಜಾನೆಗೆ ಬರುವ ಆದಾಯ ಕಡಿಮೆಯಾಗಿ, ಸರಕಾರ ಕೂಡಲೇ ಗಮನ ಹರಿಸಬಹುದೆಂಬುದು ಗಾಂಧೀಜಿಯವರ ಅನಿಸಿಕೆಯಾಗಿತ್ತು.

ಗಾಂಧೀಜಿಯವರ ಸತ್ಯಾಗ್ರಹ ಪರಿಕಲ್ಪನೆಯು ಏಸುಕ್ರಿಸ್ತ, ಮಹಾವೀರ ಮತ್ತು ಬುದ್ಧರ ಉಪದೇಶದಿಂದ ಪ್ರಭಾವಿತವಾಗಿದೆ. ಪ್ರಸ್ತುತವಾಗಿ ಈ ಸತ್ಯಾಗ್ರಹದ ತಂತ್ರಗಳು ಅರ್ಥಪೂರ್ಣವಾಗಿ ಬಳಕೆಯಾಗುವ ಬದಲು ದುರ್ಬಳಕೆಯಾಗುತ್ತಿರುವುದು ದುರದೃಷ್ಟಕರ ಸಂಗತಿಯಾಗಿದೆ.

**ಸರ್ವೋದಯ**

ಸರ್ವೋದಯ ಎಂದರೆ 'ಸರ್ವರ ಅಭ್ಯುದಯ' ಅಥವಾ 'ಎಲ್ಲರ ಅಭಿವೃದ್ಧಿ' ಅಥವಾ

'ಎಲ್ಲರ ಕಲ್ಯಾಣ' ಎಂದಾಗುತ್ತದೆ. ಸ್ವಾತಂತ್ರ್ಯ, ಸಮಾನತೆ, ವರ್ಗ ಮತ್ತು ಜಾತಿರಹಿತ ಸಮಾಜ, ಅನ್ಯಾಯರಹಿತ, ಶೋಷಣಾರಹಿತ ಸಮಾನ ಅವಕಾಶವೇ ಆಗಿದೆ. ಸರ್ವೋದಯದ ಗುರಿಯೆಂದರೆ ಮಾನವನ ಪ್ರಗತಿ.

ಜಾನ್ ರಸ್ಕಿನ್‌ರ 'ಅನ್ ಟು ದಿ ಲಾಸ್ಟ್' ಗ್ರಂಥದಿಂದ ಪ್ರಭಾವಿತರಾಗಿರುವ ಗಾಂಧೀಜಿಯವರು, 'ಸರ್ವೋದಯ' ಎಂಬ ಹೊಸ ಸಮಾಜದ ಕಲ್ಪನೆಯನ್ನು ನನಸಾಗಿಸಲು ಪ್ರಯತ್ನಿಸಿದ್ದರು. ಈ ಆದರ್ಶ ಸರ್ವೋದಯ ಸಮಾಜದಲ್ಲಿ ಪ್ರೀತಿ, ಸಹಕಾರ, ಸತ್ಯ, ಅಹಿಂಸೆ, ಇವೇ ಮೊದಲಾದ ತತ್ವಗಳು ಅತಿ ಮುಖ್ಯವಾದ ಸ್ಥಾನವನ್ನು ಪಡೆದಿರಬೇಕು ಎಂಬ ಕನಸನ್ನು ಕಂಡಿದ್ದರು.

ಆಂಗ್ಲೇಯ ವಿದ್ವಾಂಸರಾದ ಜಾನ್ ರಸ್ಕಿನ್‌ರ ಕೃತಿಯಾದ 'ಅನ್ ಟು ದಿ ಲಾಸ್ಟ್' ನ ಮೂರು ಅಂಶಗಳಿಂದ ಗಾಂಧೀಜಿ ಪ್ರಭಾವಿತರಾಗಿದ್ದಾರೆ. ಅವುಗಳೆಂದರೆ:

ಅ. ಎಲ್ಲರ ಒಳಿತಿನಲ್ಲಿಯೇ ತನ್ನ ಒಳಿತು ಅಡಗಿದೆ ಎಂಬುದು.

ಆ. ಎಲ್ಲಾ ಬಗೆಯ ಶ್ರಮಗಳು ಸಮಾನವಾದವುಗಳು ಹಾಗೂ ಸಮಾನ ಗೌರವಗಳನ್ನು ಹೊಂದಿರುವಂಥವು ಎಂಬುದು. ಅಂದರೆ ವಕೀಲನ ವೃತ್ತಿಯೂ, ಕ್ಷೌರಿಕನ ವೃತ್ತಿಯೂ ಸಮಾನ ಗೌರವವುಳ್ಳವು ಏಕೆಂದರೆ ಎಲ್ಲರ ಜೀವಿಕೆಯ ಗಳಿಕೆಯೂ ಕಾರ್ಯದಿಂದಲೇ ಆದ್ದರಿಂದ.

ಇ. ದುಡಿಮೆಯ ನೇಗಿಲ ಯೋಗಿಯ, ಇಲ್ಲವೇ ಶ್ರಮ ಜೀವಿಯ ಬಾಳೇ ಭವ್ಯವಾದ ಬಾಳು. ಏಕೆಂದರೆ ಅವರು ಸಮಾಜದ ಹಿತಕ್ಕಾಗಿ ದುಡಿಯುತ್ತಾರೆ.ಪ್ರತಿಯೊಂದು ಬಗೆಯ ಶ್ರಮಕ್ಕೂ ತನ್ನದೇ ಆದ ಗೌರವವಿದೆ.

ಈ ಮೇಲಿನ ಮೂರೂ ವಿಚಾರಗಳ ಬಗ್ಗೆ ಗಾಂಧೀಜಿ ತಮ್ಮ ಆತ್ಮಕತೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ. ಈ ಮೇಲಿನ ಮೂರು ತತ್ವಗಳಲ್ಲಿ ಮೊದಲನೆಯದು ನನಗೆ ತಿಳಿದಿತ್ತು. ಎರಡನೆಯದು ಮಸುಕು - ಮಸುಕಾಗಿ ಅರ್ಥವಾಗಿತ್ತು. ಮೂರನೆಯದು ನನಗೆ ಹೊಳೆದೇ ಇರಲಿಲ್ಲ. ಮೊದಲನೆಯ ತತ್ವವು ಉಳಿದ ಎರಡನ್ನು ಒಳಗೊಂಡಿದೆ ಎಂಬುದನ್ನು ಹಗಲಷ್ಟು ಸ್ಪಷ್ಟವಾಗಿ ನನಗೆ ಮನಗಾಣಿಸಿತು 'ಅನ್ ಟು ದಿ ಲಾಸ್ಟ್', ಈ ತತ್ವಗಳನ್ನು ಕಾರ್ಯರೂಪಕ್ಕೆ ಪರಿವರ್ತಿಸಲು ಸಿದ್ಧವಾಗಿ ಮುಂಜಾನೆ ಎಚ್ಚರಗೊಂಡೆ.

ಹೀಗೆ ಗಾಂಧೀಜಿ ರಸ್ಕಿನ್‌ರ ಕೃತಿಯಿಂದ ಪ್ರಭಾವಿತರಾಗಿ ತಮ್ಮ ಕನಸಿನ ಸರ್ವೋದಯ ಸಮಾಜದ ರಾಜಕೀಯ, ಆರ್ಥಿಕ, ಸಾಮಾಜಿಕ, ನೈತಿಕ ಹಾಗೂ ಧಾರ್ಮಿಕ ಲಕ್ಷಣಗಳನ್ನು ಈ ಕೆಳಕಂಡಂತೆ ನಿರೂಪಿಸಿದ್ದಾರೆ.

### ೧. ರಾಜಕೀಯ ಲಕ್ಷಣಗಳು

ಗಾಂಧೀಜಿಯವರು ತಮ್ಮ ಸರ್ವೋದಯ ಸಮಾಜದಲ್ಲಿನ ರಾಜಕೀಯ ಲಕ್ಷಣಗಳು ಈ ಕೆಳಕಂಡಂತಿರಬೇಕೆಂದು ಬಯಸಿದ್ದರು.

ಅ. ಗ್ರಾಮ ಸ್ವರಾಜ್ಯ.

ಆ. ಪಕ್ಷರಹಿತ ಸರ್ಕಾರ

ಇ. ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ

ಈ. ಕನಿಷ್ಠ ಸ್ಥಾನಿಕ ಪಡೆ ಸಹಿತ ವ್ಯವಸ್ಥೆ

**೨. ಆರ್ಥಿಕ ಲಕ್ಷಣಗಳು**

ಗಾಂಧೀಜಿಯವರು ತಮ್ಮ ಸರ್ವೋದಯ ಸಮಾಜದಲ್ಲಿ ಆರ್ಥಿಕ ಸಮಾನತೆಯು ಹಂಚಿಕೆಯ ಮೂಲಕ ಆಗಬೇಕೆಂದು ಬಯಸಿದ್ದಾರೆ. ಸರ್ವೋದಯ ಸಮಾಜದ ಆರ್ಥಿಕ ಲಕ್ಷಣಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

ಅ. ಪರಸ್ಪರ ಹಂಚಿಕೆಗೆ ಆದ್ಯತೆ.

ಆ. ವಿಶ್ವಸ್ಥ ತತ್ವದಲ್ಲಿ ನಂಬಿಕೆ.

ಇ. ಗುಡಿ ಕೈಗಾರಿಕೆಗೆ ಆದ್ಯತೆ.

ಈ. ಭೂದಾನ ಮತ್ತು ಗ್ರಾಮದಾನಕ್ಕೆ ಒತ್ತು.

**೩. ಸಾಮಾಜಿಕ ಲಕ್ಷಣಗಳು**

ಗಾಂಧೀಜಿಯವರ ಸರ್ವೋದಯ ಸಮಾಜದಲ್ಲಿನ ಸಾಮಾಜಿಕ ಲಕ್ಷಣಗಳೆಂದರೆ

ಅ. ಸಾಮಾಜಿಕ ಸಮಾನತೆ

ಆ. ಶೋಷಣೆ ರಹಿತ ಸಮಾಜ ಸ್ಥಾಪನೆ.

ಅಂದರೆ ಗಾಂಧೀಜಿಯವರು ಶೋಷಣಾ ರಹಿತ ಸರ್ವೋದಯ ಸಮಾಜದ ಕನಸನ್ನು ಕಂಡಿದ್ದು. ಜಾತಿ, ವರ್ಣ, ಲಿಂಗ ಮತ್ತು ಪಂಥ ಇವೇ ಮೊದಲಾದ ಆಧಾರದ ಮೇಲೆ ತಾರತಮ್ಯ ಎಣಿಸಬಾರದೆಂದು ಆಶಿಸಿದ್ದರು.

**೪. ನೈತಿಕ ಹಾಗೂ ಧಾರ್ಮಿಕ ಲಕ್ಷಣಗಳು**

ಗಾಂಧೀಜಿಯವರ ಸರ್ವೋದಯ ಸಮಾಜದ ನೈತಿಕ ಹಾಗೂ ಧಾರ್ಮಿಕ ಲಕ್ಷಣಗಳು ಈ ಕೆಳಕಂಡಂತಿವೆ

ಅ. ನೈತಿಕತೆಗೆ ಆದ್ಯತೆ

ಆ. ಅಹಿಂಸೆಗೆ ಪ್ರಾಧಾನ್ಯತೆ

ಇ. ಸಪ್ತ ಸಾಮಾಜಿಕ ಪಾಪಗಳಿಂದ ಮುಕ್ತವಾಗಿರುವುದು.

ಅಂದರೆ, ಸರ್ವೋದಯ ಸಮಾಜವು ನೀತಿ ಮತ್ತು ಧರ್ಮಾಧಾರಿತ ಸಮಾಜಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದು. ಸಪ್ತ ಸಾಮಾಜಿಕ ಪಾಪದಿಂದ ಮುಕ್ತವಾದ ಸಮಾಜವನ್ನು ನಿರ್ಮಾಣ ಮಾಡುವ ಗುರಿಯನ್ನು ಹೊಂದಿದೆ. ಆ ಸಪ್ತ ಸಾಮಾಜಿಕ ಪಾಪಗಳೆಂದರೆ:

ಅ. ತತ್ವರಹಿತ ರಾಜಕೀಯ

ಆ. ದುಡಿಮೆಯಿಲ್ಲದೆ ಸಂಪತ್ತು

ಇ. ನೀತಿ ಹೀನ ವಾಣಿಜ್ಯ

ಈ. ಶೀಲವಿಲ್ಲದ ಶಿಕ್ಷಣ

ಉ. ಆತ್ಮಸಾಕ್ಷಿ ರಹಿತ ಭೋಗ

ಊ. ಮಾನವತಾ ಶೂನ್ಯ ವಿಜ್ಞಾನ

ಋ. ತ್ಯಾಗವಿಲ್ಲದ ಪೂಜೆ

ಈ ಮೇಲ್ಕಂಡ ತತ್ವಗಳ ಆಧಾರಗಳ ಮೇಲೆ ಸರ್ವೋದಯ ಸಮಾಜದ ಸ್ಥಾಪನಾ ಕನಸನ್ನು ಕಂಡಿದ್ದ ಗಾಂಧೀಜಿಯವರು ಈ ಕೆಳಕಂಡ ಕಾರ್ಯಕ್ರಗಳನ್ನು ಸಲಹೆ ಮಾಡಿದ್ದಾರೆ.

**೧. ವ್ಯಕ್ತಿಯ ಸ್ಥಾನ**

ಸರ್ವೋದಯ ಸಮಾಜದಲ್ಲಿ ವ್ಯಕ್ತಿಗೆ ಮಹತ್ವದ ಸ್ಥಾನವನ್ನು ನೀಡಿದ್ದು, ವ್ಯಕ್ತಿಯ ವ್ಯಕ್ತಿತ್ವ ವಿಕಾಸಕ್ಕೆ ಸಮಾಜ ನೆರವಾಗಬೇಕೆಂದು ಬಯಸುತ್ತದೆ.

**೨. ಸಮಾನತೆ**

ವ್ಯಕ್ತಿಯ ಸ್ವಾತಂತ್ರ್ಯವನ್ನು ಮತ್ತು ಸಮಾನತೆಯನ್ನು ಹೊಂದಿರಬೇಕು ಎಂದು ಆಶಿಸುವ ಸರ್ವೋದಯವು, ಶೋಷಣೆಯನ್ನು ಅಸಮಾನತೆಯನ್ನು ಖಂಡಿಸುತ್ತದೆ.

**೩. ಆಸ್ತಿಯ ಬಗ್ಗೆ**

ಸರ್ವರ ಹಿತಕ್ಕಾಗಿ ಭೂಮಿಯು ಸೇರಿದಂತೆ ಸಂಪತ್ತಿನ ಹಂಚಿಕೆಯಾಗಬೇಕೆಂದು ಸರ್ವೋದಯ ಬಯಸುತ್ತದೆ. ಆದ್ದರಿಂದಲೇ ಆಚಾರ್ಯ ವಿನೋಭಾಭಾವೆಯವರ ನೇತೃತ್ವ ದಲ್ಲಿ ಭೂದಾನ, ಗ್ರಾಮದಾನ ಹಾಗೂ ಗೋಹತ್ಯೆ ನಿಷೇಧ ಚಳುವಳಿಯನ್ನು ಹಮ್ಮಿ ಕೊಳ್ಳಲಾಗಿತ್ತು.

**೪. ರಾಜ್ಯರಹಿತ ಸಮಾಜ**

ಸರ್ವೋದಯ ಸಮಾಜವನ್ನು ಸ್ಥಾಪಿಸಿದ ನಂತರ ರಾಜ್ಯವನ್ನು ರದ್ದು ಮಾಡಬೇಕೆಂದು ಸರ್ವೋದಯವು ಕರೆ ನೀಡುತ್ತದೆ. ಈ ಸರ್ವೋದಯದ ಪ್ರಕಾರ ರಾಜ್ಯ ಎಂಬುದು ಹಿಂಸೆಯ, ಶೋಷಣೆಯ, ಅಸಮಾನತೆಯ ಸಂಕೇತವಾಗಿದ್ದು, ರಾಜ್ಯರಹಿತ ಸಮಾಜ ಸ್ಥಾಪನೆಯ ಕನಸನ್ನು ಕಾಣಲಾಗಿದೆ.

**೫. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ**

ಭಾರತದ ಪರಿಸ್ಥಿತಿಗೆ ಅನುಗುಣವಾಗಿ ಕೃಷಿ ಮತ್ತು ಭಾರತದಲ್ಲಿ ವಿಫುಲ ಜನಸಂಖ್ಯೆ ಇರುವುದರಿಂದ ಗ್ರಾಮೀಣ ಗುಡಿ ಕೈಗಾರಿಕೆಗೆ ಆದ್ಯತೆ ನೀಡಬೇಕೆಂದು ಬಯಸಿದ್ದರು.

**೬. ಖಾದಿ**

ಸ್ವದೇಶಿ ತತ್ವ ನಂಬಿದ್ದ ಗಾಂಧೀಜಿಯವರು ಅದರ ಅನುಷ್ಠಾನಕ್ಕೆ ಪ್ರತಿಯೊಬ್ಬರ ಮನೆಯಲ್ಲೂ 'ಚರಕ' ವಿರಬೇಕೆಂದು ಆಶಿಸಿದ್ದರು. ಖಾದಿ ರಾಷ್ಟ್ರೀಯತೆ, ಆರ್ಥಿಕ ಸ್ವಾತಂತ್ರ್ಯ ಹಾಗೂ ಸಮಾನತೆಯ ಸಂಕೇತವೆಂದು ಪ್ರತಿಪಾದಿಸಿದ್ದರು.

**೭. ಧಾರ್ಮಿಕ ಸಾಮರಸ್ಯ**

ಸರ್ವಧರ್ಮ ಸಮನ್ವಯತೆಯಲ್ಲಿ ಗಾಂಧೀಜಿ ನಂಬಿಕೆಯಿಟ್ಟಿದ್ದರು. ಗಾಂಧೀಜಿ ಸ್ವತಃ

ಒಬ್ಬ ಹಿಂದೂ ಎಂದೂ ಕರೆದುಕೊಂಡಿದ್ದರೂ ಸಹ ಎಲ್ಲಾ ಮತ ಧರ್ಮದವರನ್ನು ಸಮಾನತೆಯಿಂದ ಕಾಣುತ್ತಿದ್ದರು.

**೮. ಅಸ್ಪೃಶ್ಯತಾ ಆಚರಣೆ ರದ್ದು**

ಅಸ್ಪೃಶ್ಯತೆ ಹಿಂದು ಧರ್ಮದಲ್ಲಿನ ಶಾಪವೆಂದೇ ಭಾವಿಸಿದ್ದ ಗಾಂಧೀಜಿ ಅದನ್ನು ನಿರ್ಮೂಲನೆ ಮಾಡುವುದೇ ಸರ್ವೋದಯದ ಪರಮ ಗುರಿ ಎಂದಿದ್ದಾರೆ.

**೯. ಸ್ತ್ರೀ ಸಮಾನತೆ**

ಗಾಂಧೀಜಿಯವರು ಸ್ತ್ರೀಯರಿಗೆ ಹೆಚ್ಚಿನ ಗೌರವವನ್ನು ನೀಡುತ್ತಿದ್ದರು. ಆದ್ದರಿಂದ ಸ್ತ್ರೀ ಪುರುಷರ ಸಮಾನತೆ ಬಯಸಿದ್ದಾರೆ.

**೧೦. ಮದ್ಯಪಾನ ನಿಷೇಧ**

ಮದ್ಯ ಹಾಗೂ ಮಾದಕ ವಸ್ತುಗಳಿಂದ ಮುಕ್ತವಾದ ಸಮಾಜವೇ ಸರ್ವೋದಯ ಸಮಾಜ ಎಂಬುದಾಗಿ ಗಾಂಧೀಜಿ ಭಾವಿಸಿದ್ದರು.

**೧೧. ವೃತ್ತಿ ಶಿಕ್ಷಣ**

ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ವೃತ್ತಿ ಶಿಕ್ಷಣವೇ ಪರಿಹಾರವೆಂದು ಗಾಂಧೀಜಿ ಯವರು ಅಭಿಪ್ರಾಯ ಪಟ್ಟಿದ್ದರು.

**ಉಪಸಂಹಾರ**

ಭಾರತ ಸ್ವಾತಂತ್ರ್ಯ ಪಡೆದದ್ದು ಗಾಂಧೀಜಿಯವರ ಸತ್ಯ, ಅಹಿಂಸೆ ತತ್ವಗಳ ಮೂಲಕವೇ ಆಗಿರುವುದರಿಂದ ಗಾಂಧೀಯವರ ವಿಚಾರಗಳು ಮೇಲ್ನೋಟಕ್ಕೆ ಆದರ್ಶಗಳ ರೂಪದಲ್ಲಿ ಕಂಡುಬಂದರೂ ಹೆಚ್ಚು ವಾಸ್ತವಿಕ ವಿಚಾರಗಳಾಗಿವೆ. ಆದುದರಿಂದಲೇ ಗಾಂಧೀಜಿಯವರು ಕಣ್ಮರೆಯಾದರೂ ಅವರ ವಿಚಾರಗಳು ಚಿರನೂತನವಾಗಿವೆ.

**೨.೪ ಡಾ. ಬಿ.ಆರ್. ಅಂಬೇಡ್ಕರ್ (೧೮೯೧ - ೧೯೫೬)**

**ಅ. ಜೀವನ ಚಿತ್ರ (ಸ್ಥಳ, ಕಾಲ ಮತ್ತು ಕೃತಿಗಳು)**

ಡಾ. ಬಿ.ಆರ್. ಅಂಬೇಡ್ಕರ್ ರವರು ರಾಮ್ಜಿ ಸಕ್ಪಾಲ್‌ರಿಗೆ ಹದಿನಾಲ್ಕನೆಯ ಮಗನಾಗಿ ೧೮೯೧ನೇ ಇಸವಿ ಏಪ್ರಿಲ್ ೧೪ ರಂದು ಜನಿಸಿದರು. ಈ ಮಗುವಿಗೆ ಭೀಮ್ ಎಂದು ಹೆಸರಿಡಲಾಯಿತು. ಭೀಮ್‌ರ ತಾಯಿ ಭೀಮಬಾಯಿ ಮುರ್ಬಾದ್‌ಕರ್ ಎನ್ನುವ ಒಂದು ಅಸ್ಪೃಶ್ಯ ಹಿಂದೂ ಕುಟುಂಬಕ್ಕೆ ಸೇರಿದವರಾಗಿದ್ದರು. ಭೀಮ್‌ನಿಗೆ ಎರಡು ವರ್ಷಗಳು ತುಂಬುವ ಒಳಗೆ ಅವರ ತಂದೆಯು ಸೈನಿಕ ಸೇವೆಯಿಂದ ನಿವೃತ್ತರಾದರು ಮತ್ತು ಕೊಂಕಣ್ ಪ್ರದೇಶದ ದಪೋಲಿಯಲ್ಲಿ ಅವರನ್ನು ಶಾಲೆಗೆ ಸೇರಿಸಿದರು. ಆದರೆ ಅಲ್ಲಿ ಸುಬೇದಾರ್ ರಾಮ್ಜಿ ಸಕ್‌ಪಾಲ್‌ರವರು ಬಹಳ ಕಾಲ ಇರಲಾಗಲಿಲ್ಲ. ಅವರು ಬೊಂಬಾಯಿಗೆ ಹೋಗಿ ಸತಾರದಲ್ಲಿ ಸೈನಿಕ ವಸತಿ ಗೃಹದಲ್ಲಿ ಒಂದು ಹುದ್ದೆಯನ್ನು ಪಡೆದುಕೊಂಡು ಕುಟುಂಬ

ಸಹಿತ ಸತಾರಕ್ಕೆ ಬಂದು ನೆಲೆಸಿದರು. ಭೀಮ್‌ರವರಿಗೆ ಆರು ವರ್ಷಗಳಾಗಿದ್ದಾಗ ಅವರ ತಾಯಿ ಭೀಮಾಬಾಯಿ ಮರಣ ಹೊಂದಿದರು. ನಂತರ ಭೀಮ್‌ರವರು ತಮ್ಮ ಸಹೋದರಿಯರ ಮತ್ತು ಚಿಕ್ಕಮ್ಮನ ಆರೈಕೆಯಲ್ಲಿ ಬೆಳೆದರು.

ಭೀಮ್‌ರವರು ಅವರ ಶಾಲಾ ದಿನಗಳಲ್ಲಿ ಬಹಳ ಬೇಗ ಅಸ್ಪೃಶ್ಯತೆಯ ಕಳಂಕ ಏನು ಎನ್ನುವುದನ್ನು ದುಃಖದಿಂದ ಅರ್ಥಮಾಡಿಕೊಂಡರು. ಇದರ ಕರಾಳತೆಯನ್ನು ಭೀಮ್ ತಾವೇ ಕೆಲವು ಸಂದರ್ಭಗಳಲ್ಲಿ ಅತ್ಯಂತ ಅಮಾನವೀಯ ರೀತಿಯಲ್ಲಿ ಅನುಭವಿಸಬೇಕಾಯಿತು. ಒಂದು ಬೇಸಿಗೆಯಲ್ಲಿ ಭೀಮ್ ಮತ್ತು ಆತನ ಅಣ್ಣ ದೂರದ ಊರಲ್ಲಿದ್ದ ತಮ್ಮ ತಂದೆಯನ್ನು ಭೇಟಿ ಮಾಡಲು ಎತ್ತಿನ ಗಾಡಿಯನ್ನು ಬಾಡಿಗೆಗೆ ತೆಗೆದುಕೊಂಡು ತಂದೆಯಿದ್ದ ಸ್ಥಳಕ್ಕೆ ಪ್ರಯಾಣಿಸುತ್ತಿದ್ದಾಗ ದಾರಿಯಲ್ಲಿ ಗಾಡಿಯವನಿಗೆ ಇವರು ಅಸ್ಪೃಶ್ಯರು ಎಂದು ತಿಳಿದು ಬಂದಾಗ ಇವರನ್ನು ಕಸ ಎಸೆಯುವಂತೆ ಗಾಡಿಯಿಂದ ಹೊರಗೆ ಎಸೆದದ್ದು, ಹಾಗೆಯೇ ಭೀಮ್ ಇನ್ನೊಮ್ಮೆ ವಿಪರೀತ ಬಾಯಾರಿಕೆಯಾಗಿದ್ದಾಗ ಸಾರ್ವಜನಿಕ ನೀರು ಹರಿಯುವ ಸ್ಥಳದಲ್ಲಿ ಯಾರಿಗೂ ಕಾಣದಂತೆ ನೀರು ಕುಡಿಯಬೇಕೆಂದು ಕುಡಿಯುತ್ತಿದ್ದಾಗ ಅದು ಸವರ್ಣೀಯರ ಗಮನಕ್ಕೆ ಒಂದು ಅವರು ಭೀಮ್‌ರಿಗೆ ಮೈ ಮುರಿಯುವಂತೆ ಥಳಿಸಿದ್ದರು. ಈ ಘಟನೆಗಳು ಅವರ ಮುಗ್ಧ ಮನಸ್ಸಿನ ಮೇಲೆ ಆಳವಾದ ಪರಿಣಾಮ ಬೀರಿದವು. ಭೀಮ್‌ರ ಮನಸ್ಸು ಈ ಅನುಭವದ ಸಮುದ್ರದಲ್ಲಿ ಅಪಾರವಾದ ತಾಳ್ಮೆಯನ್ನು ಬೆಳೆಸಿಕೊಂಡಿತು. ಇವುಗಳೆಲ್ಲವುದರಿಂದ ಅವರಲ್ಲಿ ಹೋರಾಟದ ಪ್ರವೃತ್ತಿ, ಜಾಣತನ ನಿರ್ಭೀತತೆ ಬೆಳೆದವು.

ಅವರ ಪ್ರೌಢ ಶಿಕ್ಷಣ ಅವಧಿಯಲ್ಲಿ ಬ್ರಾಹ್ಮಣ ಅಧ್ಯಾಪಕರೊಬ್ಬರು ಭೀಮ್‌ರನ್ನು ಬಹಳವಾಗಿ ಇಷ್ಟಪಡುತ್ತಿದ್ದರು. ಅವರ ಉಪನಾಮ ಅಂಬೇಡ್ಕರ್ ಎಂದಿದ್ದಿತು. ಈ ಅಧ್ಯಾಪಕ ಅಂಬೇಡ್ಕರ್‌ರಿಗೆ ಭೀಮ್‌ರ ಬಗ್ಗೆ ಎಷ್ಟು ಅಭಿಮಾನವಿತ್ತೆಂದರೆ ಅವರು ಶಾಲೆಯ ದಾಖಲೆಗಳಲ್ಲಿ ಭೀಮ್‌ರ ಉಪನಾಮ ಅಂಬಾವಡೇಕರ್ ಎನ್ನುವುದನ್ನು ತಮ್ಮ ಸ್ವಂತ ಉಪನಾಮಮೆಯಂತೆ ಅಂಬೇಡ್ಕರ್ ಎಂದು ಬದಲಾಯಿಸಿಕೊಂಡರು. ಅಂಬೇಡ್ಕರ್‌ರವರು ತಮ್ಮ ವಿದ್ಯಾಭ್ಯಾಸದಲ್ಲಿ ಸಂಸ್ಕೃತವನ್ನು ಆಯ್ಕೆಮಾಡಿಕೊಳ್ಳಲು ಸಾಧ್ಯವಾಗದೆ ಒಲ್ಲದ ಮನಸ್ಸಿನಿಂದ ಪರ್ಷಿಯನ್ ಭಾಷೆಯನ್ನು ತೆಗೆದುಕೊಳ್ಳಬೇಕಾಯಿತು. ಆದರೂ ಸಹ ಕೆಲವು ವರ್ಷಗಳ ನಂತರ ಅಂಬೇಡ್ಕರ್‌ರವರು ಸಂಸ್ಕೃತವನ್ನು ಭಾಗಶಃ ತಮಗೆ ತಾವೇ ಮತ್ತು ಕೆಲವು ಸಾರಿ ಕೆಲವು ಪಂಡಿತರ ಸಹಾಯದಿಂದ ಕಲಿತು ಅದರಲ್ಲಿ ಒಬ್ಬ ಪಂಡಿತರಾದರು.

ಇಷ್ಟೆಲ್ಲ ಸಹಿಸಲಾರದ ಅವಮಾನಗಳ ನಡುವೆಯೂ ಅಂಬೇಡ್ಕರ್‌ರವರು ಎಲ್ಫಿನ್ ಸ್ಟೋನ್ ಪ್ರೌಢಶಾಲೆಯಿಂದ ೧೯೦೭ರಲ್ಲಿ ಮೆಟ್ರಿಕುಲೇಷನ್ ಪರೀಕ್ಷೆಯನ್ನು ಪಾಸು ಮಾಡಿದರು.

ಅಂಬೇಡ್ಕರ್‌ರವರು ಹದಿನೇಳು ವರ್ಷದವರಿದ್ದಾಗ ಒಂಭತ್ತು ವರ್ಷಗಳ ವಯಸ್ಸಿನ ರಮಾಬಾಯಿಯೊಂದಿಗೆ ವಿವಾಹವಾಯಿತು.

ಅಂಬೇಡ್ಕರ್‌ರವರು ತಮ್ಮ ಪದವಿ ಅಧ್ಯಯನಕ್ಕಾಗಿ ಬೊಂಬಾಯಿಯ ಎಲ್ಫಿನ್‌ಸ್ಟನ್ ಕಾಲೇಜನ್ನು ಸೇರಿದರು. ಅವರು ಇಂಟರ್ ಆರ್ಟ್ಸ್ ಮುಗಿಸುವ ಹೊತ್ತಿಗೆ ಅವರ

ತಂದೆಯವರು ತುಂಬಾ ಹಣದ ಮುಗ್ಗಟ್ಟಿಗೆ ಸಿಕ್ಕಿ ಹಾಕಿಕೊಂಡರು. ಆಗ ಅವರ ಸ್ನೇಹಿತ ಅವರಿಗೆ ಅಸ್ಪೃಶ್ಯರ ಕಲ್ಯಾಣದ ಬಗ್ಗೆ ಬಹಳ ಆಸಕ್ತಿಯನ್ನು ಹೊಂದಿದ್ದ ಸಯ್ಯಾಜಿರಾವ್ ಗಾಯಕ್‌ವಾಡ್‌ರ ಪರಿಚಯ ಮಾಡಿಕೊಟ್ಟರು. ಅವರು ಅಂಬೇಡ್ಕರ್ ತಮ್ಮ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳಿಂದ ತೃಪ್ತರಾಗಿ ಅಂಬೇಡ್ಕರರಿಗೆ ೨೫ ರೂ.ಗಳ ಮಾಸಿಕ ವೇತನ ಮಂಜೂರು ಮಾಡಿದರು. ಅಂಬೇಡ್ಕರ್ ಇದರ ಸದುಪಯೋಗಪಡಿಸಿಕೊಂಡು ೧೯೧೨ರಲ್ಲಿ ಬಿ.ಎ. ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು.

ಬಿ.ಎ. ಪದವಿಯನ್ನು ಪಡೆದುಕೊಂಡ ನಂತರ ಬರೋಡ ಸರ್ಕಾರದ ಸೇವೆಯಲ್ಲಿ ಲೆಫ್ಟಿನೆಂಟ್ ಆಗಿ ನೇಮಕಗೊಂಡರು. ನೇಮಕಗೊಂಡ ಹದಿನೈದು ದಿವಸಗಳೊಳಗೇ ಆ ಕೆಲಸವನ್ನು ಬಿಟ್ಟು ಅನಾರೋಗ್ಯದಿಂದ ನರಳುತ್ತಿದ್ದ ತಮ್ಮ ತಂದೆಯನ್ನು ನೋಡಲು ಹೋದರು. ಅಂದು ೧೯೧೩ನೇ ಫೆಬ್ರವರಿ ೨ನೇ ತಾರೀಖು ಅಂಬೇಡ್ಕರ್‌ರವರ ತಂದೆ ಮರಣಹೊಂದಿದರು.

ಜೂನ್ ೪, ೧೯೧೩ರಲ್ಲಿ ಮಹಾರಾಜ ಸಯ್ಯಾಜಿರಾವ್ ರವರ ನೆರವಿನಿಂದ ಅಂಬೇಡ್ಕರ್ ಅಮೇರಿಕಕ್ಕೆ ಉನ್ನತ ವ್ಯಾಸಂಗಕ್ಕೆ ತೆರಳಿದರು. ಅಮೆರಿಕಾದ ಕೊಲಂಬಿಯಾ ವಿಶ್ವವಿದ್ಯಾ ನಿಲಯದಲ್ಲಿ ಖ್ಯಾತ ಅರ್ಥಶಾಸ್ತ್ರಜ್ಞರಾದ ಪ್ರೊ. ಸಲಿಗ್‌ಮ್ಯಾನ್ ಇವರ ಅಧ್ಯಾಪಕರಲ್ಲಿ ಒಬ್ಬರಾಗಿದ್ದರು. ೧೯೧೫ರಲ್ಲಿ ಅಂಬೇಡ್ಕರ್‌ರವರು **'ಏನ್‌ಸೇಂಟ್ ಇಂಡಿಯನ್ ಕಾಮರ್ಸ್'** ಎಂಬ ಪ್ರಬಂಧವನ್ನು ಮಂಡಿಸಿ ಎಂ.ಎ. ಪದವಿಯನ್ನು ಪಡೆದರು. ಜೂನ್ ೧೯೧೬ ರಲ್ಲಿ **'ನ್ಯಾಷನಲ್ ಡಿವಿಡೆಂಟ್ ಫಾರ್ ಇಂಡಿಯಾ'; 'ಎ ಹಿಸ್ಟಾರಿಕ್ ಅಂಡ್ ಅನಾಲಿಟಿಕಲ್ ಸ್ಟಡಿ'** ಎಂಬ ಪ್ರಬಂಧವನ್ನು ಮಂಡಿಸಿ ಡಾಕ್ಟರೇಟ್ ಪದವಿಯನ್ನು ಪಡೆದರು.

ಜೂನ್, ೧೯೧೬ರಲ್ಲಿ ಕೊಲಂಬಿಯಾದಿಂದ ಲಂಡನ್ನಿಗೆ ಬಂದ ಅಂಬೇಡ್ಕರ್ ಲಂಡನ್ ಸ್ಕೂಲ್ ಆಫ್ ಎಕಾನಾಮಿಕ್ಸ್ ಮತ್ತು ಪೊಲಿಟಿಕಲ್ ಸೈನ್ಸ್ ಕಾಲೇಜಿಗೆ ಸೇರಿದರು. ಅಲ್ಲಿ ಅಕ್ಟೋಬರ್‌ನಲ್ಲಿ 'ಗ್ರೇ ಇನ್ ಫಾರ್ ಲಾ'ಗೆ ಪ್ರವೇಶವು ದೊರೆಯಿತು. ಆದರೆ ಬರೋಡಾದ ಮಹಾರಾಜರು ವಿದ್ಯಾರ್ಥಿ ವೇತನವನ್ನು ನಿಲ್ಲಿಸಿದ್ದರಿಂದ ಭಾರತಕ್ಕೆ ವಾಪಸ್ಸು ಬರ ಬೇಕಾಯಿತು. ಬರೋಡಾದ ಮಹಾರಾಜರು, ಜುಲೈ ೧೯೧೭ರಲ್ಲಿ ಅಂಬೇಡ್ಕರ್‌ರವರನ್ನು ಮಿಲಿಟರಿ ಕಾರ್ಯದರ್ಶಿಯಾಗಿ ಮತ್ತು ಹಣಕಾಸು ಮಂತ್ರಿಯ ಅಧಿಕಾರಿಯಾಗಿ ನೇಮಿಸಿದರು. ಆದರೂ ಸಮಾಜವು ಅಂಬೇಡ್ಕರ್‌ರವರನ್ನು ಭಿನ್ನರಾಗೇನೂ ನೋಡದ ಕಾರಣ ಮತ್ತೆ ರಾಜೀನಾಮೆ ನೀಡಿ ನವೆಂಬರ್, ೧೯೧೭ ಬರೋಡಾದಿಂದ ಬಾಂಬೆಗೆ ಬಂದು ಷೇರು ಮಾರಾಟದ ವ್ಯಾಪಾರವನ್ನು ಪ್ರಾರಂಭಿಸಿದರು, ಆದರೆ ಗ್ರಾಹಕರು ಇವರು ಅಸ್ಪೃಶ್ಯರೆಂದು ತಿಳಿದು ಇವರ ಬಳಿಗೆ ಬರುತ್ತಿರಲಿಲ್ಲ. ಕೊನೆಗೆ ಶಾಶ್ವತವಾಗಿ ಷೇರು ಮಾರಾಟದ ಮಳಿಗೆ ಯನ್ನು ಮುಚ್ಚಿದರು.

ನಂತರ ಅಂಬೇಡ್ಕರ್ ನವೆಂಬರ್ ೧೧, ೧೯೧೮ ರಿಂದ ಮಾರ್ಚ್ ೧೧, ೧೯೨೦ ರವರೆಗೆ ಬಾಂಬೆಯ ಸಿಡಿನ್ ಹ್ಯಾಮ್ ಕಾಲೇಜಿನ ಪೊಲಿಟಿಕಲ್ ಎಕಾನಮಿಯ ಪ್ರಾಧ್ಯಾಪಕರಾಗಿ

ಹಂಗಾಮಿಯಾಗಿ ಕೆಲಸ ಮಾಡಿದರು. ಈ ಅವಧಿಯಲ್ಲಿ ರೂ. ೪೫೦ಗಳನ್ನು ವೇತನವಾಗಿ ಪಡೆಯುತ್ತಿದ್ದ ಅಂಬೇಡ್ಕರ್, ಸುಮಾರು ರೂ. ೭೦೦೦ ಗಳನ್ನು ಉಳಿಸಿ, ಹುದ್ದೆಗೆ ರಾಜಿನಾಮೆ ನೀಡಿ ಲಂಡನ್‌ಗೆ ತೆರಳಿದರು. ಜೂನ್, ೧೯೨೧ರಲ್ಲಿ 'ಪ್ರಾವಿಷನಲ್ ಡಿ ಸೆಂಟ್ರಲೈಜೇಷನ್ ಆಫ್ ಇಂಪೀರಿಯಲ್ ಫೈನಾನ್ಸ್' ಮೇಲೆ ಬರೆದ ಪ್ರಬಂಧಕ್ಕೆ ಲಂಡನ್ ವಿಶ್ವವಿದ್ಯಾನಿಲಯ ದಿಂದ ಎಂ.ಎಸ್ಸಿ. (ಎಕಾನಾಮಿಕ್ಸ್) ಪದವಿಯನ್ನು, ೧೯೨೨ರಲ್ಲಿ ಬ್ಯಾರಿಸ್ಟರ್ ಪದವಿಯನ್ನು, ಮಾರ್ಚ್ ೧೯೨೩ರಲ್ಲಿ ಮಂಡಿಸಿದ ಪ್ರಬಂಧ 'ದ ಪ್ರಾಬ್ಲಮ್ ಆಫ್ ರುಪೀಸ್'ಗೆ ಡಿ.ಎಸ್ಸಿ., ಪದವಿಯನ್ನು ಪಡೆದರು. ಭಾರತಕ್ಕೆ ವಾಪಾಸಾದ ಅಂಬೇಡ್ಕರ್ ಜುಲೈ ೧೯೨೮ರಲ್ಲಿ ಬಾಂಬೆ ಹೈಕೋರ್ಟಿನಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು.

ಅಸ್ಪೃಶ್ಯರು ಅನುಭವಿಸುತ್ತಿದ್ದ ಸಾಮಾಜಿಕ ಅನ್ಯಾಯವನ್ನು ಪ್ರತಿಭಟಿಸಲು ಅಂಬೇಡ್ಕರ್ ರವರು ಜುಲೈ ೨೦ ರಲ್ಲಿ **'ಬಹಿಷ್ಕೃತ್ ಹಿತ ರಕ್ಷಣಾ ಸಭಾ'**ವನ್ನು ಏಪ್ರಿಲ್ ೩, ೧೯೨೭ರಲ್ಲಿ **'ಬಹಿಷ್ಕೃತ್ ಭಾರತ್'** ಹಾಗೂ **'ಸಮತಾ'** ಮತ್ತು **'ಜನತಾ'** ಎಂಬ ಪಾಕ್ಷಿಕ ಪತ್ರಿಕೆಗಳನ್ನು ಪ್ರಾರಂಭಿಸಿದರು.

೧೯೨೮ರಲ್ಲಿ ಬಾಂಬೆಯ ಸರ್ಕಾರಿ ಲಾ ಕಾಲೇಜಿನ ಪ್ರೊಫೆಸರ್ ಆಗಿ ಸೇರಿದ ಇವರು, ೧೯೩೦, ೧೯೩೧ರಲ್ಲಿ ಲಂಡನ್ನಿನಲ್ಲಿ ನಡೆದ ದುಂಡು ಮೇಜಿನ ಸಮ್ಮೇಳನದಲ್ಲಿ ಅಸ್ಪೃಶ್ಯರ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಜುಲೈ ೧೯೩೫ರಲ್ಲಿ ಬಾಂಬೆಯ ಸರ್ಕಾರಿ ಲಾ ಕಾಲೇಜಿನ ಪ್ರಿನ್ಸಿಪಾಲ್ ಹಾಗೂ ಜ್ಯೂರಿಸ್ ಪ್ರೂಡೆನ್ಸ್‌ನ ಪ್ರೊಫೆಸರ್ ಆಗಿ ನೇಮಕಗೊಂಡರು.

೧೯೩೭ರಲ್ಲಿ ಸ್ವತಃ ಅಂಬೇಡ್ಕರ್ ಇಂಡಿಪೆಂಡೆಂಟ್ ಲೇಬರ್ ಪಾರ್ಟಿ ಎಂಬ ರಾಜಕೀಯ ಪಕ್ಷವನ್ನು ಸ್ಥಾಪಿಸುವ ಮೂಲಕ ಬಾಂಬೆ ಅಸೆಂಬ್ಲಿಗೆ ನಡೆದ ಚುನಾವಣೆಯಲ್ಲಿ ೧೭ ಸ್ಥಾನಗಳಿಗೆ ಸ್ಪರ್ಧಿಸಿ ೧೫ ಸ್ಥಾನ ಪಡೆಯುವ ಮೂಲಕ, ತಾವು ಸಹ ಬಾಂಬೆ ಅಸೆಂಬ್ಲಿಯನ್ನು ಪ್ರವೇಶಿಸಿದರು. ೧೯೩೭ರಲ್ಲಿ 'ಮಹರ್' ಪದ್ಧತಿ ರದ್ದಿನ ಬಿಲ್ಲನ್ನು ಮಂಡಿಸಿದರು.

ಜುಲೈ ೧೯೪೨ ರಿಂದ ಜುಲೈ ೧೯೪೬ರ ವರೆಗೆ ಗವರ್ನರ್ ಜನರಲ್‌ನ ಎಕ್ಸಿಕ್ಯೂಟಿವ್ ಕೌನ್ಸಿಲ್‌ನ ಲೇಬರ್ ಸದಸ್ಯರಾಗಿ ನೇಮಕಗೊಂಡರು. ನವೆಂಬರ್ ೧೯೪೬ರಲ್ಲಿ ಬೆಂಗಾಲ್ ನಿಂದ ಸಂವಿಧಾನದ ಕರಡು ಸಮಿತಿಯ ಅಧ್ಯಕ್ಷರಾಗಿ ಆಯ್ಕೆಯಾದರು. ಆಗಸ್ಟ್ ೧೯೪೭ ರಂದು ನೆಹರು ಮಂತ್ರಿಮಂಡಲಕ್ಕೆ ಕಾನೂನು ಮಂತ್ರಿಯಾಗಿ ನೇಮಕಗೊಂಡ ಅಂಬೇಡ್ಕರ್ ಸೆಪ್ಟೆಂಬರ್ ೧೯೫೧ ರಂದು ಹಿಂದು ಕೋಡ್‌ಬಿಲ್‌ಗೆ ಸಂಬಂಧಿಸಿದಂತೆ ನೆಹರೂ ಮಂತ್ರಿ ಮಂಡಲಕ್ಕೆ ರಾಜಿನಾಮೆ ನೀಡಿದರು. ಏಪ್ರಿಲ್ ೧೫, ೧೯೪೮ರಲ್ಲಿ ವೃತ್ತಿಯಲ್ಲಿ ವೈದ್ಯೆಯಾದ ಶಾರದ ಕಬೀರ(ಸವಿತಾ ಅಂಬೇಡ್ಕರ್)ರವರನ್ನು ಮದುವೆಯಾದರು. ಅಕ್ಟೋಬರ್ ೧೪, ೧೯೫೬ರಲ್ಲಿ ನಾಗಪುರದಲ್ಲಿ ನಡೆದ ಒಂದು ಬೃಹತ್ ಸಭೆಯಲ್ಲಿ ಅಂಬೇಡ್ಕರ್‌ರವರು ತಮ್ಮ ಪತ್ನಿಯೊಡನೆ ಬೌದ್ಧ ಧರ್ಮಕ್ಕೆ ಸೇರಿದರು. ಡಿಸೆಂಬರ್ ೬, ೧೯೫೬ರಲ್ಲಿ ನಿಧನ ಹೊಂದಿದರು.

**ಕೃತಿಗಳು**

೧. ದಿ ಅನ್‌ಟಚೆಬಲ್ಸ್ (1948, The Untouchables)

೨. ಹೂ ವರ್ ದಿ ಶೂದ್ರಾಸ್ (1946, Who were the Shudras)

೩. ಬುದ್ಧ ಅಂಡ್ ಹಿಸ್ ಧಮ್ಮ (1957, Budda and His Dhamma)

೪. ವಾಟ್ ಕಾಂಗ್ರೆಸ್ ಅಂಡ್ ಗಾಂಧೀ ಹ್ಯಾವ್ ಡನ್ ಟು ದಿ ಅನ್‌ಟಚೆಬಲ್ಸ್ (1945, What Congress and Gandhi have done to the Untouchables)

೫. ಸ್ಟೇಟ್ಸ್ ಅಂಡ್ ಮೈನಾರಿಟೀಸ್ (1947, States and Minorities)

೬. ಮಹಾರಾಷ್ಟ್ರ ಆ್ಯಸ್ ಎ ಲಿಂಗ್ವಿಸ್ಟಿಕ್ ಪ್ರಾವಿನ್ಸ್ (1955, Maharastra as a Linguistic Province)

೭. ದ ಪ್ರಾಬ್ಲಮ್ ಆಫ್ ದಿ ರುಪೀ (1923, The Problem of the Rupee)

೮. ದಿ ಎವಲ್ಯೂಷನ್ ಆಫ್ ಪ್ರಾವಿನ್ಸಿಯಲ್ ಫೈನಾನ್ಸ್ ಇನ್ ಬ್ರಿಟಿಷ್ ಇಂಡಿಯಾ (1923, The Evolution of Provincial Finance in British India)

೯. ದಿ ರೈಸ್ ಆಂಡ್ ಫಾಲ್ ದಿ ಹಿಂದೂ ವುಮೆನ್ (1965, The Rise and Fall of the Hindu Women )

ಇನ್ನೂ ಹಲವಾರು ಕೃತಿಗಳು, ಭಾಷಣಗಳು ಮತ್ತು ಲೇಖನಗಳನ್ನು ಅಂಬೇಡ್ಕರ್‌ರವರು ರಚಿಸಿದ್ದಾರೆ.

**ಆ. ಭಾರತ ಸಂವಿಧಾನ ರಚನೆಯಲ್ಲಿ ಅಂಬೇಡ್ಕರ್ ಅವರ ಕೊಡುಗೆ**

ಡಾ. ಬಿ.ಆರ್. ಅಂಬೇಡ್ಕರ್‌ರವರು ಆಧುನಿಕ ಭಾರತದ ನಿರ್ಮಾಣಕಾರರಲ್ಲಿ ಒಬ್ಬರಾಗಿದ್ದಾರೆ. ಹಾಗೆಯೇ ಭಾರತದ ಸಂವಿಧಾನ ರಚನೆಯಲ್ಲಿ ಅವರು ನೀಡಿದ ಕೊಡುಗೆಯನ್ನು ಮನ್ನಿಸಿ ಅವರನ್ನು ಭಾರತ ಸಂವಿಧಾನದ ಶಿಲ್ಪಿ ಮತ್ತು ಆಧುನಿಕ ಮನು ಎಂದೆಲ್ಲಾ ಸಂಭೋಧಿಸಲಾಗಿದೆ. ೧೯೫೦ ರಲ್ಲಿ ಜೂನ್ ೫ನೇ ತಾರೀಖಿನಂದು ಕೊಲಂಬಿಯಾ ವಿಶ್ವವಿದ್ಯಾನಿಲಯವು ಭಾರತ ಸಂವಿಧಾನವನ್ನು ರಚಿಸುವುದರಲ್ಲಿ ಡಾ. ಅಂಬೇಡ್ಕರ್ ಮಾಡಿದ ಸಾಧನೆಗಾಗಿ ಅವರಿಗೆ ಎಲ್.ಎಲ್.ಡಿ ಪದವಿ ಪ್ರದಾನ ಮಾಡಿತು. ಭಾರತದ ಸಂವಿಧಾನವನ್ನು ರಚಿಸುವುದರಲ್ಲಿ ಡಾ. ಅಂಬೇಡ್ಕರ್ ವಹಿಸಿದ ರಚನಾತ್ಮಕ ಪಾತ್ರವನ್ನು ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾಗಿದ್ದ ಡಾ. ಬಾಬೂ ರಾಜೇಂದ್ರ ಪ್ರಸಾದ್, ಪಂಡಿತ್ ಜವಾಹರ್‌ಲಾಲ್ ನೆಹರು, ಶ್ರೀ ಫ್ರ್ಯಾಂಕ್ ಆಂಥೋಣಿ ಮೊದಲಾದ ಗಣ್ಯರು ಮುಕ್ತ ಕಂಠದಿಂದ ಪ್ರಶಂಸಿಸಿದ್ದಾರೆ. ಡಾ. ಅಂಬೇಡ್ಕರ್‌ರವರು ಸಂವಿಧಾನದ ಕರಡು ಪ್ರತಿಯನ್ನು ಸಿದ್ಧಪಡಿಸಲು ರಚಿಸಲ್ಪಟ್ಟ ಸಮಿತಿಗೆ ಅಧ್ಯಕ್ಷರಾಗಿ ಚುನಾಯಿಸಲ್ಪಡುವುದಕ್ಕೆ ಮೊದಲೇ ಅದರ ರಚನೆಯಲ್ಲಿ ಬಹಳ ರಚನಾತ್ಮಕವಾದ ಪಾತ್ರವನ್ನು ವಹಿಸಿದ್ದರು. ಕೇವಲ ಮೂರು ವರ್ಷಗಳ (ಡಿಸೆಂಬರ್ ೧೯೪೬ ರಿಂದ ೧೯೪೯) ಅವಧಿಯಲ್ಲಿ ಭಾರತಕ್ಕೆ ಬೃಹತ್ ಸಂವಿಧಾನವನ್ನು ಕೊಡುಗೆಯಾಗಿ ನೀಡಿದರು.

ಸಂವಿಧಾನದ ಪ್ರಕಾರ ನಮ್ಮ ಸಂವಿಧಾನ ರಚನೆಯು ಈ ಮುಂದೆ ತಿಳಿಸಿದ ಅನೇಕ ಅಂಶಗಳಿಂದ ಪ್ರಭಾವಿತವಾಗಿದೆ. ಈ ಅಂಶಗಳಾವುವೆಂದರೆ:

೧. ಬ್ರಿಟಿಷ್ ಆದರ್ಶಗಳು ಮತ್ತು ಸಂಸ್ಥೆ

೨. ಒಂದು ದೊಡ್ಡ ಶ್ರೇಣಿಯ ಸಂಸದೀಯ ಕಾಯ್ದೆಗಳು

೩. ರಾಷ್ಟ್ರೀಯವಾದಿ ಚಳುವಳಿಗಳ ಪ್ರಭಾವ

೪. ಸಾಮಾಜಿಕವಾಗಿ ಹಿಂದುಳಿದ ಜನರ ಹೋರಾಟ ಮತ್ತು

೫. ದೇಶಗಳ ಅಲ್ಪ ಸಂಖ್ಯಾತರು

ಡಾ. ಅಂಬೇಡ್ಕರ್‌ರವರು ದೇಶದ ಸಂವಿಧಾನಕ್ಕೆ ಒಂದು ಉತ್ತಮವಾದ ರೂಪವನ್ನು ಕೊಡಲು ಈ ಮೇಲೆ ತಿಳಿಸಿರುವ ಎಲ್ಲಾ ಅಂಶಗಳ ಬಗ್ಗೆ ವಿಫುಲವಾದ ಜ್ಞಾನವನ್ನು ಹೊಂದಿದ್ದರು. ಒಬ್ಬ ವಿದ್ಯಾರ್ಥಿಯಾಗಿ ಅವರು ವಿಶ್ವದ ಎಲ್ಲಾ ಲಿಖಿತ ಮತ್ತು ಅಲಿಖಿತ ಸಂವಿಧಾನಗಳ ಪ್ರತಿಯೊಂದು ಉಪಬಂಧವನ್ನು ಚೆನ್ನಾಗಿ ಕರಗತ ಮಾಡಿಕೊಂಡಿದ್ದರು. ಹಣಕಾಸು, ಅರ್ಥಶಾಸ್ತ್ರ, ಕಾನೂನು ಮತ್ತು ಸಂವಿಧಾನದ ಅವರ ಅಧ್ಯಯನಗಳು ವಿಶ್ವದ ಯಾವುದೇ ಸಂವಿಧಾನದಲ್ಲಾದರೂ ಸೂಚಿತವಾಗಿರುವ ಪ್ರತಿಯೊಂದು ತತ್ವವನ್ನು ವಿಶ್ಲೇಷಿಸುವ ಅವರು ಪೂರ್ಣವಾಗಿ ಸಜ್ಜಾಗಿರುವಂತೆ ಮಾಡಿದವು. ಡಾ. ಅಂಬೇಡ್ಕರ್‌ರವರು ದೇಶದ ಭದ್ರತೆಯನ್ನು ಸಾಧಿಸಲು ಭಾರತಕ್ಕೆ ಒಂದು ಸಂಯುಕ್ತ ರಾಷ್ಟ್ರ ವ್ಯವಸ್ಥೆಯನ್ನು ಅಳವಡಿಸಿಕೊಂಡರೂ ಸಂವಿಧಾನಾತ್ಮಕವಾಗಿ ಅದನ್ನು ಅವಿಚ್ಛಿನ್ನ ಒಕ್ಕೂಟ (Union)ವಾಗಿ ರೂಪಿಸಿದ್ದು, ರಾಷ್ಟ್ರಪತಿ ಸಂಬಂಧಿಸಿದ ವಿಶಿಷ್ಟ ಅನುಬಂಧಗಳನ್ನು ಸಂವಿಧಾನದಲ್ಲಿ ಸೇರಿಸಿರುವುದು ಮಹಾಮೇಧಾವಿತನಕ್ಕೆ ಹಿಡಿದ ಕನ್ನಡಿಯಂತಿದೆ.

### ೩. ದುರ್ಬಲ ವರ್ಗಗಳ ಸಶಕ್ತೀಕರಣ

ಹಿಂದುಳಿದ ವರ್ಗಗಳ ಸಶಕ್ತೀಕರಣಕ್ಕೆ ಅನುಕೂಲವಾಗುವ ಬಹಳಷ್ಟು ವಿಧಿಗಳನ್ನು ಸಂವಿಧಾನದ ನಾಲ್ಕನೇ ಅಧ್ಯಾಯದಲ್ಲಿ ಪ್ರಸ್ತಾಪಿಸಿ ಆಳುವವರು ಹಿಂದುಳಿದ ವರ್ಗಗಳು, ಅಲ್ಪ ಸಂಖ್ಯಾತರು ಮತ್ತು ಬಹು ಸಂಖ್ಯಾತರಿದ್ದಾರೆ ಎಂದು ತಿಳಿದು ಕಾರ್ಯಗತ ಮಾಡ ಬೇಕೆಂದಿದ್ದಾರೆ. ಒಂದು ಸಂದರ್ಭದಲ್ಲಿ ಗೃಹ ಸಚಿವ ಕಡ್ಜು, ಅಲ್ಪ ಸಂಖ್ಯಾತರ ಹಿತರಕ್ಷಣೆಗೆ ಅವಕಾಶವಿಲ್ಲದ ಸಂವಿಧಾನದ ಕರಡನ್ನು ಅಂಬೇಡ್ಕರರೇ ತಯಾರಿಸಿದ್ದು ಎಂದು ಹೇಳಿದಾಗ ಅಂಬೇಡ್ಕರ್ ಈ ರೀತಿ ಉತ್ತರಿಸಿದರು : "ಸ್ವಾಮಿ, ನನ್ನ ಮಿತ್ರರು ರಾಜ್ಯಾಂಗವನ್ನು ನಾನು ಮಾಡಿದೆನೆಂದು ಹೇಳುತ್ತಾರೆ. ಆದರೆ ಅದನ್ನು ತಿರಸ್ಕರಿಸಲು ನಾನೇ ಮೊದಲ ವ್ಯಕ್ತಿಯಾಗಿ ತಯಾರಾಗಿರುವೆನೆಂದು ಹೇಳಲು ಸಿದ್ಧ ನನಗದು ಬೇಕಾಗಿಲ್ಲ, ಯಾರಿಗೂ ಸಹ ಹೊಂದುವು ದಿಲ್ಲ. ಅದೇನೆ ಇರಲಿ ನಮ್ಮ ಜನಗಳು ಅದನ್ನು ಕಾರ್ಯಗತ ಮಾಡಲು ಬಯಸಿದರೆ, ಬಹುಸಂಖ್ಯಾತರು ಮತ್ತು ಅಲ್ಪಸಂಖ್ಯಾತರು ಇದ್ದಾರೆಂಬುದನ್ನು ಅವರು ನೆನಪಿನಲ್ಲಿಟ್ಟು ಕೊಳ್ಳಬೇಕು" ಎಂದು ಖಾರವಾಗಿಯೇ ಹೇಳಿದ್ದಾರೆ.

ಡಾ. ಅಂಬೇಡ್ಕರ್‌ರವರು ಹಿಂದುಳಿದ ಸಶಕ್ತೀಕರಣಕ್ಕಾಗಿ ಮೀಸಲಾತಿಯನ್ನು ಸಂವಿಧಾನದಲ್ಲಿ ಪ್ರಸ್ತಾಪಿಸಿದ್ದಾರೆ. ಭಾರತದ ವಿಶಿಷ್ಟ ಪರಿಸ್ಥಿತಿಯಲ್ಲಿ ಅಸ್ಪೃಶ್ಯತೆ ಒಂದು ಸಾಮಾಜಿಕ ಅಸಮಾನತೆ ಎಂದು ಅವರು ಭಾವಿಸಿದ್ದರು. ಸಾವಿರಾರು ವರ್ಷಗಳಿಂದ ನಡೆದು ಬಂದಿರುವ ಈ ಐತಿಹಾಸಿಕ ಅನ್ಯಾಯವನ್ನು ಸರಿಪಡಿಸಲು ಅಸ್ಪೃಶ್ಯರಿಗೆ ಮೀಸಲಾತಿ ನೀಡಬೇಕೆಂದು ಒತ್ತಿ ಹೇಳಿದರು. ಹಾಗೂ ಅಂಬೇಡ್ಕರ್ ಕಾನೂನು ಮಂತ್ರಿಯಾಗಿ ಸಂವಿಧಾನದಲ್ಲಿ ಅಸ್ಪೃಶ್ಯತೆ ಆಚರಣೆಯನ್ನು ಒಂದು ಶಿಕ್ಷಾರ್ಹ ಅಪರಾಧ ಹಾಗೂ ಹರಿಜನ ಮತ್ತು ಗಿರಿಜನರಿಗೆ ಮೀಸಲಾತಿ ಎಂಬ ಕ್ರಮವನ್ನು ಸೇರಿಸಲು ಯಶಸ್ವಿಯಾದರು.

ಆಧುನಿಕ ಭಾರತದ ನಿರ್ಮಾಪಕರೂ, ಭಾರತದ ಸಂವಿಧಾನ ಶಿಲ್ಪಿಯೂ, ಶೋಷಣೆಯ ವಿರುದ್ಧದ ಹೋರಾಟದ ದಿಟ್ಟ ನಾಯಕರೂ ಆದ ಡಾ.ಬಿ.ಆರ್. ಅಂಬೇಡ್ಕರ್ ವಿಶ್ವದ ಶ್ರೇಷ್ಠ ಮಾನವತಾವಾದಿ. ಇವರು ಸಾಮಾಜಿಕವಾಗಿ ಶೋಷಿತ ಜನಾಂಗದ ಆಶಾಕಿರಣವು ಆದ ಅಂಬೇಡ್ಕರ್ ಜಾತ್ಯಾತೀತ, ಸಾಮಾಜವಾದಿ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಚಲವಾದ ವಿಶ್ವಾಸವಿಟ್ಟಿದ್ದರು. ಜಾತಿ ಸಮಸ್ಯೆ, ಭಾಷಾ ಸಮಸ್ಯೆ, ಕೋಮುವಾದದ ಸಮಸ್ಯೆ, ಫೆಡರಲ್ ವ್ಯವಸ್ಥೆ, ಆರ್ಥಿಕ ವ್ಯವಸ್ಥೆಯ ಬಗ್ಗೆ ಸ್ಪಷ್ಟವಾದ ಯೋಚನೆ ಹಾಗೂ ಯೋಜನೆಯನ್ನು ಹೊಂದಿದವರಾಗಿದ್ದರು. ಆದ್ದರಿಂದ ಡಾ. ಅಂಬೇಡ್ಕರರು ಎಂದೆಂದಿಗೂ ಭಾರತದ ಆಶಾಕಿರಣ.

**ಸಾರಾಂಶ**

ಜೆ.ಎಸ್. ಮಿಲ್‌ರವರು ಉದಾರವಾದದ ಮಂಡನೆ ಮೂಲಕ ವ್ಯಕ್ತಿಯ ಸರ್ವತೋಮುಖ ಅಭಿವೃದ್ಧಿಗೆ ಸ್ವಾತಂತ್ರ್ಯದ ಮಹತ್ವವನ್ನು ಮಂಡಿಸಿದ್ದಾರೆ. ಹಾಗೆಯೇ ಈ ಸ್ವಾತಂತ್ರ್ಯವಿಲ್ಲದೆ ಸತ್ಯವನ್ನು ಕಂಡು ಹಿಡಿಯಲು ಸಾಧ್ಯವಿಲ್ಲವೆಂದಿದ್ದಾರೆ. ಆದ್ದರಿಂದ ಸತ್ಯದ ಸಂಶೋಧನೆಗೆ ಸ್ವಾತಂತ್ರ್ಯದ ಅಗತ್ಯವನ್ನು ಅವರು ವ್ಯಕ್ತಿಗೆ ಆಹಾರ, ಗಾಳಿ, ನೀರಿನಂತೆಯೇ ಸಮುದಾಯಕ್ಕೆ ಸ್ವಾತಂತ್ರ್ಯವೂ ಅತ್ಯವಶ್ಯಕವಾಗಿರುತ್ತದೆ ಎಂದಿದ್ದಾರೆ. ಜೆ.ಎಸ್. ಮಿಲ್‌ರವರ ಮತ್ತೊಂದು ಪ್ರಮುಖವಾದ ಕೊಡುಗೆಯೆಂದರೆ, ಯಾವುದೇ ಸಮಸ್ಯೆಯ ಚರ್ಚೆಯಲ್ಲಿ ಬಹುಸಂಖ್ಯಾತರು ಮತ್ತು ಅಲ್ಪಸಂಖ್ಯಾತರಿಬ್ಬರಿಗೂ ಸಮಾನವಾದ ಅವಕಾಶ ನೀಡಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗೂ ಸಾಮಾಜಿಕ ಮತ್ತು ರಾಜಕೀಯ ಸಮಸ್ಯೆಗಳ ಪರಿಹಾರದಲ್ಲಿ ಜಾತ್ಯಾತೀತ ಭಾವನೆಯಲ್ಲಿ ಹೆಚ್ಚಿನ ನಂಬಿಕೆ ಇರುವವರಾಗಿದ್ದಾರೆ. ವ್ಯಕ್ತಿ ಸ್ವಾತಂತ್ರ್ಯದಲ್ಲಿ ಹಸ್ತಕ್ಷೇಪ ಮಾಡುವುದನ್ನಾಗಲಿ ಅಥವಾ ನಿಯಂತ್ರಣ ಹೇರುವುದನ್ನಾಗಲೀ ಮಿಲ್ ವಿರೋಧಿಸಿದ್ದಾರೆ.

ಕಾರ್ಲ್‌ಮಾರ್ಕ್ಸ್‌ರವರಿಗೆ ವೈಜ್ಞಾನಿಕ ಸಮಾಜವಾದ ಅಥವಾ ಸಮತಾವಾದವನ್ನು ಪ್ರತಿಪಾದಿಸಿದ ಕೀರ್ತಿ ಸಲ್ಲುತ್ತದೆ. ಇವರ ಅಂತಿಮ ಗುರಿ ವರ್ಗರಹಿತ, ರಾಜ್ಯರಹಿತ ಆದರ್ಶ ಸಮಾಜವಾಗಿರುತ್ತದೆ. ಈ ಸಮಾಜದ ಸ್ಥಾಪನೆಗೆ ಹಲವಾರು ತತ್ವಗಳನ್ನು ಅವರು ಪ್ರತಿಪಾದಿಸಿ

ದ್ದಾರೆ. ಅವುಗಳೆಂದರೆ ದ್ವಂದ್ವಾತ್ಮಕ ಅಥವಾ ತಾರ್ಕಿಕ ಭೌತಿಕವಾದ, ಐತಿಹಾಸಿಕ ಭೌತಿಕವಾದ, ಅಧಿಕ ಮೌಲ್ಯ ಸಿದ್ಧಾಂತ, ವರ್ಗ ಸಂಘರ್ಷ ಕಾರ್ಮಿಕರ ಸರ್ವಾಧಿಕಾರತ್ವ ಮತ್ತು ರಾಜ್ಯದ ನಾಶ. ಸಮಾಜದ ಅಸಮಾನತೆಯನ್ನು ಹೋಗಲಾಡಿಸಿ ಎಲ್ಲರಿಗೂ ಸಮಾನವಾದ ಸ್ವಾತಂತ್ರ್ಯ ಮತ್ತು ಬದುಕನ್ನು ಪ್ರಸ್ತಾಪಿಸಿದ ಸಿದ್ಧಾಂತ ಸಮತಾವಾದವಾಗಿದೆ. ಈ ಸಿದ್ಧಾಂತವು ಜಗತ್ತಿನ ಕಾರ್ಮಿಕರ ಸ್ಥಿತಿಗತಿಯನ್ನು ಉತ್ತಮ ಪಡಿಸುವಲ್ಲಿ ಸಹಾಯ ಮಾಡಿದೆ. ಕಾರ್ಮಿಕರಲ್ಲಿ ಹೊಸ ಚೈತನ್ಯ ತುಂಬುವುದರಲ್ಲಿ ಯಶಸ್ವಿಯಾಗಿದೆ.

ಮಹಾತ್ಮಗಾಂಧಿಯವರ ವಿಚಾರಧಾರೆಗಳು ಜಗತ್ತಿನ ಎಲ್ಲಾ ಸ್ವಾತಂತ್ರ್ಯ ಪಡೆಯುವ ಹೋರಾಟ ನಡೆಸಿದ ರಾಷ್ಟ್ರಗಳಿಗೆ ದಾರಿ ದೀಪವಾಗಿದೆ. ಮಹಾತ್ಮ ಗಾಂಧೀಯವರು ದಕ್ಷಿಣ ಆಫ್ರಿಕಾದಲ್ಲಿ ತಮ್ಮ ಸ್ವಾತಂತ್ರ್ಯ ಹೋರಾಟವನ್ನು ಪ್ರಾರಂಭ ಮಾಡಿ ಭಾರತದ ಸ್ವಾತಂತ್ರ್ಯವನ್ನು ಪಡೆಯುವವರೆಗೆ ನಿರಂತರ ಅಹಿಂಸಾ ಹೋರಾಟವನ್ನು ನಡೆಸಿ ಜಗತ್ತಿಗೆ ಮಾದರಿಯಾಗಿದ್ದಾರೆ. ಅವರ ಅಹಿಂಸಾ ಸ್ವಾತಂತ್ರ್ಯ ಹೋರಾಟವು ಸತ್ಯಾಗ್ರಹದ ಹಲವಾರು ತಂತ್ರಗಳನ್ನು ಒಳಗೊಂಡಿದೆ. ಅವುಗಳೆಂದರೆ, ಅಸಹಕಾರ, ಸಾಮಾಜಿಕ ಬಹಿಷ್ಕಾರ, ಪಿಕೆಟಿಂಗ್, ಕಾನೂನು ಭಂಗ ಚಳುವಳಿ, ಹಿಜರತ್, ಉಪವಾಸ, ಮುಷ್ಕರ, ಕರ ನಿರಾಕರಣೆ.

ಮಹಾತ್ಮ ಗಾಂಧೀಯವರ ಮತ್ತೊಂದು ಮಹತ್ವದ ಕೊಡುಗೆಯೆಂದರೆ ಸರ್ವೋದಯ ಇದು ಜಾನ್ ರಸ್ಕಿನ್ 'ಅನ್ ಟು ದಿ ಲಾಸ್ಟ್' ಗ್ರಂಥದಿಂದ ಪ್ರಭಾವಿತವಾಗಿ ರಚಿಸಲ್ಪಟ್ಟ ಸಮಾಜದ ವ್ಯವಸ್ಥೆಯಾಗಿದೆ. ಇದರ ರಚನೆಗೆ ಪೂರಕವಾದ ಹಲವಾರು ಲಕ್ಷಣಗಳನ್ನು ಸಹ ಅವರು ಪ್ರತಿಪಾದಿಸಿದ್ದಾರೆ. ಕೇವಲ ಆದರ್ಶದ ವಿಷಯಗಳಾದ ಪ್ರೀತಿ, ಸಹಕಾರ, ಸತ್ಯ, ಅಹಿಂಸೆ ಇವೇ ಮೊದಲಾದ ತತ್ವಗಳು ಅವರ ಸರ್ವೋದಯದ ಮೂಲ ತತ್ವಗಳಾಗಿವೆ, ಅದರ ಆಧಾರದ ಮೇಲೆಯೇ ಸರ್ವೋದಯ ಸಮಾಜ ರಚನೆಯಾಗಬೇಕೆಂಬ ಕನಸನ್ನು ಕಂಡಿದ್ದರು. ಹಾಗೆಯೇ, ಎಲ್ಲರ ಒಳಿತಿನಲ್ಲಿಯೇ ತನ್ನ ಒಳಿತು ಅಡಗಿದೆ ಎಂಬುದು, ಎಲ್ಲ ಬಗೆಯ ಶ್ರಮಗಳು ಸಮಾನವಾದವುಗಳು ಎಂಬುದು ಮತ್ತು ಶ್ರಮಜೀವಿಯ ಬಾಳೇ ಭವ್ಯವಾದ ಬಾಳು ಎಂಬುದು ಜಗತ್ತಿನ ಯಾವ ಸಮುದಾಯಕ್ಕಾದರೂ ಅನ್ವಯವಾಗುವ ವಿಶ್ವ ಚಿಂತನೆಯಾಗಿದೆ. ಹಾಗಾಗಿಯೇ ಗಾಂಧಿ ವಿಶ್ವಸಮುದಾಯಕ್ಕೆ ಅಮರರಾಗುಳಿದಿರುವುದು.

ಡಾ ಬಿ.ಆರ್. ಅಂಬೇಡ್ಕರ್‌ರವರು ನಿಮ್ನ ವರ್ಗದಲ್ಲಿ ಜನಿಸಿ, ದೇಶ ವಿದೇಶಗಳಲ್ಲಿ ಉನ್ನತವಾದ ಮತ್ತು ಶ್ರೇಷ್ಠವಾದ ಶಿಕ್ಷಣವನ್ನು ಪಡೆದು ಭಾರತದ ಸಂವಿಧಾನ ರಚನೆಯಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸಿ, ಸಾಮಾಜಿಕ ಪರಿವರ್ತನೆಗೂ ಕೂಡ ಕಾರಣಕರ್ತರಾದ ಮಹಾನ್ ವ್ಯಕ್ತಿಯಾಗಿದ್ದಾರೆ.

ಡಾ. ಬಿ.ಆರ್. ಅಂಬೇಡ್ಕರ್‌ರವರು ವಿಶ್ವದ ಎಲ್ಲಾ ಲಿಖಿತ ಮತ್ತು ಅಲಿಖಿತ ಸಂವಿಧಾನಗಳ ಪ್ರತಿಯೊಂದು ಉಪಬಂಧವನ್ನು ಅಧ್ಯಯನ ಮಾಡಿ ಅವುಗಳೆಲ್ಲದರ ಸಾರವನ್ನು ಭಾರತದ ಸಂವಿಧಾನದಲ್ಲಿ ಭಾರತದ ಸಂವಿಧಾನ ರಚನೆಯ ಕರಡು ಸಮಿತಿಯ

ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಮೀಸಲಾತಿ ಸೌಲಭ್ಯದ ವಿಸ್ತರಣೆಗೆ ಡಾ. ಬಿ.ಆರ್. ಅಂಬೇಡ್ಕರ್‌ರವರೆ ಮೂಲ ಕಾರಣ ಕರ್ತರು.

ಈ ಅಧ್ಯಾಯದಲ್ಲಿ ಈ ನಾಲ್ಕು ಮಹಾನ್ ವ್ಯಕ್ತಿಗಳ ಹಿನ್ನೆಲೆ, ಕೃತಿಗಳು, ಸಿದ್ಧಾಂತಗಳು ಮತ್ತು ಸಾಧನೆಗಳನ್ನು ಪ್ರಸ್ತಾಪಿಸಲಾಗಿದೆ.

**ಪಾರಿಭಾಷಿಕ ಪದಕೋಶ**

Liberty - ಸ್ವಾತಂತ್ರ್ಯ

Protestant - ೧೬ನೇ ಶತಮಾನದಲ್ಲಿ, ರೋಮ್‌ನ ಕ್ಯಾಥೋಲಿಕ್ ಚರ್ಚ್‌ಗಳಿಂದ ಹೊರಬಂದು ಪ್ರತ್ಯೇಕವಾದ ಪಂಥವನ್ನು ರಚಿಸಲಾಯಿತು. ಅದೇ ಪ್ರೊಟೆಸ್ಟೆಂಟ್ ಪಂಥ.

Dialect - ಸಂವಾದ ಅಥವಾ ಚರ್ಚೆ

Thesis - ವಾದ

Antithesis - ಪ್ರತಿವಾದ

Synthesis - ಸಂಯೋಜಕವಾದ

Union - ಒಕ್ಕೂಟ

## ಪ್ರಶ್ನೆಗಳು

**I. ಒಂದು ಅಂಕದ ಪ್ರಶ್ನೆಗಳು**

೧. ಜೆ. ಎಸ್. ಮಿಲ್ ಬರೆದ ಒಂದು ಕೃತಿಯನ್ನು ಹೆಸರಿಸಿ?

೨. ಉದಾರವಾದ ಎಂಬ ಪದವನ್ನು ಪ್ರಥಮ ಬಾರಿಗೆ ಯಾವಾಗ ಬಳಸಲಾಯಿತು?

೩. ಲಿಬರ್ ಎಂಬ ಪದ ಯಾವ ಭಾಷೆಯಿಂದ ಬಂದಿದೆ?

೪. ಕಾರ್ಲ್‌ಮಾರ್ಕ್ಸ್ ಹುಟ್ಟಿದ್ದು ಯಾವ ರಾಷ್ಟ್ರದಲ್ಲಿ ?

೫. ಕಾರ್ಲ್‌ಮಾರ್ಕ್ಸ್ ಬರೆದ ಒಂದು ಕೃತಿಯನ್ನು ಹೆಸರಿಸಿ?

೬. ವೈಜ್ಞಾನಿಕ ಸಮಾಜವಾದದ ಪಿತಾಮಹ ಯಾರು?

೭. ಮಹಾತ್ಮ ಗಾಂಧೀಯವರು ಬರೆದ ಒಂದು ಕೃತಿಯನ್ನು ಹೆಸರಿಸಿ?

೮. ಮಾಡು ಇಲ್ಲವೇ ಮಡಿ ಎಂಬ ಘೋಷಣೆ ನೀಡಿದವರು ಯಾರು?

೯. ಸರ್ವೋದಯ ಎಂದರೇನು?

೧೦. ಡಾ. ಬಿ.ಆರ್. ಅಂಬೇಡ್ಕರ್ ರವರು ಬರೆದ ಎರಡು ಕೃತಿಗಳನ್ನು ಹೆಸರಿಸಿ?

೧೧. ಭಾರತ ಸಂವಿಧಾನದ ಕರಡು ಸಮಿತಿಯ ಅಧ್ಯಕ್ಷರಾಗಿದ್ದವರು ಯಾರು?

೧೨. ಅಪರಿಮಿತ ಅಧಿಕ ಮೌಲ್ಯ ಎಂದರೇನು?

೧೩. ಸಂಬಂಧೀ ಅಧಿಕ ಮೌಲ್ಯ ಎಂದರೇನು?

II. ಎರಡು ಅಂಕದ ಪ್ರಶ್ನೆಗಳು

೧. ಉದಾರವಾದದ ಬೆಳವಣಿಗೆಗೆ ಕಾರಣಗಳನ್ನು ತಿಳಿಸಿ.

೨. ಕಾರ್ಲ್‌ಮಾರ್ಕ್ಸ್‌ರ ಶೈಕ್ಷಣಿಕ ಹಿನ್ನೆಲೆಯನ್ನು ತಿಳಿಸಿ.

೩. ವೈಜ್ಞಾನಿಕ ಸಮಾಜವಾದ ಎಂದರೇನು?.

೪. ಕಾರ್ಲ್‌ಮಾರ್ಕ್ಸ್‌ನ ಸಮತಾವಾದವು ಯಾವ ಮೂರು ಮುಖ್ಯ ಅಂಶಗಳಿಂದ ಪ್ರಭಾವಿತವಾಗಿದೆ?

೫. ಐತಿಹಾಸಿಕ ಭೌತಿಕವಾದ ಎಂದರೇನು?

೬. ಅಧಿಕ ಮೌಲ್ಯ ಸಿದ್ಧಾಂತ ಎಂದರೇನು?

೭. ಕಾರ್ಲ್‌ಮಾರ್ಕ್ಸ್‌ರ ವರ್ಗ ಸಿದ್ಧಾಂತವನ್ನು ವಿವರಿಸಿ.

೮. ಕಾರ್ಮಿಕರ ಸರ್ವಾಧಿಕಾರತ್ವ ಎಂದರೇನು?

೯. ಮಾರ್ಕ್ಸ್‌ವಾದದ ಪ್ರಕಾರ ರಾಜ್ಯದ ನಾಶ ಎಂದರೇನು?

೧೦. ಗಾಂಧೀಯ ಸತ್ಯಾಗ್ರಹ ಪರಿಕಲ್ಪನೆಯನ್ನು ವಿವರಿಸಿ.

೧೧. ಅಸಹಕಾರ ಎಂದರೇನು?

೧೨. ಪಿಕೆಟಿಂಗ್ ಎಂದರೇನು?

೧೩. ಕಾನೂನು ಭಂಗ ಚಳುವಳಿಯನ್ನು ವಿವರಿಸಿ.

೧೪. ಹಿಜರತ್ ಎಂದರೇನು?

೧೫. ಉಪವಾಸ ಸತ್ಯಾಗ್ರಹವನ್ನು ವಿವರಿಸಿ.

೧೬. ಮುಷ್ಕರವನ್ನು ವಿವರಿಸಿ.

೧೭. ಕರ ನಿರಾಕರಣೆಯನ್ನು ವಿವರಿಸಿ.

೧೮. ಜಾನ್ ರಸ್ಕಿನ್‌ರವರ 'ಅನ್ ಟು ದಿ ಲಾಸ್ಟ್' ಗ್ರಂಥದಿಂದ ಗಾಂಧೀಜಿಯವರು ಪ್ರಭಾವಿತವಾದ ಮೂರು ಅಂಶಗಳು ಯಾವುವು?

III. ಐದು ಅಂಕದ ಪ್ರಶ್ನೆಗಳು

೧. ಜೆ. ಎಸ್. ಮಿಲ್‌ರವರ ಜೀವನ ಪರಿಚಯವನ್ನು ಸಂಕ್ಷಿಪ್ತವಾಗಿ ವಿವರಿಸಿ.

೨. ಉದಾರವಾದದ ಐತಿಹಾಸಿಕ ಬೆಳವಣಿಗೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೩. ಜೆ.ಎಸ್. ಮಿಲ್‌ರವರ ಅಲ್ಪಸಂಖ್ಯಾತರ ಹಕ್ಕುಗಳನ್ನು ವಿವರಿಸಿ.

೪. ಕಾರ್ಲ್‌ಮಾರ್ಕ್ಸ್‌ರವರ ಜೀವನ ಪರಿಚಯವನ್ನು ಸಂಕ್ಷಿಪ್ತವಾಗಿ ವಿವರಿಸಿ.

೫. ಕಾರ್ಲ್‌ಮಾರ್ಕ್ಸ್‌ರವರ ಕೃತಿಗಳನ್ನು ಹೆಸರಿಸಿ.

೬. ಮಹಾತ್ಮ ಗಾಂಧೀಯವರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೭. ಭಾರತದ ಸಂವಿಧಾನ ರಚನೆಯಲ್ಲಿ ಡಾ. ಬಿ. ಆರ್. ಅಂಬೇಡ್ಕರ್‌ರವರ ಕೊಡುಗೆಯನ್ನು ಚರ್ಚಿಸಿ.

**IV. ಹತ್ತು ಅಂಕದ ಪ್ರಶ್ನೆಗಳು**

೧. ಜೆ. ಎಸ್. ಮಿಲ್‌ರವರ ಉದಾರವಾದವನ್ನು ವಿವರಿಸಿ.

೨. ಮಾರ್ಕ್ಸ್‌ವಾದದ ಮೂಲ ತತ್ವಗಳನ್ನು ಚರ್ಚಿಸಿ.

೩. ಮಹಾತ್ಮ ಗಾಂಧೀಯವರ ಸರ್ವೋದಯ ತತ್ವವನ್ನು ಚರ್ಚಿಸಿ.

೪. ಹಿಂದುಳಿದ ವರ್ಗಗಳ ಸಶಕ್ತೀಕರಣಕ್ಕೆ ಡಾ. ಬಿ.ಆರ್. ಅಂಬೇಡ್ಕರ್‌ರವರ ಕೊಡುಗೆಯನ್ನು ವಿವರಿಸಿ.

**V. ಅಭ್ಯಾಸ / ಚಟುವಟಿಕೆಗಳು**

೧. ಮಹಾತ್ಮ ಗಾಂಧೀಯವರ ತತ್ವಗಳ ಮೇಲೆ ಚರ್ಚಾ ಗೋಷ್ಠಿಗಳನ್ನು ಏರ್ಪಡಿಸಿ.

೨. ಕಾರ್ಲ್‌ಮಾರ್ಕ್ಸ್‌ರ ಸಿದ್ಧಾಂತ ಮತ್ತು ಇಂದಿನ ಕಾರ್ಮಿಕ ವರ್ಗದ ನಡುವೆ ಯಾವ ಸಂಬಂಧವಿದೆ ಎಂಬ ಸ್ಥಳೀಯ ಅವಲೋಕನವನ್ನು ಮಾಡಿರಿ.

೩. ಡಾ. ಬಿ.ಆರ್. ಅಂಬೇಡ್ಕರ್‌ರವರ ಹೋರಾಟದ ಪ್ರತಿಫಲವನ್ನು ಎಲ್ಲರೂ ಅನುಭವಿಸಲು ಸಾಧ್ಯವಿದೆಯಾ ಎಂಬುದನ್ನು ಪಟ್ಟಿಮಾಡಿ.

ಅಧ್ಯಾಯ ೩

# ಸಮಕಾಲೀನ ರಾಜಕೀಯ ವಿದ್ಯಮಾನಗಳು

ಆಧುನಿಕ ಯುಗವು ಪ್ರಜಾಪ್ರಭುತ್ವದ ಯುಗ. ವಿಶ್ವದ ಬಹಳಷ್ಟು ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಜಾರಿಯಲ್ಲಿದೆ. ಇಲ್ಲದೇ ಇರುವ ರಾಜ್ಯಗಳೂ ಸಹಾ ತಮ್ಮ ಸರ್ಕಾರ ಪದ್ಧತಿಯನ್ನು ಪ್ರಜಾಪ್ರಭುತ್ವ ಎಂದು ಕರೆದುಕೊಳ್ಳುತ್ತಿವೆ.

ಪ್ರಜಾಪ್ರಭುತ್ವ ಎಂಬ ಪದವು 'ಡೆಮಾಕ್ರಸಿ' ಎಂಬ ಇಂಗ್ಲಿಷ್ ಪದದ ಕನ್ನಡಾನುವಾದ ವಾಗಿದೆ. ಈ 'ಡೆಮಾಕ್ರಸಿ' ಎಂಬ ಪದವು 'ಡೆಮೋಸ್' (Demos) ಮತ್ತು 'ಕ್ರಾಡಿಯಾ' (Kratha) ಎಂಬೆರಡು ಗ್ರೀಕ್ ಪದಗಳ ಸಂಯೋಗವಾಗಿದೆ. 'ಡೆಮೋಸ್' ಎಂದರೆ 'ಜನತೆ' (People) ಮತ್ತು 'ಕ್ರಾಡಿಯಾ' ಎಂದರೆ 'ಅಧಿಕಾರ' (Power) ಎಂದರೆ 'ಜನತೆಯ ಅಧಿಕಾರ' ಎಂದಾಗುತ್ತದೆ.

ಪ್ರಜಾಪ್ರಭುತ್ವ ಎಂದರೆ ಒಂದು ಬಗೆಯ ಸರ್ಕಾರಪದ್ಧತಿಯಾಗಿದ್ದು, ಇಲ್ಲಿ ಪ್ರಜೆಗಳೇ ಪ್ರಭುಗಳಾಗಿರುತ್ತಾರೆ. ಈ ಸರಕಾರವು ಪ್ರಜೆಗಳೇ, ಪ್ರಜೆಗಳಿಂದ, ಪ್ರಜೆಗಳಿಗೋಸ್ಕರ ನಡೆಯುತ್ತದೆ. ಈ ಬಗೆಯ ಪ್ರಜಾಪ್ರಭುತ್ವ ಸರಕಾರ ಪದ್ಧತಿಯು ಜನರನ್ನು ಪ್ರತಿನಿಧಿಸುತ್ತದೆ. ಮತ್ತು ಜನರಿಗೆ ಜವಾಬ್ದಾರಿಯಾಗಿ ಕಾರ್ಯನಿರ್ವಹಿಸುತ್ತದೆ.

## ಪ್ರಜಾಪ್ರಭುತ್ವದ ವಿಧಗಳು

ಪ್ರಜಾಪ್ರಭುತ್ವವನ್ನು ಪ್ರತ್ಯಕ್ಷ ಅಥವಾ ನೇರ ಪ್ರಜಾಪ್ರಭುತ್ವ ಮತ್ತು ಪರೋಕ್ಷ ಅಥವಾ ಪ್ರತಿನಿಧಿ ಪ್ರಜಾಪ್ರಭುತ್ವ ಎಂದು ಎರಡು ವಿಧಗಳಾಗಿ ವರ್ಗೀಕರಿಸಲಾಗಿದೆ.

೧. ಪ್ರತ್ಯಕ್ಷ ಪ್ರಜಾಪ್ರಭುತ್ವವೆಂದರೆ ಜನರೇ ನೇರವಾಗಿ ಸರ್ಕಾರದ ವ್ಯವಹಾರದಲ್ಲಿ ಭಾಗವಹಿಸುವುದು ಎಂದರ್ಥ. ಈ ಪ್ರತ್ಯಕ್ಷ ಪ್ರಜಾಪ್ರಭುತ್ವ ಸರ್ಕಾರ ಪದ್ಧತಿಯಲ್ಲಿ ವಯಸ್ಕರು, ಸಾರ್ವಜನಿಕ ಸ್ಥಳವೊಂದರಲ್ಲಿ ಸಭೆಸೇರಿ ಕಾನೂನು ರಚನೆ, ಅಯ-ವ್ಯಯ ಪಟ್ಟಿ ಅಂಗೀಕಾರ ಮತ್ತು ಕಾರ್ಯಾಂಗದ ಮುಖ್ಯಸ್ಥರ ನೇರ ಆಯ್ಕೆ ಮಾಡುವರು. ಇದು ಗ್ರೀಕ್ ಮತ್ತು ರೋಮನ್ ನಗರ ರಾಜ್ಯಗಳಲ್ಲಿ ಜಾರಿಯಲ್ಲಿತ್ತು.

೨. ಪರೋಕ್ಷ ಅಥವಾ ಪ್ರತಿನಿಧಿ ಪ್ರಜಾಪ್ರಭುತ್ವ ಎಂದರೆ ವಯಸ್ಕ ಮತದಾರರು ನಿಯತಕಾಲಿಕವಾಗಿ ನಡೆಯುವ ಚುನಾವಣೆಯ ಮೂಲಕ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಹೀಗೆ ಆಯ್ಕೆಯಾದವರು ಸರ್ಕಾರದ ದೈನಂದಿನ ವ್ಯವಹಾರಗಳನ್ನು ನಡೆಸುವವ ರಾಗಿರುತ್ತಾರೆ. ಸಾರ್ಟೋರಿಯವರ ಪ್ರಕಾರ ಪ್ರಜಾಪ್ರಭುತ್ವದಲ್ಲಿ ನಾಲ್ಕು ವಿಧಗಳಿವೆ.

ಅವುಗಳೆಂದರೆ ೧. ಸಾಮಾಜಿಕ ಪ್ರಜಾಪ್ರಭುತ್ವ ೨. ಆರ್ಥಿಕ ಪ್ರಜಾಪ್ರಭುತ್ವ ೩. ಕೈಗಾರಿಕಾ ಪ್ರಜಾಪ್ರಭುತ್ವ ೪. ಪ್ರಜೆಗಳ ಪ್ರಜಾಪ್ರಭುತ್ವ.

### ೩.೧ ಉದಾರತಾವಾದಿ ಪ್ರಜಾಪ್ರಭುತ್ವದ ಪ್ರಸರಣ

ಪ್ರಜಾಪ್ರಭುತ್ವದ ಬಗೆಗಿನ ಉದಾರತಾ ಸಿದ್ಧಾಂತದ ಮೂಲವನ್ನು ಗ್ರೀಕ್ ತತ್ವಜ್ಞಾನಿಗಳ ಬರಹಗಳಲ್ಲಿ ಕಾಣಬಹುದು. ಅನಂತರ ಇದರ ಸ್ಪಷ್ಟ ಹಾಗೂ ನಿರ್ದಿಷ್ಟ ತತ್ವಗಳು ಹದಿನೇಳನೇ ಶತಮಾನದಲ್ಲಿ ಪ್ರಚಾರಕ್ಕೆ ಬಂದವು. ಹಾಬ್ಸ್, ಲಾಕ್, ರೂಸೋ, ಭೆಂಥ್ಯಾಂ, ಜೆ.ಎಸ್. ಮಿಲ್‌ರವರ ಬರಹಗಳಲ್ಲಿ ಉದಾರತಾ ಸಿದ್ಧಾಂತದ ಪ್ರಮುಖ ತತ್ವಗಳನ್ನು ಗುರುತಿಸಬಹುದು. ಉದಾರತಾ ಪ್ರಜಾಪ್ರಭುತ್ವವು ಪ್ರಜೆಗಳು ರಾಜಕೀಯ ಚಟುವಟಿಕೆಗಳಲ್ಲಿ ಹೆಚ್ಚು ಸಕ್ರಿಯವಾಗಿ ಭಾಗವಹಿಸಬೇಕೆಂದು ಬಯಸುತ್ತದೆ. ಸಾರ್ವತ್ರಿಕ ಮತಾಧಿಕಾರ, ಪ್ರತಿನಿಧಿ ಸರ್ಕಾರದ ಸ್ಥಾಪನೆ, ಕಾಲಕಾಲಕ್ಕೆ ನಡೆಯುವ ಮುಕ್ತ ಚುನಾವಣೆ, ಮೂಲಭೂತ ಹಕ್ಕುಗಳ ನೀಡಿಕೆ, ಸ್ವತಂತ್ರ ನ್ಯಾಯಾಂಗ, ಶಾಸನ ನಿಯಮ ಮುಂತಾದವುಗಳು ರಾಜ್ಯದಲ್ಲಿರಬೇಕೆಂದು ತಿಳಿಸುತ್ತದೆ. ೧೬೫೧ರಲ್ಲಿ ಪ್ರಕಟನೆಗೊಂಡ ಹಾಬ್ಸ್‌ನ 'ಲೆವಿಯಾಥನ್' ಗ್ರಂಥದಲ್ಲಿ ಪ್ರಥಮ ಬಾರಿಗೆ ಸರ್ಕಾರವನ್ನು ಪ್ರಜೆಗಳೇ ಒಂದು ಒಪ್ಪಂದದಿಂದ ರಚಿಸಿಕೊಂಡರೆಂಬ ಪ್ರಜಾಸತ್ತಾತ್ಮಕ ತತ್ವವನ್ನು ಪ್ರತಿಪಾದನೆ ಮಾಡಿರುವುದು ಕಂಡುಬಂದಿದೆ. ೧೬೯೦ರಲ್ಲಿ ಪ್ರಕಟಗೊಂಡ ಜಾನ್ ಲಾಕ್‌ನ 'ನಾಗರೀಕ ಸರ್ಕಾರದ ಎರಡು ಒಪ್ಪಂದಗಳು' ಗ್ರಂಥದಲ್ಲಿ ಪ್ರಜೆಗಳು ಹೊಂದಿದ್ದ ಜೀವ, ಸ್ವಾತಂತ್ರ್ಯ ಮತ್ತು ಆಸ್ತಿಯ ಹಕ್ಕುಗಳನ್ನು ನೈಸರ್ಗಿಕ ಹಕ್ಕುಗಳೆಂದು ಪ್ರಸ್ತಾಪಿಸಿ, ಸಂವಿಧಾನಾತ್ಮಕ ಸರ್ಕಾರದ ವಿವರಣೆ ನೀಡುವ ಮೂಲಕ ವಿವರಿಸಲಾಗಿದೆ. ೧೭೬೨ರಲ್ಲಿ ಪ್ರಕಟಿಸಿದ ತನ್ನ "ಸಾಮಾಜಿಕ ಒಪ್ಪಂದ" ಪುಸ್ತಕದಲ್ಲಿ ಜೆ.ಜೆ. ರೂಸೋ ಮಾನವರ ನೈಸರ್ಗಿಕ ಸಮಾನತೆ, ಜನತೆಯ ಸಮ್ಮತಿಯ ಮೇಲೆ ನಿಂತಿರುವ ರಾಜ್ಯ, ವ್ಯಕ್ತಿ ಹಾಗೂ ಸಮುದಾಯದ ಸದಸ್ಯರು ತಮ್ಮ ವ್ಯವಹಾರಗಳಲ್ಲಿ ನಿರ್ಧಾರ ಕೈಗೊಳ್ಳುವ ಅವರ್ಗೀಯ ಹಕ್ಕುಗಳ ಬಗ್ಗೆ ವಿವರಣೆ ನೀಡಿರುತ್ತಾನೆ. ಈ ಉದಾರತಾ ಪ್ರಜಾಪ್ರಭುತ್ವ ವಿಚಾರಗಳು ೧೭೮೯ರಲ್ಲಿ ಫ್ರಾನ್ಸಿನ ಮಾನವ ಹಕ್ಕುಗಳ ಘೋಷಣೆ ಹಾಗೂ ಅಮೆರಿಕಾದ ಸ್ವಾತಂತ್ರ್ಯ ಘೋಷಣೆ ಮೇಲೆ ಹೆಚ್ಚು ಪ್ರಭಾವ ಬೀರಿವೆ. ಸ್ವಾತಂತ್ರ್ಯ, ಸಮಾನತೆ ಹಾಗೂ ಜನತಾ ಪರಮಾಧಿಕಾರದ ಕಲ್ಪನೆಯೂ ರೂಸೋ ಪ್ರತಿಪಾದಿಸಿರುವ ಮುಖ್ಯ ವಿಚಾರಧಾರೆಗಳಾಗಿವೆ. ಇವುಗಳೇ ಪ್ರಜಾಪ್ರಭುತ್ವದ ಉದಾರತಾ ಸಿದ್ಧಾಂತದ ಸಾರವೆನಿಸಿವೆ.

ಜೆ.ಎಸ್.ಮಿಲ್ ಮತ್ತು ಬೆಂಥ್ಯಾಂರವರು ಸಹ ಪ್ರಜಾಪ್ರಭುತ್ವದ ಉದಾರತಾ ಸಿದ್ಧಾಂತಕ್ಕೆ ಸಾಕಷ್ಟು ಕೊಡುಗೆ ನೀಡಿರುತ್ತಾರೆ. ವಯಸ್ಕರ ಮತಾಧಿಕಾರ, ಪ್ರತಿನಿಧಿ ಸರ್ಕಾರ, ಪತ್ರಿಕಾ ಸ್ವಾತಂತ್ರ್ಯ, ಕಾಲಕಾಲಕ್ಕೆ ನಡೆಯುವ ಚುನಾವಣೆಗಳ ಬಗ್ಗೆ ಸುದೀರ್ಘ ವಿವರಣೆಯನ್ನು ನೀಡಿರುತ್ತಾರೆ. ಬೆಂಥ್ಯಾಂರವರ ಅತ್ಯುತ್ತಮ ಕೊಡಗೆಯೆಂದರೆ 'ಬಹುಜನರ ಬಹುಸುಖ'ದ ತತ್ವವೇ ಆಗಿರುತ್ತದೆ. ಜೆ.ಎಸ್.ಮಿಲ್‌ರವರು ಈ ಉಪಯುಕ್ತತಾ ತತ್ವಕ್ಕೆ ನೈತಿಕ ಅರ್ಥ ನೀಡಿ ಸುಖಕ್ಕಿಂತ ಹೆಚ್ಚಾಗಿ ನೈತಿಕ ಗುರಿಯ ಕಡೆ ಒಲವು ತೋರಿಸಿದ್ದಾರೆ. ಉದಾರತಾ

ಪ್ರಜಾಪ್ರಭುತ್ವದ ತತ್ವದ ಪ್ರಚಾರದ ಜತೆಗೆ ಮಿಲ್‌ರವರು ಪ್ರಜಾಸತ್ತಾತ್ಮಕ ವ್ಯವಸ್ಥೆಯು ಹೆಚ್ಚು ಪ್ರಭಾವಶಾಲಿಯಾಗುವಂತೆ ಸಾಂಸ್ಥಿಕ ಸುಧಾರಣೆಗಳ ಬಗ್ಗೆ ವಿವರಣೆ ನೀಡಿದ್ದಾರೆ.

ಪ್ರಜಾಪ್ರಭುತ್ವ ಉದಾರತಾ ಸಿದ್ಧಾಂತಕ್ಕೆ ಅಪ್ರತಿಮ ಕೊಡುಗೆ ನೀಡಿರುವ ಮತ್ತೊಬ್ಬ ಚಿಂತಕರೆಂದರೆ ಟಿ.ಎಚ್. ಗ್ರೀನ್. ವ್ಯಕ್ತಿ ಸ್ವಾತಂತ್ರ್ಯ ಹಾಗೂ ಜವಾಬ್ದಾರಿಗೆ ಅಗತ್ಯಾಂಶವೆಂಬಂತೆ ಸಮಷ್ಟಿ ಕಲ್ಯಾಣಕ್ಕೆ ಇವರು ಹೆಚ್ಚು ಪ್ರಾಮುಖ್ಯತೆ ನೀಡಿದ್ದಾರೆ. ಗ್ರೀನ್ ನಂತರ ಹಾಬ್‌ಹೌಸ್, ಲಿಂಡ್ಸೆ, ಬಾರ್ಕರ್, ಕೋಲ್, ವಿಲ್ಸನ್, ಲಾಸ್ಕಿ, ಮೆಕೈವರ್ ಮತ್ತಿತರರು ಈ ಸಿದ್ಧಾಂತಕ್ಕೆ ತಮ್ಮ ಬೆಂಬಲವನ್ನು ಸೂಚಿಸಿರುತ್ತಾರೆ.

**ಅ. ನಿರಂಕುಶ ಪ್ರಭುತ್ವ ಮತ್ತು ಸರ್ವಾಧಿಕಾರಿ ಮಾದರಿಯ ಇತರೆ ಸರ್ಕಾರಗಳ ಪತನ**

ಪ್ರಜಾಪ್ರಭುತ್ವದ ಮೂಲವನ್ನು ಪ್ರಾಚೀನ ಕಾಲದ ಗ್ರೀಕ್ ಮತ್ತು ರೋಮನ್ ಚಕ್ರಾಧಿಪತ್ಯಗಳಲ್ಲಿ ಕಾಣಬಹುದು. ಈ ನಗರ ರಾಜ್ಯಗಳಲ್ಲಿ ಪ್ರಜೆಗಳು ಅಧಿಕಾರಗಳ ಮೇಲೆ ಪ್ರಭುತ್ವವನ್ನು ಸಾಧಿಸಿದ್ದರು ಮತ್ತು ಸರ್ಕಾರದ ಆಳ್ವಿಕೆಯಲ್ಲಿ ಜನರು ಪ್ರತ್ಯಕ್ಷವಾಗಿ ಭಾಗವಹಿಸುತ್ತಿದ್ದರು. ಇದನ್ನೇ 'ರಿಪಬ್ಲಿಕ್' ಎಂದು ರಾಜಕೀಯ ಚಿಂತಕರು ವರ್ಣಿಸಿರುವುದು.

ಆದರೆ ಮಧ್ಯಮ ಯುಗದಲ್ಲಿ (ಕ್ರಿ.ಶ. ೪೭೦-೧೫೦೦) ಜಮೀನ್ದಾರಿ ಅಥವಾ ಊಳಿಗಮಾನ್ಯ ಪದ್ಧತಿ ಸರ್ಕಾರ ಅಸ್ತಿತ್ವಕ್ಕೆ ಬಂದು ಪ್ರಜಾಪ್ರಭುತ್ವ ಸರ್ಕಾರಕ್ಕೆ ತೊಡಕನ್ನುಂಟು ಮಾಡಿತು.

ಪ್ರಜಾಪ್ರಭುತ್ವ ತತ್ವವು ಅತ್ಯಂತ ಯಶಸ್ವಿ ಘಟ್ಟ ತಲುಪಿದ್ದು ಕ್ರಿ.ಶ. ೧೭ನೇ ಶತಮಾನದ ನಂತರ. ೧೭ನೇ ಶತಮಾನದ ಇಂಗ್ಲೆಂಡಿನ ರಾಣಿ ಎಲಿಜಬೆತ್ ಕಾಲದಲ್ಲಿ ನಡೆದ ಕ್ರೈಸ್ತ ಮತ ಸುಧಾರಣೆಯ ಚಳುವಳಿ ಕಾಲ, ೧೬೮೮ ರಲ್ಲಿ ನಡೆದ ಇಂಗ್ಲೆಂಡಿನ ಗ್ಲೋರಿಯಸ್ ರೆವಲ್ಯೂಷನ್, ೧೭೭೬ರ ಅಮೇರಿಕಾದ ಸ್ವಾತಂತ್ರ್ಯ ಕ್ರಾಂತಿ, ೧೭೮೯ರ ಫ್ರಾನ್ಸಿನ ಕ್ರಾಂತಿ ಮತ್ತು ಆ ಕಾಲದ ಅನೇಕ ತತ್ವಜ್ಞಾನಿಗಳು, ಲೇಖಕರು, ರಾಜನೀತಿಜ್ಞರ ಭಾಷಣ, ಪ್ರಬಂಧ, ಸಂವಾದ ಇವೇ ಮೊದಲಾದ ಅಂಶಗಳು ನಿರಂಕುಶ ಪ್ರಭುತ್ವ ಮತ್ತು ಇತರೆಲ್ಲಾ ಸರ್ವಾಧಿಕಾರಿ ಸರ್ಕಾರಿ ಮಾದರಿಗಳು ಕಣ್ಮರೆಯಾಗಿ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬರುವುದಕ್ಕೆ ಕಾರಣವಾಯಿತು. ಪ್ರಥಮ ಜಾಗತಿಕ ಯುದ್ಧದ ತರುವಾಯ ಪ್ರಜಾಪ್ರಭುತ್ವವು ಸಮತಾವಾದ, ಫ್ಯಾಸಿಸಂ, ನಾಜಿಸಂ ಮತ್ತಿತ್ತರ ಸರ್ವಾಧಿಕಾರದ ಸ್ಥಾನದಲ್ಲಿ ಅಸ್ತಿತ್ವಕ್ಕೆ ಬಂದಿದೆ.

**ಆ. ಎರಡನೆಯ ಮಹಾಯುದ್ಧದ ತರುವಾಯ ಪ್ರಜಾಪ್ರಭುತ್ವವಾದಿ ರಾಜ್ಯಗಳ ಸಂಖ್ಯೆಯಲ್ಲಿ ಏರಿಕೆ**

೨೦ನೇ ಶತಮಾನವನ್ನು 'ಪ್ರಜಾಪ್ರಭುತ್ವಯುಗ' ಎಂದು ಕರೆಯಲಾಗಿದೆ. ಅದಕ್ಕೆ ಪೂರಕವಾಗಿ ಎರಡನೇ ಮಹಾಯುದ್ಧದ ನಂತರ ಏಷ್ಯಾ ಮತ್ತು ಆಫ್ರಿಕಾದ ಹಲವಾರು ರಾಷ್ಟ್ರಗಳ ಬ್ರಿಟೀಷರ ವಸಾಹತುಶಾಹಿ ಹಿಡಿತದಿಂದ ಹೊರ ಬಂದು ಸ್ವತಂತ್ರ ರಾಷ್ಟ್ರ

ಗಳಾಗುವುದರ ಜೊತೆಯಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಳವಡಿಸಿಕೊಂಡವು. ಭಾರತವೂ ಸಹ ೧೯೪೭ರಲ್ಲಿ ಸ್ವತಂತ್ರಗೊಂಡು ೧೯೫೦ರಲ್ಲಿ ಅದೊಂದು ಸ್ವತಂತ್ರ, ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ಹೊರಹೊಮ್ಮಿತು. ಪಾಕಿಸ್ತಾನದಲ್ಲಿಯೂ ಸಹಾ ನಿರ್ಬಂಧಿತ ಪ್ರಜಾಪ್ರಭುತ್ವದ ಹೆಸರಿನಲ್ಲಿ ಅಯೂಬ್‌ಖಾನ್‌ರ ಮಿಲಿಟರಿ ಸರ್ವಾಧಿಕಾರ ಹತ್ತು ವರ್ಷಗಳ ಕಾಲ ಜಾರಿಯಲ್ಲಿತ್ತು. ಇಂಡೋನೇಷಿಯಾದಲ್ಲಿ ನಿರ್ದೇಶಿತ ಪ್ರಜಾ ಪ್ರಭುತ್ವದ ಹೆಸರಿನಲ್ಲಿ ಅಧ್ಯಕ್ಷ ಸುಕಾರ್ನೋರವರು ತಮ್ಮ ಸರ್ವಾಧಿಕಾರವನ್ನು ನಡೆಸಿದರು.

**೩. ಪಾಲುದಾರ ಪ್ರಜಾಪ್ರಭುತ್ವದೆಡೆಗೆ ನಡೆ - ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ / ಪಂಚಾಯತ್‌ರಾಜ್ ವ್ಯವಸ್ಥೆ**

ಅಧ್ಯಕ್ಷೀಯ ಮತ್ತು ಸಂಸದೀಯ ಸರ್ಕಾರ ಪದ್ಧತಿಯನ್ನು ಅಳವಡಿಸಿಕೊಂಡಿರುವ ಸರ್ಕಾರಗಳಲ್ಲಿ ಕೇಂದ್ರ ಮತ್ತು ರಾಜ್ಯಗಳ ನಡುವೆ ಸಂವಿಧಾನಾತ್ಮಕ ಅಧಿಕಾರ ವಿಭಜನೆ ಮಾಡಲಾಗಿದೆ. ಕೇಂದ್ರ ಸರ್ಕಾರ ಕೇಂದ್ರ ಪಟ್ಟಿಯಲ್ಲಿ ನಮೂದಿಸಿರುವ ವಿಷಯಗಳಲ್ಲೂ ರಾಜ್ಯ ಸರ್ಕಾರ ರಾಜ್ಯ ಪಟ್ಟಿಯಲ್ಲಿ ನಮೂದಿಸಿರುವ ವಿಷಯಗಳ ಮೇಲೆ ಶಾಸನ ರಚಿಸಿ ಕಾರ್ಯಗತಗೊಳಿಸುವ ಅಧಿಕಾರ ಪಡೆದಿವೆ, ಸಾಮಾನ್ಯ ಸಂದರ್ಭದಲ್ಲಿ ಒಂದು ಮತ್ತೊಂದರ ಅಧಿಕಾರದಲ್ಲಿ ಹಸ್ತಕ್ಷೇಪ ಮಾಡುವಂತಿಲ್ಲ, ವಿಶೇಷ ಸಂದರ್ಭಗಳಲ್ಲಿ ಮಾತ್ರ ಕೇಂದ್ರ ಸರ್ಕಾರ ರಾಜ್ಯಪಟ್ಟಿಯ ವಿಷಯಗಳಲ್ಲಿ ಹಸ್ತಕ್ಷೇಪ ಮಾಡಬಹುದು. ಹೀಗೆ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಮತ್ತು ಭಾರತದಲ್ಲಿ ಪಾಲುದಾರಿಕೆ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲಾಗಿದೆ. ಹಾಗೇಯೇ ಸ್ಥಳೀಯ ಸರ್ಕಾರಗಳ ರಚನೆ ಮೂಲಕ ಪಾಲುದಾರಿಕೆ ಪ್ರಜಾಪ್ರಭುತ್ವವನ್ನು ಸ್ಥಳೀಯ ಮಟ್ಟಕ್ಕೂ ವಿಸ್ತರಿಸಲಾಗಿದೆ.

ಆಧುನಿಕ ಸರ್ಕಾರ ಪದ್ಧತಿಗಳಲ್ಲಿ ಸ್ಥಳೀಯ ಸರ್ಕಾರಗಳು ಮುಖ್ಯ ಸ್ಥಾನವನ್ನು ಪಡೆದು ಪ್ರಜೆಗಳ ಸ್ವಾತಂತ್ರ್ಯದ ಸಂಕೇತವಾಗಿವೆ. ಅಮೇರಿಕಾ ಸಂಯುಕ್ತ ಸಂಸ್ಥಾನ, ಫ್ರಾನ್ಸ್, ಬ್ರಿಟನ್, ಭಾರತ ಮುಂತಾದ ದೇಶಗಳಲ್ಲಿ ಇವುಗಳನ್ನು ರಚಿಸಲಾಗಿದೆ. ಬ್ರಿಟನ್ನಿನಲ್ಲಿ 'ಲೋಕಲ್ ಅಥಾರಿಟೀಸ್' ಎಂದು ಕರೆದರೆ, ಭಾರತದಲ್ಲಿ "ಸ್ಥಳೀಯ ಸ್ವಯಂ ಸರ್ಕಾರಗಳು" ಎಂದು ಕರೆಯಲಾಗಿದೆ. ಒಂದು ನಿರ್ದಿಷ್ಟ ಪ್ರದೇಶದ ಜನರಿಂದ ಆಯ್ಕೆಯಾದ ಪ್ರತಿನಿಧಿಗಳು ಆ ಪ್ರದೇಶದಲ್ಲಿ ನಡೆಸುವ ಸರ್ಕಾರವೇ ಸ್ಥಳೀಯ ಸರ್ಕಾರವಾಗಿದೆ.

ಭಾರತದಲ್ಲಿ ಸ್ಥಳೀಯ ಸರ್ಕಾರಗಳು ಹಲವಾರು ವರ್ಷಗಳಿಂದ ಬೆಳೆದುಬಂದಿವೆ. ಬ್ರಿಟೀಷರ ಆಡಳಿತ ಕಾಲದಲ್ಲಿ ಮದ್ರಾಸಿನ ಮುನಿಸಿಪಲ್ ಕಾರ್ಪೊರೇಷನ್ ೧೬೮೭ ರಚಿತಗೊಂಡಿತು. ೧೭೨೬ ರಲ್ಲಿ ಮುಂಬೈ ಮತ್ತು ಕೋಲ್ಕತ್ತ ಕಾರ್ಪೊರೇಷನ್‌ಗಳು ಅಸ್ತಿತ್ವಕ್ಕೆ ಬಂದವು. ೧೮೮೨ ರಲ್ಲಿ ಸ್ಥಳೀಯ ಸರ್ಕಾರಗಳ ಬೆಳವಣಿಗೆಗೆ ಸರ್ಕಾರ ಒಂದು ಆಜ್ಞೆಯನ್ನು

ಹೊರಡಿಸಿತು. ರಾಯಲ್ ಕಮಿಷನ್ ಕೂಡ ೧೯೦೭ರಲ್ಲಿ ಸ್ಥಳೀಯ ಸರ್ಕಾರಗಳ ಅಭಿವೃದ್ಧಿಗೆ ತನ್ನ ಶಿಫಾರಸು ಮಾಡಿತ್ತು. ೧೯೩೩ರಲ್ಲಿ ಮೈಸೂರು ಮತ್ತು ಬೆಂಗಳೂರಿನಲ್ಲಿ ಚುನಾಯಿತ ಮುನಿಸಿಪಲ್ ಸಂಸ್ಥೆಗಳನ್ನು ರಚಿಸಿತು.

ಮಹಾತ್ಮ ಗಾಂಧೀಯವರು ಗ್ರಾಮಗಳ ಅಭ್ಯುದಯಕ್ಕೆ "ಗ್ರಾಮ ಸ್ವರಾಜ್ಯ"ವನ್ನು ಸ್ಥಾಪಿಸಲು ಆಗ್ರಹಪಡಿಸಿದರು. ಇವರ ಆಸೆಗೆ ಅನುಸಾರ ಸಂವಿಧಾನದ ನಾಲ್ಕನೇ ಭಾಗದಲ್ಲಿ ಗ್ರಾಮ ಪಂಚಾಯಿತಗಳ ಸ್ಥಾಪನೆಗೆ ಅವಕಾಶ ಕಲ್ಪಿಸಿರುವುದು ಗಮನಾರ್ಹವಾಗಿದೆ. ಗ್ರಾಮೀಣ ಪ್ರಗತಿಯನ್ನು ಸಮರ್ಪಕವಾಗಿ ಸಾಧಿಸಲು "ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ" ಅಥವಾ "ಪಂಚಾಯತ್ ರಾಜ್" ಪದ್ಧತಿಯನ್ನು ಮತ್ತು ಈ ಸ್ಥಳೀಯ ಸರ್ಕಾರದಲ್ಲಿ ೩ ಹಂತದ ವ್ಯವಸ್ಥೆಯನ್ನು ೧೯೫೭ರಲ್ಲಿ ರಚನೆಯಾದ ಬಲವಂತರಾಯ್ ಮೆಹತ್ ಸಮಿತಿ ಶಿಫಾರಸು ಮಾಡಿತು. ಈ ಶಿಫಾರಸಿನ ಮೇರೆಗೆ ಪ್ರಜಾಪ್ರಭುತ್ವ ವಿಕೇಂದ್ರೀಕರಣವನ್ನು ಪ್ರಪ್ರಥಮ ಬಾರಿಗೆ ರಾಜಸ್ಥಾನ ಮತ್ತು ಆಂಧ್ರಪ್ರದೇಶಗಳು ಅಳವಡಿಸಿಕೊಂಡವು. ಅನಂತರ ೧೯೬೩ರ ಕೊನೆಗೆ ಇತರೇ ಬಹುತೇಕ ರಾಜ್ಯಗಳು ಈ ವ್ಯವಸ್ಥೆಯನ್ನು ಜಾರಿಗೆ ತಂದವು. ಆದರೆ ಕೆಲವು ರಾಜ್ಯಗಳು ಒಂದೇ ಹಂತದ, ಕೆಲವು ರಾಜ್ಯಗಳು ಎರಡು ಹಂತದ ಹಾಗೂ ಇನ್ನೂ ಕೆಲವು ರಾಜ್ಯಗಳು ಮೂರು ಹಂತದ ವ್ಯವಸ್ಥೆಯನ್ನು ತಮ್ಮ ತಮ್ಮ ಅನುಕೂಲಕ್ಕನುಗುಣವಾಗಿ ಅಳವಡಿಸಿಕೊಂಡವು.

೧೯೭೭ರಲ್ಲಿ ಅಧಿಕಾರಕ್ಕೆ ಬಂದ ಜನತಾ ಸರ್ಕಾರ ಪಂಚಾಯತ್ ರಾಜ್ ವ್ಯವಸ್ಥೆಗೆ ಹೊಸ ರೂಪ ಕೊಡಲು ಅಶೋಕ ಮೆಹ್ತಾರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿ ೧೯೭೮ರಲ್ಲಿ ತನ್ನ ಶಿಫಾರಸಿನ ವರದಿಯನ್ನು ಸಲ್ಲಿಸಿತು. ಇದರ ಶಿಫಾರಸಿನಲ್ಲಿ ಮೊದಲಿದ್ದ ಮೂರು ಹಂತದ ವ್ಯವಸ್ಥೆಗೆ ಬದಲಾಗಿ ಎರಡು ಹಂತದ ವ್ಯವಸ್ಥೆಯನ್ನು (ಮಂಡಲ ಪಂಚಾಯ್ತಿ ಮತ್ತು ಜಿಲ್ಲಾ ಪರಿಷತ್ತು) ಶಿಫಾರಸು ಮಾಡಿತು. ಆದರೆ ಅಂತಿಮವಾಗಿ ಗ್ರಾಮ ಸಮಿತಿಯನ್ನು ಉಳಿಸಿಕೊಂಡಿತು.

೧೯೯೨ರಲ್ಲಿ ೭೩ ಮತ್ತು ೭೪ನೇ ತಿದ್ದುಪಡಿ ಮಸೂದೆಗಳನ್ನು ಮಂಡಿಸಲಾಯಿತು. ಭಾರತ ಸಂವಿಧಾನಕ್ಕೆ ೭೩ನೇ ತಿದ್ದುಪಡಿ ತರುವ ಮೂಲಕ ಪಂಚಾಯಿತಿ ರಾಜ್ಯವ್ಯವಸ್ಥೆಗೆ ಸಂವಿಧಾನಾತ್ಮಕ ಸ್ಥಾನಮಾನವನ್ನು ನೀಡಲಾಯಿತು. ಪಂಚಾಯ್ತಿ ರಾಜ್ಯಕಾಯ್ದೆ ೧೯೯೩, ಮಾರ್ಚ್ ೨೩, ೧೯೯೪ರಂದು ಜಾರಿಗೆ ಬಂದಿತು. ಈ ತಿದ್ದುಪಡಿಯ ಪ್ರಕಾರ ೩ ಹಂತದ ಪಂಚಾಯಿತಿ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಅವುಗಳೆಂದರೆ ೧. ಗ್ರಾಮ, ೨. ತಾಲ್ಲೂಕು, ೩. ಜಿಲ್ಲಾಮಟ್ಟದ ಪಂಚಾಯಿತಿ.

೧೯೯೨ರಲ್ಲಿ ಸಂವಿಧಾನಕ್ಕೆ ೭೪ನೇ ತಿದ್ದುಪಡಿ ತರುವ ಮೂಲಕ ನಗರ ಸ್ವಯಂ ಆಡಳಿತ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಸ್ಥಾನಮಾನ ನೀಡಲಾಯಿತು. ೭೪ನೇ ತಿದ್ದುಪಡಿ ಕಾಯ್ದೆಯ ೨೪೩ ವಿಧಿಯ ಪ್ರಕಾರ ಮುನಿಸಿಪಾಲಿಟಿಗಳ ಅರ್ಥವನ್ನು ತಿಳಿಸುತ್ತದೆ. ೨೪೩ ಕ್ಯೂ ವಿಧಿಯ ಪ್ರಕಾರ ೧. ನಗರ ಪಂಚಾಯಿತಿ, ೨. ಮುನ್ಸಿಪಲ್ ಕೌನ್ಸಿಲ್, ೩. ನಗರ ಸಭೆ ಎಂದು ರಚಿಸಬೇಕು.

ಹೀಗೆ ೭೩ ಮತ್ತು ೭೪ನೇ ಸಂವಿಧಾನ ತಿದ್ದುಪಡಿಯ ಮೂಲಕ ಕ್ರಮವಾಗಿ ಗ್ರಾಮೀಣ ಮತ್ತು ನಗರ ಸ್ಥಳೀಯ ಸರ್ಕಾರಗಳಿಗೆ ಅಧಿಕಾರವನ್ನು ನೀಡಿ ಪ್ರಜಾಸತ್ತಾತ್ಮಕ ಅಧಿಕಾರ ವಿಕೇಂದ್ರಿಕರಣಕ್ಕೆ ಒತ್ತನ್ನು ನೀಡಲಾಗಿದೆ.

**ಈ. ಮಾನವ ಹಕ್ಕುಗಳ ಮಹತ್ವ - ಮಾನವ ಹಕ್ಕುಗಳ ಜಾಗತಿಕ ಘೋಷಣೆ**

೧೯೪೮ರ ಡಿಸೆಂಬರ್ ೧೦ ರಂದು ವಿಶ್ವಸಂಸ್ಥೆಯ ಸಾಮಾನ್ಯ ಸಭೆ 'ಮಾನವ ಹಕ್ಕುಗಳ ಜಾಗತಿಕ ಘೋಷಣೆ'ಯೊಂದನ್ನು ಯಾವ ವಿರೋಧವೂ ಇಲ್ಲದೇ ಅಂಗೀಕರಿಸಿತು. ಪ್ರತಿ ವರ್ಷ ಡಿಸೆಂಬರ್ ೧೦ನ್ನು ಮಾನವ ಹಕ್ಕುಗಳ ದಿನ ಎಂದು ವಿಶ್ವದಾದ್ಯಂತ ಆಚರಿಸಬೇಕು. ವಿಶ್ವದ ಜನರಿಗೆಲ್ಲಾ ಮಾನವ ಹಕ್ಕುಗಳ ಬಗ್ಗೆ ತಿಳುವಳಿಕೆ ನೀಡಬೇಕು ಎಂದು ೧೯೫೦ರಲ್ಲಿ ವಿಶ್ವಸಂಸ್ಥೆ ಕರೆ ನೀಡಿತು. ಅಂದಿನಿಂದ ಡಿಸೆಂಬರ್ ೧೦ನ್ನು ಮಾನವ ಹಕ್ಕುಗಳ ದಿನ ಎಂದು ಆಚರಿಸಲಾಗುತ್ತಿದೆ.

ಮಾನವ ಹಕ್ಕುಗಳೆಂದರೆ, ಯಾವ ರಾಜನೇ ಆಗಲಿ, ಯಾವ ಸರ್ವಾಧಿಕಾರಿಯೇ ಆಗಲಿ, ಮಾನವನಿಂದ ಕಿತ್ತುಕೊಳ್ಳಲಾಗದಂತಹ ಹಕ್ಕುಗಳೂ ಕೆಲವಿವೆ ಎಂಬ ಕಲ್ಪನೆ ಮಾನವ ಸಂಸ್ಕೃತಿಯ ಆದಿಕಾಲದಿಂದಲೂ ಮೂಡಿ ಬಂದಿದೆ. ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲೂ ಈ ಹಕ್ಕುಗಳನ್ನು ಪ್ರಸ್ತಾಪಿಸಲಾಗಿತ್ತು. ಮಾನವ ತಾನೇ ಬೇಡವೆಂದರೂ ಕೂಡ ಆತ ಈ ಹಕ್ಕುಗಳನ್ನು ಬಿಡಲಾಗದು, ಇಂತಹ ಹಕ್ಕುಗಳನ್ನೆ ಮಾನವ ಹಕ್ಕುಗಳು ಎಂದು ಕರೆಯುತ್ತಾರೆ.

ಎರಡನೆ ಮಹಾಯುದ್ಧದ ನಂತರ ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸುವ ಸಲುವಾಗಿ ರಚಿತವಾದ ವಿಶ್ವಸಂಸ್ಥೆ ತನ್ನ ಚಾರ್ಟರ್(Charter)ನಲ್ಲಿ "ವಿಶ್ವಸಂಸ್ಥೆಯ ಜನತೆಯಾದ ನಾವು, ಮಾನವನ ಮೂಲಭೂತ ಹಕ್ಕುಗಳ ಬಗ್ಗೆ, ನಮಗಿರುವ ವಿಶ್ವಾಸವನ್ನು ಪುನಃ ಒತ್ತಿ ಹೇಳಲು ನಿರ್ಧರಿಸಿದ್ದೇವೆ" ಎಂದು ಹೇಳಿತು. ಅದೇ ರೀತಿ ಚಾರ್ಟರ್‌ನ ಪ್ರಕರಣ ೫೫ರಲ್ಲಿ "ವಿಶ್ವಸಂಸ್ಥೆಯ ಜನಾಂಗ, ಲಿಂಗ, ಭಾಷೆ ಅಥವಾ ಧರ್ಮಗಳನ್ನಾಧರಿಸಿದ ಯಾವುದೇ ಭೇದವನ್ನು ಮಾಡದೇ ಎಲ್ಲರಿಗೂ ಇರುವ ಹಕ್ಕುಗಳು ಹಾಗೂ ಮೂಲಭೂತ ಸ್ವಾತಂತ್ರ್ಯಗಳ ಬಗ್ಗೆ ಜಾಗತಿಕ ಗೌರವ ದೊರಕುವಂತೆ, ಅವುಗಳನ್ನು ಕಾರ್ಯರೂಪಕ್ಕೆ ತರುವಂತೆ ಪ್ರಯತ್ನಿಸುವುದು" ಎಂದು ಹೇಳಲಾಗಿದೆ. ಆದುದರಿಂದ ಎಲ್ಲರಿಗೂ ಒಪ್ಪಿಗೆಯಾಗುವಂತಹ ಈ ಮಾನವ ಹಕ್ಕುಗಳನ್ನು ಗುರುತಿಸಿ ಒಂದು ಘೋಷಣಾ ಪತ್ರವನ್ನು ರಚಿಸುವುದಕ್ಕಾಗಿ ವಿಶ್ವಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಪರಿಷತ್ತಿಗೆ ಕೇಳಿಕೊಂಡಿತು. ೧೯೪೬ರಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಪರಿಷತ್ತು ಅಮೇರಿಕದ ಶ್ರೀಮತಿ ಎಲಿಯನೋರ್ ರೂಸವೆಲ್ಟರ್ ಅಧ್ಯಕ್ಷತೆಯಲ್ಲಿ ಮಾನವ ಹಕ್ಕುಗಳ ಆಯೋಗವೊಂದನ್ನು ರಚಿಸಿತು. ಭಾರತವೂ ಈ ಆಯೋಗದ ಒಂದು ಸದಸ್ಯ ರಾಷ್ಟ್ರವಾಗಿತ್ತು ಎನ್ನುವುದು ಒಂದು ಹೆಮ್ಮೆಯ ವಿಷಯ.

ದೀರ್ಘ ಚರ್ಚೆ ಹಾಗೂ ಆಲೋಚನೆಯ ನಂತರ ಈ ಆಯೋಗ ಒಂದು ಘೋಷಣಾಪತ್ರವನ್ನು ಸಿದ್ಧಪಡಿಸಿ ವಿಶ್ವಸಂಸ್ಥೆಗೆ ಒಪ್ಪಿಸಿತು. ೧೯೪೮ರ ಡಿಸೆಂಬರ್ ೧೦ ರಂದು ವಿಶ್ವಸಂಸ್ಥೆಯ ಸಾಮಾನ್ಯ ಸಭೆ ಈ ಘೋಷಣೆಯನ್ನು ಯಾವ ವಿರೋಧವೂ ಇಲ್ಲದೆ

ಒಪ್ಪಿಕೊಂಡಿತು. ಸೋವಿಯತ್ ರಶಿಯಾ ಮಾತ್ರ ಘೋಷಣೆಯ ಪರವಾಗಿ ಮತ ನೀಡಲು ನಿರಾಕರಿಸಿ ತನ್ನ ಮತವನ್ನೇ ಚಲಾಯಿಸಲಿಲ್ಲ. ಬೇರೆ ಎಲ್ಲಾ ರಾಷ್ಟ್ರಗಳೂ ಘೋಷಣೆಯ ಪರವಾಗಿ ಮತ ನೀಡಿದವು.

ಈ ಘೋಷಣೆ ಗುರುತಿಸುವ ಮಾನವ ಹಕ್ಕುಗಳನ್ನು ಪ್ರಮುಖವಾಗಿ ಎರಡು ವಿಭಾಗಗಳಲ್ಲಿ ವಿಂಗಡಿಸಬಹುದು. ಮೊದಲನೆಯದು, ರಾಜಕೀಯ ಹಾಗೂ ನಾಗರಿಕ ಹಕ್ಕುಗಳು. ಎರಡನೆಯದು ಆರ್ಥಿಕ ಹಾಗೂ ಸಾಮಾಜಿಕ ಹಕ್ಕುಗಳು. ರಾಜಕೀಯ ಹಾಗೂ ನಾಗರಿಕ ಹಕ್ಕುಗಳನ್ನು ಕೂಡ ಮೂರು ಭಾಗಗಳಲ್ಲಿ ವಿಂಗಡಿಸಬಹುದು. ಮೊದಲನೆಯದು, ಸಾಮಾನ್ಯವಾಗಿ ಪ್ರಜಾಪ್ರಭುತ್ವವನ್ನು ನಂಬಿರುವ ಎಲ್ಲಾ ದೇಶಗಳೂ ತನ್ನ ನಾಗರಿಕರಿಗೆ ನೀಡುವ ಅಧಿಕಾರಗಳು, ಬದುಕುವ ಹಕ್ಕು, ಸ್ವಾತಂತ್ರ್ಯದ ಹಕ್ಕು, ಸುರಕ್ಷತೆಯ ಹಕ್ಕು, ಕಾನೂನಿನ ಮುಂದೆ ಸಮಾನತೆಯ ಹಕ್ಕು, ಹಕ್ಕುಗಳ ಉಲ್ಲಂಘನೆಯಾದಾಗ ಪರಿಣಾಮ ಕಾರಿಯಾದ ಪರಿಹಾರದ ಹಕ್ಕು, ಕಾರಣವಿಲ್ಲದೆ ದಸ್ತಗಿರಿಯಾಗದಿರುವ ಬಂಧನಕ್ಕೆ ಒಳಗಾಗ ದಿರುವ ಹಾಗೂ ಗಡೀಪಾರಾಗದಿರುವ ಹಕ್ಕು, ಪಕ್ಷಪಾತವಿಲ್ಲದ ನ್ಯಾಯಾಧೀಕರಣದ ಮೂಲಕ ಯೋಗ್ಯ ಹಾಗೂ ಸಾರ್ವಜನಿಕ ವಿಚಾರಣೆಯ ಹಕ್ಕು, ಪರಿವಾರದ, ಮನೆಯ ಹಾಗೂ ಪತ್ರವ್ಯವಹಾರದಲ್ಲಿ ಏಕಾಂತತೆಯ ಹಕ್ಕು, ಒಂದು ದೇಶದ ಒಳಗಡೆ ಎಲ್ಲಿ ಬೇಕಾದರಲ್ಲಿ ಹೋಗುವ ಹಕ್ಕು, ಆಸ್ತಿಯ ಹಕ್ಕು, ಅಭಿಪ್ರಾಯದ, ಅಭಿವ್ಯಕ್ತಿಯ ಹಾಗೂ ಧಾರ್ಮಿಕ ಹಕ್ಕು, ಶಾಂತಿಯುತವಾಗಿ ಸಭೆ ಸೇರುವ ಹಕ್ಕು. ಇವೇ ಈ ಗುಂಪಿನಲ್ಲಿ ಬರುವ ಹಕ್ಕುಗಳು. ಎರಡನೆಯದು ಒಂದು ದೇಶಕ್ಕೆ ಸಂಬಂಧಪಟ್ಟಂತೆ ಅದರ ನಾಗರೀಕನಿಗಿರುವ ಹಕ್ಕುಗಳು. ತನ್ನ ದೇಶವನ್ನೂ ಒಳಗೊಂಡಂತೆ, ಒಂದು ದೇಶವನ್ನು ಬಿಟ್ಟು ಹೋಗುವ ಹಾಗೂ ತನ್ನ ದೇಶಕ್ಕೆ ಮರಳುವ ಹಕ್ಕು, ಒಂದು ದೇಶದ ನಾಗರಿಕನಾಗಿ ಉಳಿಯುವ ಹಕ್ಕು, ಒಂದು ದೇಶದ ಆಶ್ರಯ ಪಡೆಯುವ ಹಕ್ಕು ಹಾಗೂ ನೇರವಾಗಿ ಇಲ್ಲವೇ ಮುಕ್ತ ಚುನಾವಣೆ ಯಲ್ಲಿ ಚುನಾಯಿತರಾದ ಪ್ರತಿನಿಧಿಗಳ ಮೂಲಕ ತನ್ನ ದೇಶದ ಆಡಳಿತದಲ್ಲಿ ಭಾಗವಹಿಸುವ ಹಕ್ಕು, ಮೂರನೆಯದಾಗಿ ಹಲವು ಅನಾಗರಿಕ ಸಂಪ್ರದಾಯಗಳ ಪದ್ಧತಿ ಘೋಷಣೆಯು ಗುಲಾಮಗಿರಿಯನ್ನೂ, ಚಿತ್ರ ಹಿಂಸೆ ನೀಡುವುದನ್ನೂ, ಕ್ರೂರ, ಅಮಾನವೀಯ ಅಥವಾ ಅವನತಿಗೊಳಿಸುವಂತಹ ನಡವಳಿಕೆಯನ್ನೂ, ಶಿಕ್ಷೆಯನ್ನೂ ರದ್ದುಗೊಳಿಸಿರುವುದಾಗಿ ಘೋಷಿಸುತ್ತದೆ. ಮದುವೆ ಮಾಡಿಕೊಳ್ಳುವ ಹಾಗೂ ಪರಿವಾರವನ್ನು ಸಂಸ್ಥಾಪಿಸುವ ಹಕ್ಕನ್ನೂ ಇದರಲ್ಲಿ ನೀಡಲಾಗಿದೆ. ಏಕೆಂದರೆ ಆಗ ವಿದೇಶಿಯರನ್ನು ಮದುವೆಯಾಗಬಾರದು ಎಂಬ ಕಟ್ಟಳೆ ಸೋವಿಯತ್ ರಶಿಯದಲ್ಲಿ ಇತ್ತು ಎಂಬುದನ್ನು ಇಲ್ಲಿ ಗಮನಿಸಬಹುದು.

ಇನ್ನೊಂದು ಬಗೆಯ ಹಕ್ಕುಗಳೆಂದರೆ ಆರ್ಥಿಕ ಹಾಗೂ ಸಾಮಾಜಿಕ ಹಕ್ಕುಗಳು, ಇವುಗಳಲ್ಲಿ ಪ್ರಮುಖವಾಗಿ ಸಾಮಾಜಿಕ ರಕ್ಷಣೆಯ ಹಕ್ಕು, ಕೆಲಸದ ಹಕ್ಕು, ಸಮನಾದ ಕೆಲಸಕ್ಕೆ ಸಮನಾದ ಸಂಬಳದ ಹಕ್ಕು, ಕಾರ್ಮಿಕ ಸಂಘಟನೆಗಳನ್ನು ರಚಿಸಿಕೊಳ್ಳುವ ಹಕ್ಕು, ವಿಶ್ರಾಂತಿಯ ಹಕ್ಕು, ಯೋಗ್ಯ ಜೀವನ ಮಟ್ಟದ ಹಕ್ಕು, ಶಿಕ್ಷಣದ ಹಕ್ಕು ಇವೇ ಮೊದಲಾದ ಹಕ್ಕುಗಳನ್ನು ಪ್ರತಿಪಾದಿಸಲಾಗಿದೆ.

ಮಾನವ ಹಕ್ಕುಗಳನ್ನು ಉಲ್ಲಂಘನೆ ಮಾಡಿದ ರಾಷ್ಟ್ರಕ್ಕೆ ಯಾವುದೇ ಶಿಕ್ಷೆ ಇಲ್ಲ ಎಂಬ ಮತ್ತು ಇದನ್ನು ಕಾರ್ಯಗತಗೊಳಿಸಲು ಯಾವುದೇ ವ್ಯವಸ್ಥೆಯನ್ನೂ ರಚಿಸಲಾಗಿಲ್ಲ ಎಂದೂ, ಇವುಗಳು ಹಕ್ಕುಗಳೇ ಅಲ್ಲ ಕೇವಲ ನೈತಿಕ ಬೇಡಿಕೆಗಳು ಎಂದೆಲ್ಲಾ ಟೀಕಿಸಲಾಗಿದೆ. ಆದರೆ ಹೇಗ್‌ನಲ್ಲಿರುವ ಅಂತರರಾಷ್ಟ್ರೀಯ ನ್ಯಾಯಾಲಯದ ನ್ಯಾಯಾಧೀಶ ಲ್ಯಾಟರ್ ಪ್ಯಾಕ್ಟ ಅವರು "ಇಂದಿನ ನೈತಿಕ ಬೇಡಿಕೆಗಳೇ ಬಹಳ ಸಲ ನಾಳಿನ ಸಂವಿಧಾನಿಕ ಹಕ್ಕುಗಳಾಗುತ್ತವೆ" ಎಂದಿದ್ದಾರೆ. ಬರಲಿರುವ ಹೊಸ ನಾಗರಿಕತೆಯ ಒಂದು ಪಕ್ಷಿನೋಟವನ್ನು ತೋರಿಸುವ ಈ ಮಾನವ ಹಕ್ಕುಗಳ ಜಾಗತಿಕ ಘೋಷಣೆ ಇಂದು ಒಂದು ಆದರ್ಶ ಕನಸೇ ಆಗಿರಬಹುದು. ನಮ್ಮ ನಿಮ್ಮೆಲ್ಲರ ಪ್ರಯತ್ನಗಳಿಂದ ನಾಳೆ ಅದು ನನಸೂ ಆಗಬಹುದಲ್ಲವೇ.

### ೩.೨ ಬದಲಾಗುತ್ತಿರುವ ರಾಜ್ಯದ ಪಾತ್ರ

ರಾಜ್ಯವಿಲ್ಲದೇ ವ್ಯಕ್ತಿ ಬದುಕಲು ಸಾಧ್ಯವಿಲ್ಲ, ರಾಜ್ಯ ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣ ಸಾಧನ. ಆದ್ದರಿಂದ ಜನರಿಗೆ ಉಪಯುಕ್ತವಾದಂತಹ ಹಲವು ಕಾರ್ಯಗಳನ್ನು ರಾಜ್ಯವು ನಿರ್ವಹಿಸುತ್ತದೆ. ಆದರೆ ರಾಜ್ಯವು ವ್ಯಕ್ತಿಯ ಎಲ್ಲಾ ಕಾರ್ಯಗಳಲ್ಲಿ ಹಸ್ತಕ್ಷೇಪ ಮಾಡಬಾರದು ಹಾಗೇನಾದರೂ ಮಾಡಿದರೆ ಸಮಾಜದ ಒಳಿತಿಗೆ ಕೇಡುಂಟಾಗುತ್ತದೆ. ಅವುಗಳನ್ನು ನಿಷೇಧಾತ್ಮಕ ಕಾರ್ಯಗಳೆನ್ನುತ್ತೇವೆ. ಮಾನವನ ಅಭ್ಯುದಯಕ್ಕೆ ಪೂರಕ ವಾದಂತಹ ಕಾರ್ಯಗಳನ್ನು ವಾಸ್ತವಿಕ ಕಾರ್ಯಗಳು ಅಥವಾ ನಿರ್ವಹಿಸಬೇಕಾದ ಕಾರ್ಯಗಳು ಎನ್ನುತ್ತೇವೆ. ಮಾನವ ಸ್ವಾತಂತ್ರ್ಯದ ಕ್ಷೇತ್ರಗಳಾದಂತಹ ಸಾರ್ವಜನಿಕ ಅಭಿಪ್ರಾಯ ರೂಢಿ, ಸಂಸ್ಕೃತಿ, ಮತಧರ್ಮ ಮತ್ತು ನೈತಿಕತೆಯಲ್ಲಿ ರಾಜ್ಯದ ಹಸ್ತಕ್ಷೇಪವನ್ನು ನಿಷೇಧಾತ್ಮಕ ಕಾರ್ಯಗಳು ಮಿತಿಗೊಳಿಸುತ್ತವೆ. ನಿರ್ವಹಿಸಲೇ ಬೇಕಾದಂತಹ ಕಾರ್ಯಗಳು ಕೇವಲ ಕಾವಲುದಳದ ಕಾರ್ಯಗಳಿಂದ, ಆರ್ಥಿಕ ಮತ್ತು ನಿಯಂತ್ರಕ ಕಾರ್ಯಗಳವರೆಗೂ ತದನಂತರ ಕಲ್ಯಾಣ ಕಾರ್ಯಗಳವರೆಗೂ ವಿಸ್ತೃತಗೊಂಡಿವೆ.

### ಅ. ಪೊಲೀಸ್ ರಾಜ್ಯ

ರಾಜ್ಯದ ಅಸ್ತಿತ್ವ ಮತ್ತು ವ್ಯಕ್ತಿಯ ಪ್ರಾಣವನ್ನು ಕಾಪಾಡಲು ನೆರವಾಗುವಂತಹ ಕಾರ್ಯಗಳು, ಪೊಲೀಸರು ನಿರ್ವಹಿಸುವಂತಹ ಕಾರ್ಯಗಳಾದ್ದರಿಂದ ಪೊಲೀಸ್ ಕಾರ್ಯಗಳು ಎಂದೂ ಕರೆಯಲಾಗಿದೆ. ಹಾಗೂ ಆ ರಾಜ್ಯವನ್ನು ಪೊಲೀಸ್ ರಾಜ್ಯವೆಂದೂ ಕರೆಯಲಾಗಿದೆ. ರಾಜ್ಯದ ಮೂಲಾಂಶಗಳಲ್ಲಿ ಒಂದಾದ ಭೂಪ್ರದೇಶವು ಹೊರಗಿನವರ ದಾಳಿಯಿಂದ ಸುರಕ್ಷಿತ ವಾಗಿರಬೇಕು. ಆದ್ದರಿಂದ ಪ್ರತಿಯೊಂದು ರಾಜ್ಯವು ಸುಸಜ್ಜಿತ ಸೇನೆಯನ್ನು ಹೊಂದಿರಬೇಕು. ರಾಷ್ಟ್ರ ರಕ್ಷಣೆ ರಾಜ್ಯದ ಪ್ರಾಥಮಿಕ ಹೊಣೆ. ಜೊತೆಗೆ ಪ್ರತಿಯೊಬ್ಬ ವ್ಯಕ್ತಿಯ ಪ್ರಾಣ, ಸ್ವಾತಂತ್ರ್ಯ ಮತ್ತು ಸ್ವತ್ತು ಇತರರ ಅಕ್ರಮ ವ್ಯವಹಾರಗಳಿಗೆ ತುತ್ತಾಗದೆ ಸುರಕ್ಷಿತ ವಾಗಿರಬೇಕು. ಅದಕ್ಕಾಗಿ ರಾಜ್ಯವು ಸುಶಿಕ್ಷಿತ ಪೊಲೀಸ್ ಪಡೆಯೊಂದನ್ನು ವ್ಯವಸ್ಥೆಗೊಳಿಸಿರ ಬೇಕು. ಅದರ ಜೊತೆಗೆ ಅಂತರರಾಷ್ಟ್ರೀಯ ಸಂಬಂಧ, ರಾಜ್ಯದ ನಾಣ್ಯ ವ್ಯವಸ್ಥೆಯನ್ನು ಹತೋಟಿಯಲ್ಲಿಡುವುದು ಇತ್ಯಾದಿ. ರಾಷ್ಟ್ರೀಯ ಪ್ರಾಮುಖ್ಯತೆ ಪಡೆದಿರುವ ಕಾರ್ಯಗಳು

ಸಹ ಕಾವಲುದಳದ ಕಾರ್ಯಗಳ ವ್ಯಾಪ್ತಿಯೊಳಗೆ ಬರುತ್ತವೆ. ವ್ಯಕ್ತಿವಾದವು, ರಾಜ್ಯವು ಪೊಲೀಸ್ ಕಾರ್ಯಗಳಲ್ಲದೆ ಇತರೆ ಸುಖೀ ಕಾರ್ಯಗಳನ್ನಾಗಲಿ ಕೈಗೊಂಡರೆ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುತ್ತದೆ ಎಂದು ವಾದಿಸಿತು. ಆದರೆ ಅದು ಸಹಜವಾಗಿಯೇ ಅಲ್ಪಾಯುಷ್ಯದಿಂದ ಕೂಡಿತ್ತು. ರಾಜ್ಯದ ವ್ಯಾಪ್ತಿ ವಿಸ್ತಾರಗೊಳ್ಳಬೇಕಾಯಿತು.

**ಆ. ಆರ್ಥಿಕ ಮತ್ತು ನಿಯಂತ್ರಕ (ರಾಜ್ಯ) ಕಾರ್ಯಗಳು**

ಯುರೋಪಿನ ಕೈಗಾರಿಕಾ ಕ್ರಾಂತಿಯು ರಾಜ್ಯಗಳ ಆರ್ಥಿಕ ಸ್ವರೂಪವನ್ನು ಸಂಪೂರ್ಣವಾಗಿ ಬದಲಾಯಿಸಿತು. ವ್ಯಕ್ತಿವಾದವೂ ನಿರಾಕರಿಸಲ್ಪಟ್ಟಿತು. ಕಾರ್ಮಿಕರ ಶೋಷಣೆ ಮತ್ತು ಕಷ್ಟ ಕಾರ್ಪಣ್ಯಗಳ ನಿವಾರಣೆಗಾಗಿ, ತನ್ನ ಅಸ್ತಿತ್ವದ ಸಮರ್ಥನೆಗಾಗಿ, ಆರ್ಥಿಕ ಕ್ಷೇತ್ರದಲ್ಲಿ ರಾಜ್ಯವು ಸಕ್ರಿಯ ಪಾತ್ರವನ್ನು ವಹಿಸಬೇಕಾಯಿತು. ಈ ಕೆಳಗಿನ ಕಾರ್ಯಗಳು ಈ ವರ್ಗದ ವ್ಯಾಪ್ತಿ ಯೊಳಗೆ ಬರುತ್ತವೆ. ೧. ಉತ್ಪಾದನೆ, ವಿತರಣೆ ಮತ್ತು ಅನುಭೋಗದ ನಿಯಂತ್ರಣ ೨. ಕೈಗಾರಿಕೆ, ವ್ಯಾಪಾರ ಮತ್ತು ವಾಣಿಜ್ಯ ನಿಯಂತ್ರಣ ೩. ಬ್ಯಾಂಕು ಮತ್ತು ಹಣ ಮಾರುಕಟ್ಟೆಯ ನಿಯಂತ್ರಣ ೪. ಮಾಲೀಕರು ಮತ್ತು ಕಾರ್ಮಿಕರ ನಡುವಿನ ಸಂಬಂಧ ನಿಯಂತ್ರಣ ಇತ್ಯಾದಿ ರಾಜ್ಯವು ನಿರ್ವಹಿಸುವ ಆರ್ಥಿಕ ಮತ್ತು ನಿಯಂತ್ರಕ ಕಾರ್ಯವು ಈ ಮೇಲಿನ ಕಾರ್ಯಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಅದು ಸರ್ಕಾರ ಮಾದರಿಗಳು ಮತ್ತು ಅರ್ಥವ್ಯವಸ್ಥೆಯ ಸ್ವರೂಪ, ಉದಾಹರಣೆಗೆ ಬಂಡವಾಳಶಾಹಿ, ಸಮಾಜವಾದಿ ಮತ್ತು ಸಮ್ಮಿಶ್ರ ಅರ್ಥ ವ್ಯವಸ್ಥೆಯ ಮೇಲೆ ಬದಲಾಗುತ್ತದೆ.

**ಇ. ಕಲ್ಯಾಣ ರಾಜ್ಯ**

ರಾಜ್ಯವು ಕೇವಲ ಪೊಲೀಸ್ ರಾಜ್ಯದ ಮತ್ತು ನಿಯಂತ್ರಕ ರಾಜ್ಯದ ಕಾರ್ಯಗಳಿಗೆ ಸೀಮಿತವಾಲ್ಲ. ಸಮಾಜವಾದದ ಲೋಕಪ್ರಿಯತೆ ಮತ್ತು ಅದರ ಬೆಳವಣಿಗೆ ಅಧಿಕಾರಸ್ಥರನ್ನು ಬಡಿದೆಬ್ಬಿಸಿದೆ. ಬಡವರ ಬಗ್ಗೆ ಬೇಸರ ಪಟ್ಟುಕೊಂಡರೆ, ಅವರ ಅಭ್ಯುದಯಕ್ಕೆ ಅಡ್ಡ ಗಾಲಾದರೆ, ಶ್ರೀ ಸಾಮಾನ್ಯನ ಶ್ರೇಯಸ್ಸಿಗಾಗಿ ಶ್ರಮಿಸದಿದ್ದರೆ ತಾವೆಲ್ಲರೂ ಕಾರ್ಮಿಕ ಕ್ರಾಂತಿ ಯಲ್ಲಿ ಕೊಚ್ಚಿಹೋಗಿ ಸಮತಾವಾದವು ಅಧಿಕಾರಪೀಠವೇರುವ ಭೀತಿಯು ಪ್ರಜಾ ಸರ್ಕಾರ ಗಳಲ್ಲಿ ಹಬ್ಬಿತು. ಅದರಿಂದಾಗಿ ಪ್ರಜಾರಾಜ್ಯಗಳು 'ಸಾಮಾಜಿಕ ಸೇವೆ' ಮತ್ತು 'ಸಾಮಾಜಿಕ ಸುಭದ್ರತೆ'ಯನ್ನೊದಗಿಸುವ ಜನೋಪಕಾರಿ ಕಾರ್ಯಗಳನ್ನು ಕೈಗೊಂಡಿವೆ. ಅವುಗಳು ಬಂಡವಾಳಶಾಹಿಯಿಂದ ಉಂಟಾದ ಸಾಮಾಜಿಕ, ಆರ್ಥಿಕ ಮತ್ತು ನಾಗರಿಕ ಅಸಮತೆಯನ್ನು ಹೋಗಲಾಡಿಸಿ ಸಾಮಾಜಿಕ ನ್ಯಾಯವನ್ನೊದಗಿಸುತ್ತವೆ. ಕಡ್ಡಾಯ ಶಿಕ್ಷಣ, ಸಾಮಾಜಿಕ ಆರೋಗ್ಯ ಮತ್ತು ನೈರ್ಮಲ್ಯ, ವಸತಿ ಸೌಕರ್ಯ, ಪೂರ್ಣ ಉದ್ಯೋಗಾವಕಾಶ ಅಥವಾ ನಿರುದ್ಯೋಗ ಭತ್ಯೆ, ಕಾರ್ಖಾನೆ ಮತ್ತು ಕೃಷಿ ಕ್ಷೇತ್ರಗಳಲ್ಲಿ ದುಡಿಮೆಯ ಸ್ಥಿತಿಗತಿಗಳ ಸುಧಾರಣೆ, ನ್ಯಾಯಯುತ ಸಂಭಾವನೆ ಅಥವಾ ಗಳಿಕೆಯ ಅವಕಾಶ, ವೈದ್ಯಕೀಯ ಸಹಾಯ ಅಥವಾ ಅನಾರೋಗ್ಯ ಭತ್ಯೆ ಮುಂತಾದ ಕಾರ್ಯಗಳನ್ನು ಸಮಾಜ ಕಲ್ಯಾಣ ಕಾರ್ಯಗಳೆಂದು

ಪರಿಗಣಿಸಬಹುದು. ಹೀಗೆ ರಾಜ್ಯವು, ಪೊಲೀಸ್ ರಾಜ್ಯದಿಂದ ನಿಯಂತ್ರಕ ರಾಜ್ಯವಾಗಿ ಮತ್ತು ಪ್ರಸ್ತುತವಾಗಿ ಕಲ್ಯಾಣ ರಾಜ್ಯವಾಗಿ ತನ್ನ ಪಾತ್ರವನ್ನು ನಿರ್ವಹಿಸುತ್ತಿದೆ.

**ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ - ಅರ್ಥ, ಮಹತ್ವ ಮತ್ತು ರಾಜಕೀಯ ಪರಿಣಾಮಗಳು**

ಎರಡನೇ ಮಹಾಯುದ್ಧದ ತರುವಾಯ 'ವ್ಯಾಪಾರ ಮತ್ತು ಸುಂಕದ ಮೇಲಿನ ಸಾಮಾನ್ಯ ಒಪ್ಪಂದ' (GATT- General Agreements on Trade and Tarriff) ಅಸ್ತಿತ್ವಕ್ಕೆ ಬಂತು. ಈ ಒಪ್ಪಂದ ಸಂಪೂರ್ಣವಾಗಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗೆ ಅಷ್ಟೇನೂ ಪ್ರಾಮುಖ್ಯತೆ ನೀಡದಿದ್ದರೂ, ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಹಿತಾಸಕ್ತಿ ಕಾಯ್ದುಕೊಳ್ಳುವುದಕ್ಕಾಗಿ ಸಾಕಷ್ಟು ವಿಚಾರಗಳನ್ನು ಒಳಗೊಂಡಿತ್ತು. ಈ ಒಪ್ಪಂದದ ಮೊದಲ ೭ ಸುತ್ತಿನ ಮಾತುಕತೆಗಳು ನಡೆದಿದ್ದವು. ಆದರೆ ಅವುಗಳ್ಯಾವುವೂ ೮ನೇ ಸುತ್ತಿನ ಮಾತಕತೆಯಷ್ಟು ಪರಿಣಾಮಕಾರಿಯಾಗಿರಲಿಲ್ಲ. ಉರುಗ್ವೇಯ ಪಂಡಡೆಲ್ ಎಷ್ಟೇಯಲ್ಲಿ, ೧೯೯೬ರಲ್ಲಿ ನಡೆದ ೮ನೇ ಸುತ್ತಿನ ಮಾತುಕತೆಯಲ್ಲಿ ವ್ಯಾಪಾರ ಸಂಬಂಧಿ ಭೌದ್ಧಿಕ ಆಸ್ತಿಯ ಹಕ್ಕು (Trade Related Intellectual Property Rights) ವ್ಯಾಪಾರ ಸಂಬಂಧೀ ಹೂಡಿಕೆ ಕ್ರಮಗಳು (Trade Related Investment Measures) ಎಂಬ ಎರಡು ಒಪ್ಪಂದಗಳ ಮೂಲಕ ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ ವಲಯದ ಯಜಮಾನಿಕೆಯನ್ನು ಸಂಪೂರ್ಣವಾಗಿ ಬಹುರಾಷ್ಟ್ರೀಯವಾಗಿಸಿ, ತಮ್ಮ ಆರ್ಥಿಕ ಕ್ಷೇತ್ರವನ್ನು ಈ ಬಹುರಾಷ್ಟ್ರೀಯ ಕಂಪನಿಗಳಿಗೆ ಮುಕ್ತಗೊಳಿಸುವುದರ ಮೂಲಕವಾಗಿ ತಮ್ಮ ರಾಜಕೀಯ ಸಾರ್ವಭೌಮತ್ವ ಅಧಿಕಾರವನ್ನು ಬಿಟ್ಟುಕೊಡಬೇಕಾದ ಅನಿವಾರ್ಯತೆ ಬಂದೊಗಿದೆ.

ಅಮೇರಿಕಾ ಸಂಯುಕ್ತ ಸಂಸ್ಥಾನ ತನ್ನಲ್ಲಿ ಎರಡನೆ ಮಹಾಯುದ್ಧದ ತರುವಾಯ ಆದ ಅಧಿಕ ಕೈಗಾರಿಕಾ ಉತ್ಪಾದನಾ ವಸ್ತುಗಳಿಗೆ ಮಾರುಕಟ್ಟೆಯನ್ನು ಗಳಿಸಿಕೊಡುವದಕ್ಕಾಗಿ ಗ್ಯಾಟ್ ಒಪ್ಪಂದವನ್ನು ಬಳಕೆ ಮಾಡಿಕೊಳ್ಳಲಾಯಿತು. ಆ ಮೂಲಕ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮಾರುಕಟ್ಟೆಯನ್ನು ತನ್ನ ಸಿದ್ಧವಸ್ತುಗಳ ಮಾರಾಟಕ್ಕೆ ಬಳಸಿಕೊಳ್ಳುವುದಾಗಿತ್ತು. ಜಾಗತೀಕರಣದ ಹೆಸರಿನಲ್ಲಿ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಬಹುರಾಷ್ಟ್ರೀಯ ಕಂಪನಿಗಳು ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಬಂಡವಾಳ ಹೂಡುವ ಮತ್ತು ತಮ್ಮ ಸಿದ್ಧವಸ್ತುಗಳಿಗೆ ಆ ರಾಷ್ಟ್ರದ ಮಾರುಕಟ್ಟೆಗಳನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ತೊಡಗಿದ್ದರಿಂದ ಈ ರಾಷ್ಟ್ರಗಳ ಸಾರ್ವಜನಿಕ ವಲಯದ ಕಾರ್ಖಾನೆಗಳು ಇವುಗಳಿಗೆ ಸಮರ್ಥವಾಗಿ ಪೈಪೋಟಿಯನ್ನು ನೀಡಲು ಸಾಧ್ಯವಾಗದೆ ಅವುಗಳನ್ನು ಮುಚ್ಚಲಾಯಿತು. ಇಲ್ಲವೇ ಖಾಸಾಗೀ ಕಂಪೆನಿಗಳಿಗೆ ಮಾರಾಟಮಾಡಲಾಯಿತು. ಉದಾಹರಣೆಗೆ ಭಾರತದಲ್ಲಿ ಆ ರೀತಿ ದುರ್ಬಲವಾದ ಸಾರ್ವಜನಿಕ ವಲಯದ ಕೈಗಾರಿಕೆಗಳು ಮುಚ್ಚುವುದಕ್ಕಾಗಿ ಅಥವಾ ಖಾಸಗೀಕರಣ ಮಾಡುವುದಕ್ಕಾಗಿ 'ಬಂಡವಾಳ ಹಿಂತೆಗೆತ ಖಾತೆ' ಎಂಬ ಒಂದು ಹೊಸ ಖಾತೆಯನ್ನು ಭಾರತದ ಸಚಿವ ಸಂಪುಟದಲ್ಲಿ ತೆರಯಲಾಯಿತು. ಈ ಖಾತೆಯ ಮುಖ್ಯ ಕಾರ್ಯವೆಂದರೆ, ಯಾವುದೇ

ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಬಹುರಾಷ್ಟ್ರೀಯ ಕಂಪನಿಗಳಿಗೆ ಪೈಪೋಟಿ ನೀಡಲು ಸಾಧ್ಯವಾಗದೆ ನಷ್ಟ ಅನುಭವಿಸುತ್ತಿದ್ದರೆ ಅವುಗಳ ಬಂಡವಾಳವನ್ನು ಹಿಂತೆಗೆದುಕೊಳ್ಳುವುದು ಇಲ್ಲವೆ ಅವುಗಳನ್ನು ಖಾಸಗೀಯವರಿಗೆ ಮಾರಾಟಮಾಡುವುದು. ಹೀಗೆ ಸಾರ್ವತ್ರಿಕ ವಲಯದ ಉದ್ದಿಮೆಗಳು ಕಡಿಮೆಯಾಗಿ ಖಾಸಗೀ ವಲಯದ ಉದ್ದಿಮೆಗಳ ಸಂಖ್ಯೆ ಹೆಚ್ಚುತ್ತಿರುವುದ ರಿಂದ ಸರ್ಕಾರ ತನ್ನ ಹಣಕಾಸಿನ ಅವಶ್ಯಕತೆ ಈಡೇರಿಸಿಕೊಳ್ಳಲು ಖಾಸಗೀ ಕಂಪೆನಿಗಳನ್ನು ಅವಲಂಬಿಸಬೇಕಾಗಿರುವುದರಿಂದ ಅವುಗಳ ಅನುಕೂಲಕ್ಕನುಗುಣವಾದ ಶಾಸನಗಳನ್ನು ರಚಿಸಿ ಕಾರ್ಯಗತ ಮಾಡುವ ಅನಿವಾರ್ಯತೆಯಿಂದಾಗಿ ರಾಜ್ಯ ಇಂದು ತನ್ನ ಸಾರ್ವಭೌಮತ್ವ ಅಧಿಕಾರವನ್ನು ಕಳೆದುಕೊಳ್ಳುತ್ತಿದೆ. ಅದರ ಪರಿಣಾಮವಾಗಿ ರಾಜ್ಯದ ಸಾಮಾಜಿಕ ನ್ಯಾಯದ ಪರಿಕಲ್ಪನೆ ಕಣ್ಮರೆಯಾಗುತ್ತಿದೆ. ಆದರೂ "ಭಾರತ ಜಾಗತೀಕರಣ ಬೇಕೆ ಬೇಡವೆ ಎಂಬ ಚರ್ಚೆಯಲ್ಲಿ ವೃಥಾ ಕಾಲಹರಣ ಮಾಡುವುದರ ಬದಲು ಎಲ್ಲರಿಗೂ ಸಮಾನ ಅವಕಾಶ ದೊರೆಯುವ ರೀತಿಯಲ್ಲಿ ಅರ್ಥವ್ಯವಸ್ಥೆಯನ್ನು ರೂಪಿಸಿಕೊಂಡು ಮುನ್ನುಗ್ಗಬೇಕು. ಇಲ್ಲ ವಾದಲ್ಲಿ ಪಶ್ಚಿಮದ ಬಿರುಗಾಳಿಯಲ್ಲಿ ಕೊಚ್ಚಿ ಹೋಗಬೇಕಾಗುತ್ತದೆ" ಎಂಬ ೧೯೯೮ರ ಅರ್ಥಶಾಸ್ತ್ರದಲ್ಲಿನ ಪ್ರತಿಷ್ಠಿತ ನೊಬೆಲ್ ಪ್ರಶಸ್ತಿಯನ್ನು ಪಡೆದಿರುವ ಅಮರ್ತ್ಯ ಕುಮಾರ ಸೇನ್ ರವರ ಅಭಿಪ್ರಾಯವನ್ನು ಗಮನಿಸಿದರೆ ರಾಷ್ಟ್ರದ ಅಭಿವೃದ್ಧಿಯಲ್ಲಿ ಜಾಗತೀಕರಣದ ಪ್ರಾಮುಖ್ಯತೆಯನ್ನು ಕಡೆಗಣಿಸಬಾರದು ಎಂದಾಗುತ್ತದೆ.

### ರಾಜ್ಯದ ಮೇಲೆ ಜಾಗತೀಕರಣದ ಪರಿಣಾಮಗಳು

ಜಾಗತೀಕರಣ ರಾಜ್ಯದ ಹಲವಾರು ಕ್ಷೇತ್ರಗಳ ಮೇಲೆ ತೀವ್ರತರವಾದ ಪರಿಣಾಮವನ್ನು ಬೀರಿದೆ. ಅವುಗಳಲ್ಲಿ ಕೆಲವೊಂದು ಪ್ರಮುಖ ಕ್ಷೇತ್ರಗಳೆಂದರೆ ಕೃಷಿ, ಕೈಗಾರಿಕೆ, ಉದ್ಯೋಗ, ರಾಜ್ಯದ ಸ್ವಾಯತ್ತತೆ, ಪರಮಾಧಿಕಾರ ಮುಂತಾದವುಗಳು.

### ಕೃಷಿ ಕ್ಷೇತ್ರ

ಜಾಗತೀಕರಣದಿಂದ ಇತರೆಲ್ಲಾ ಕ್ಷೇತ್ರಗಳಿಗಿಂತ ಹೆಚ್ಚು ತೊಂದರೆಗೆ ಸಿಲುಕಿರುವ ಕ್ಷೇತ್ರವೆಂದರೆ ಕೃಷಿ. ಮುಂದುವರೆದ ರಾಷ್ಟ್ರಗಳು ತನ್ನ ರೈತರಿಗೆ ಸಾಕಷ್ಟು ಸಬ್ಸಿಡಿಯನ್ನು ನೀಡುತ್ತಿರುವುದರಿಂದ ಅವರು ಕಡಿಮೆ ಬೆಲೆ ಕೃಷಿ ಉತ್ಪನ್ನಗಳನ್ನು ಭಾರತೀಯ ಮಾರುಕಟ್ಟೆ ಯಲ್ಲಿ ಮಾರಾಟ ಮಾಡಲು ಶಕ್ತರಾಗಿದ್ದಾರೆ. ಆದರೆ ಭಾರತೀಯ ರೈತನಿಗೆ ಆ ಪ್ರಮಾಣದ ಸಬ್ಸಿಡಿ ದೊರೆಯದ್ದರಿಂದ ವಿದೇಶಿ ವಸ್ತುಗಳ ಜೊತೆ ಪೈಪೋಟಿ ನಡೆಸಲು ಸಾಧ್ಯವಾಗದೆ ಇಂದು ಕೃಷಿ ಕ್ಷೇತ್ರ ಮತ್ತು ರೈತವರ್ಗ ಸಾಕಷ್ಟು ಸಾವು ನೋವುಗಳನ್ನು ಅನುಭವಿಸುತ್ತಿದೆ.

ವಿಶ್ವಬ್ಯಾಂಕ್ ಕೃಷಿವಲಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಸೂಚನೆಗಳನ್ನು ಭಾರತಕ್ಕೆ ನೀಡಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ

ಅ. ಹೆಚ್ಚು ಲಾಭ ಕೊಡದ ಬೆಳೆಗಳನ್ನು ಕಡಿಮೆ ಮಾಡುವುದು ಮತ್ತು ರಫ್ತು ಮಾಡಬಹುದಾದ ಉತ್ಪಾದನೆಗಳನ್ನು ಹೆಚ್ಚಿಸುವುದು.

ಆ. ಭಾರತೀಯ ಕೃಷಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಇತರೆ ರಾಷ್ಟ್ರಗಳೊಡನೆ ಸ್ಪರ್ಧಿಸುವುದು.

ಇ. ಸಬ್ಸಿಡಿಯನ್ನು ಸಂಪೂರ್ಣವಾಗಿ ನಿಲ್ಲಿಸುವುದು.

ಈ. ಆಮದು ಮತ್ತು ರಫ್ತಿನ ಮೇಲೆ ಯಾವುದೇ ನಿರ್ಬಂಧವಿರಬಾರದು.

ಈ ಮೇಲಿನ ಸೂಚನೆಗಳನ್ವಯ ಭಾರತ ಸರ್ಕಾರ ೨೦೦೦ರಲ್ಲಿ ರಾಷ್ಟ್ರೀಯ ಕೃಷಿ ನೀತಿಯನ್ನು ಜಾರಿಗೆ ತಂದಿದೆ. ಇದು ಭಾರತೀಯ ಕೃಷಿಗೆ ಅಪಾಯಕಾರಿಯಾಗಿದೆ.

**ಕೈಗಾರಿಕ ಕ್ಷೇತ್ರ**

ಭಾರತೀಯ ಕೈಗಾರಿಕೆ ತನ್ನದೇ ಆದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಅವುಗಳಲ್ಲಿ ಕೆಲವು ಮುಖ್ಯವಾದ ಸಮಸ್ಯೆಗಳೆಂದರೆ ವೈಜ್ಞಾನಿಕ ಸಂಶೋಧನೆ ಮತ್ತು ತಂತ್ರಜ್ಞಾನ, ಬಂಡವಾಳ ಹೂಡಿಕೆಯ ಕೊರತೆ ಮುಂತಾದವುಗಳು ಜಾತೀಕರಣದಿಂದಾಗಿ ಎಲ್ಲಾ ದೃಷ್ಟಿಯಲ್ಲೂ ಬಲಿಷ್ಠವಾದ ಬಹುರಾಷ್ಟ್ರೀಯ ಕಂಪನಿಗಳು ಭಾರತದ ಔದ್ಯೋಗಿಕ ಕ್ಷೇತ್ರವನ್ನು ಪ್ರವೇಶಿಸುವುದರಿಂದ, ಭಾರತೀಯ ಮಾರುಕಟ್ಟೆಯಲ್ಲಿ ವಿದೇಶಿ ವಸ್ತುಗಳು ಕಡಿಮೆ ಬೆಲೆಯಲ್ಲಿ ದೊರೆಯುವುದರಿಂದ ಭಾರತೀಯ ಕೈಗಾರಿಕೆಗಳು ಅವುಗಳಿಗೆ ಸಮರ್ಥ ವಾದ ಪೈಪೋಟಿಯನ್ನು ನೀಡಲು ಸಾಧ್ಯವಾಗದೆ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ನಶಿಸಿ ಹೋಗಬಹುದು. ಅದರಲ್ಲೂ ಭಾರತೀಯ ಸಣ್ಣ ಮತ್ತು ಗೃಹಕೈಗಾರಿಕೆಗಳು ಈಗಾಗಲೇ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿವೆ.

**ಉದ್ಯೋಗ**

ಜಾಗತೀಕರಣದಿಂದ ಉದ್ಯೋಗ ಸೃಷ್ಟಿಯಾಗುತ್ತದೆ ಎಂಬ ಊಹೆ ಸುಳ್ಳಾಗುತ್ತಿದೆ. ಬಹುರಾಷ್ಟ್ರೀಯ ಕಂಪನಿಗಳು ವೈಜ್ಞಾನಿಕ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವುದರಿಂದ ಹಾಗೂ ಕಂಪ್ಯೂಟರ್‌ಗಳ ಬಳಕೆ ಹೆಚ್ಚಿರುವುದರಿಂದ ಉದ್ಯೋಗದ ಪ್ರಮಾಣ ಕಡಿಮೆ ಯಾಗಿದೆ. ಉದ್ಯೋಗ ದೊರೆತರೂ ವಿಶ್ವವಿದ್ಯಾನಿಲಯ ಮಟ್ಟದ ಉನ್ನತ ಶಿಕ್ಷಣ ಪಡೆದವರಿಗೆ, ಅವರನ್ನೂ ಕೂಡ ನಿರ್ದಿಷ್ಟ ಅವಧಿಗೆ ನೇಮಕ ಮಾಡಿಕೊಳ್ಳಲಾಗುತ್ತದೆ. ಹಾಗೂ ಯಾವಾಗ ಬೇಕಾದರೂ ತೆಗೆದು ಹಾಕಬಹುದಾಗಿದೆ. "ಆಧುನಿಕ ಕೈಗಾರಿಕೆ ಉದ್ಯೋಗ ಗಳಿಲ್ಲದ ಆರ್ಥಿಕ ಬೆಳವಣಿಗೆಯನ್ನು ಉಂಟುಮಾಡುತ್ತದೆ" ಎಂಬ ಡಾ. ಎಂ.ಎಸ್. ಸ್ವಾಮಿನಾಥನ್‌ರ ಹೇಳಿಕೆ ಅಕ್ಷರಶಃ ನಿಜ ಎಂಬುದನ್ನು ಮನಗಾಣಬಹುದಾಗಿದೆ.

**ರಾಜ್ಯದ ಸ್ವಾಯತ್ತತೆ**

ಸ್ವತಂತ್ರವಾದ ರಾಜ್ಯ ಆಂತರಿಕ ಮತ್ತು ಬಾಹ್ಯ ವಿಚಾರಗಳಲ್ಲಿ ತನ್ನದೇ ಆದ ಅಸ್ತಿತ್ವ ಮತ್ತು ಸ್ವಾಯತ್ತತೆಯನ್ನು ಹೊಂದಿರುತ್ತದೆ. ರಾಜ್ಯದ ಎಲ್ಲೆಯೊಳಗಿರುವ ವ್ಯಕ್ತಿ ಮತ್ತು ಸಂಘ ಸಂಸ್ಥೆಗಳ ಮೇಲೆ ರಾಜ್ಯಕ್ಕೆ ಅಧಿಕಾರವಿದೆ. ಆದರೆ ದೇಶದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಸ್ಥಾಪನೆಯಿಂದ, ಆ ಕಂಪನಿಗಳ ಮೇಲೆ, ಆ ಕಂಪನಿಯ ವಹಿವಾಟಿನ ಮೇಲೆ ಮತ್ತು ಉದ್ಯೋಗಿಗಳ ಮೇಲೆ ನಿಯಂತ್ರಣ ಹೇರಲು ಸಾಧ್ಯವಾಗದೆ ಇರುವ ಪರಿಣಾಮದಿಂದ ರಾಜ್ಯದ ಸ್ವಾಯತ್ತತೆ ಮೇಲೆ ಗಂಭೀರ ಪರಿಣಾಮ ಬೀರುವ ಸಾಧ್ಯತೆ ಇದೆ.

## ಪರಮಾಧಿಕಾರ

ಜಾಗತೀಕರಣ ಕಾರ್ಯವಿಧಾನದಿಂದ ರಾಷ್ಟ್ರದ ಪರಮಾಧಿಕಾರದ ಮೇಲೆ ಅನೇಕ ರೀತಿಯ ಪರಿಣಾಮಗಳುಂಟಾಗುತ್ತವೆ. ಆರ್ಥಿಕ ಕಾನೂನುಗಳನ್ನು ಸಾಮ್ರಾಜ್ಯಶಾಹಿ ನಿರ್ದೇಶನಗಳಿಗೆ ಅನುಗುಣವಾಗಿ ಪುನರ್ ರಚಿಸುವ ಅಥವಾ ಬದಲಾಯಿಸುವ ಸಾಧ್ಯತೆಯಿರುತ್ತದೆ. ಒಕ್ಕೂಟ ವ್ಯವಸ್ಥೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಸಾಮ್ರಾಜ್ಯಶಾಹಿ ನಿರ್ದೇಶನಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ದೇಶದ ಆರ್ಥಿಕ ನೀತಿಗಳು ಸಾಮ್ರಾಜ್ಯಶಾಹಿ ರಾಷ್ಟ್ರಗಳ ನಿಯಂತ್ರಣಕ್ಕೆ ಒಳಪಡುತ್ತವೆ. ಉದಾಹರಣೆಗೆ ಭಾರತೀಯ ಕೃಷಿ ನೀತಿ, ಔದ್ಯೋಗಿಕ ನೀತಿಗಳು ವಿಶ್ವಬ್ಯಾಂಕ್‌ನ ನಿರ್ದೇಶನಕ್ಕನುಸಾರವಾಗಿ ಬದಲಾಗುತ್ತಿರುವುದು.

ಹೀಗೆ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಭಾರತದ ಪ್ರತಿಯೊಂದು ಕ್ಷೇತ್ರದ ಮೇಲೂ ತನ್ನದೇ ಆದ ಪರಿಣಾಮವನ್ನು ಬೀರುತ್ತಿದೆ.

## ಸಾರಾಂಶ

ಈ ಅಧ್ಯಾಯದಲ್ಲಿ ಪ್ರಜಾಪ್ರಭುತ್ವದ ಹುಟ್ಟು ಬೆಳವಣಿಗೆ ಮತ್ತು ಪ್ರಸ್ತುತ ಸ್ಥಿತಿಗತಿಯ ಬಗ್ಗೆ ಪ್ರಸ್ತಾಪಿಸಲಾಗಿದೆ. ಮೊದಲಿಗೆ ಗ್ರೀಕ್ ಮತ್ತು ರೋಮನ್ ಸಾಮ್ರಾಜ್ಯಗಳಲ್ಲಿ ಹುಟ್ಟಿದ ಪ್ರತ್ಯಕ್ಷ ಪ್ರಭುತ್ವ, ಮಧ್ಯಯುಗದಲ್ಲಿ ಉದಾರತಾ ಪ್ರಜಾಪ್ರಭುತ್ವ ವಿಸ್ತರಿಸುವ ಮೂಲಕ ಐರೋಪ್ಯ ರಾಷ್ಟ್ರಗಳಲ್ಲಿ ಆ ರಾಷ್ಟ್ರಗಳ ರಾಜಕೀಯ ಚಿಂತಕರ ಮೂಲಕ ವ್ಯವಸ್ಥಿತವಾಗಿ ಪ್ರಸ್ತಾಪಿಸಲ್ಪಟ್ಟು ಕ್ರಾಂತಿಗಳ ಮೂಲಕ ಸರ್ಕಾರ ಪದ್ಧತಿಯಾಗಿ ಅಸ್ತಿತ್ವಕ್ಕೆ ಬಂದಿತು. ಆನಂತರ ಎರಡನೇ ಜಾಗತೀಕ ಯುದ್ಧದ ತರುವಾಯ ವಸಾಹತುಶಾಹಿ ನೀತಿಯ ಕೊನೆಯೊಂದಿಗೆ ಏಷ್ಯಾ ಮತ್ತು ಆಫ್ರಿಕಾ ರಾಷ್ಟ್ರಗಳಲ್ಲೂ ಪ್ರಜಾಪ್ರಭುತ್ವ ಅಸ್ತಿತ್ವಕ್ಕೆ ಬಂದಿದೆ. ಇಂದು ಸರ್ಕಾರ ಪದ್ಧತಿಯೆಂದರೆ ಪ್ರಜಾಪ್ರಭುತ್ವ ಪದ್ಧತಿ ಎನ್ನುವ ಮಾದರಿಯಲ್ಲಿ ಬೆಳೆದು ಇಂದಿನ ಯುಗವನ್ನೇ ಪ್ರಜಾಪ್ರಭುತ್ವ ಯುಗ ಎಂದು ಕರೆಯುವಷ್ಟು ಮಹತ್ವವನ್ನು ಪಡೆದುಕೊಂಡಿದೆ. ಪ್ರಜಾಪ್ರಭುತ್ವದ ವಿಧಗಳನ್ನು ವಿವರಿಸಿದ ನಂತರ, ಪ್ರಜಾಸತ್ತಾತ್ಮಕ ವಿಕೇಂದ್ರೀಕರಣ ಪಂಚಾಯತ್‌ರಾಜ್ ವ್ಯವಸ್ಥೆಯ ಬಗ್ಗೆ ತಿಳಿಸಲಾಗಿದೆ. ಭಾರತದಲ್ಲಿ ಪಂಚಾಯತ್ ವ್ಯವಸ್ಥೆ ಬೆಳೆದುಕೊಂಡು ಬಂದಂತಹ ದಾರಿ ಹಾಗೂ ೧೯೯೨ರಲ್ಲಿ ೭೩ ಮತ್ತು ೭೪ನೇ ಸಂವಿಧಾನ ತಿದ್ದುಪಡಿಗಳ ಮೂಲಕ ಪಂಚಾಯತ್ ರಾಜ್ ವ್ಯವಸ್ಥೆಗೆ ಸಂವಿಧಾನಾತ್ಮಕ ಸ್ಥಾನಮಾನವನ್ನು ನೀಡಿರುವ ಬಗ್ಗೆ, ಮೂರು ಹಂತದ ಪಂಚಾಯಿತಿ ವ್ಯವಸ್ಥೆ ಬಗ್ಗೆ ವಿವರಣೆಯನ್ನು ನೀಡಲಾಗಿದೆ.

ಮಾನವ ಹಕ್ಕುಗಳ ಪ್ರಸ್ತಾಪವನ್ನು ಮಾಡುವುದರ ಮೂಲಕ ಮಾನವ ಹಕ್ಕುಗಳಿಗಾಗಿ ನಡೆದ ಹೋರಾಟ ಕ್ರಾಂತಿಗಳು, ಅವುಗಳು ನಡೆದು ಬಂದ ದಾರಿ ಹಾಗೂ ಡಿಸೆಂಬರ್ ೧೦, ೧೯೪೮ ರಂದು ವಿಶ್ವಸಂಸ್ಥೆಯು ಮಾಡಿದ ಮಾನವ ಹಕ್ಕುಗಳ ಜಾಗತಿಕ ಘೋಷಣೆಯನ್ನು ವಿವರಿಸಲಾಗಿದೆ. ಮಾನವ ಹಕ್ಕುಗಳನ್ನು ಪ್ರಮುಖವಾಗಿ ಎರಡು ವಿಭಾಗಗಳಲ್ಲಿ ವಿಂಗಡಿಸ ಬಹುದು. ಅವುಗಳೆಂದರೆ ಮೊದಲನೆಯದು, ರಾಜಕೀಯ ಹಾಗೂ ನಾಗರೀಕ ಹಕ್ಕುಗಳು,

ಎರಡನೆಯದು ಆರ್ಥಿಕ ಹಾಗೂ ಸಾಮಾಜಿಕ ಹಕ್ಕುಗಳು ಇವುಗಳನ್ನು ಪರಿಪಾಲನೆ ಮಾಡುವುದು ಎಲ್ಲಾ ರಾಷ್ಟ್ರಗಳ ನೈತಿಕ ಜವಾಬ್ದಾರಿಯಾಗಿದೆ. ಅದರ ಮೆಲ್ವಿಚಾರಣೆಗೆಂದೇ ವಿಶ್ವಸಂಸ್ಥೆಯು ಮಾನವ ಹಕ್ಕುಗಳ ಆಯೋಗ(United Nations Human Rights Commission)ವನ್ನು ಅಸ್ತಿತ್ವಕ್ಕೆ ತಂದಿದೆ. ಇದು ಜಗತ್ತಿನಾದ್ಯಂತ ಮಾನವ ಹಕ್ಕುಗಳನ್ನು ಜಾರಿಗೆ ತರಲು ಪ್ರಯತ್ನಿಸುತ್ತಿದೆ.

ಇಂದು ರಾಜ್ಯದ ಪಾತ್ರವು ಸಂಪೂರ್ಣವಾಗಿ ಬದಲಾಗುತ್ತಿದೆ. ಪೊಲೀಸ್ ರಾಜ್ಯ, ಆರ್ಥಿಕ ಮತ್ತು ನಿಯಂತ್ರಿತ ರಾಜ್ಯ ಮತ್ತು ಕಲ್ಯಾಣರಾಜ್ಯ ಎಂಬ ವಿಭಿನ್ನ ಪಾತ್ರಗಳನ್ನು ನಿರ್ವಹಿಸಿದೆ. ಇಂದು ಮನುಷ್ಯನ ಎಲ್ಲಾ ಅವಶ್ಯಕತೆಗಳನ್ನು ನಿರ್ವಹಿಸುವ ಸಂಸ್ಥೆಯಾಗಿ ರಾಜ್ಯ ಅಸ್ತಿತ್ವಕ್ಕೆ ಬಂದಿದೆ. ಆದರೆ ಜಾಗತೀಕರಣ ಪ್ರಭಾವದಿಂದಾಗಿ ರಾಜ್ಯ ತನ್ನ ಆ ಹಿಂದಿನ ಮಹತ್ವವನ್ನು ಕ್ರಮೇಣವಾಗಿ ಕಳೆದುಕೊಳ್ಳುತ್ತಿದೆ. ಇಂದು ಸಾರ್ವತ್ರಿಕ ಸಂಸ್ಥೆಗಳು ಮತ್ತು ಖಾಸಗಿ ಸಂಸ್ಥೆಗಳ ನಡುವೆ ಪೈಪೋಟಿ ನಡೆಯುತ್ತಿದೆ. ಆ ಪೈಪೋಟಿಯಲ್ಲಿ ಖಾಸಗಿ ಸಂಸ್ಥೆಗಳು ಹೆಚ್ಚಿನ ಸ್ಪರ್ಧೆಯನ್ನು ನೀಡುತ್ತಿವೆ. ಆ ಮೂಲಕ ಖಾಸಗಿ ಸಂಸ್ಥೆಗಳು ರಾಜ್ಯದ ಮೇಲೆ ಪ್ರಭಾವ ಬೀರಿ ತಮ್ಮ ಎಲ್ಲಾ ಅಗತ್ಯತೆಗಳನ್ನು ಈಡೇರಿಸಿಕೊಳ್ಳುವುದರ ಮೂಲಕ ಹೆಚ್ಚು ಬಲಯುತವಾಗಿ ಬೆಳೆದು ರಾಜ್ಯದ ಸಾರ್ವಭೌಮತ್ವಕ್ಕೆ ಧಕ್ಕೆಯನ್ನು ತರುತ್ತಿವೆ.

**ಪಾರಿಭಾಷಿಕ ಪದಕೋಶ**

Demos - ಜನತೆ

Kratia - ಅಧಿಕಾರ

Local Authorities - ಸ್ಥಳೀಯ ಸ್ವಯಂ ಸರ್ಕಾರಗಳು

Human Rights - ಮಾನವ ಹಕ್ಕುಗಳು

United Nations - ವಿಶ್ವಸಂಸ್ಥೆ

Charter of the United Nations - ಇದು ಹಿಟ್ಲರ್‌ನ ವಿರೋಧಿ ಬಣ (ರಷ್ಯಾ, ಅಮೆರಿಕಾ, ಬ್ರಿಟನ್, ಫ್ರಾನ್ಸ್ ಮತ್ತು ಚೈನಾ) ಎರಡನೇ ಮಹಾಯುದ್ಧದ ಕೊನೆಯಲ್ಲಿ ರಚಿಸಿದ ಬಹುಪಕ್ಷೀಯ ಅಂತರರಾಷ್ಟ್ರೀಯ ಒಪ್ಪಂದ, ಇದಕ್ಕೆ ೧೯೪೫ರ ಸ್ಯಾನ್ ಫ್ರಾನ್ಸಿಸ್ಕೊ ಸಮ್ಮೇಳನದಲ್ಲಿ ಅಂತಿಮವಾಗಿ ಒಪ್ಪಿ ಸಹಿ ಹಾಕಲಾಯಿತು.

General Agreements on Trade and Tarriff - (GATT) - ವ್ಯಾಪಾರ ಮತ್ತು ಸುಂಕದ ಮೇಲಿನ ಸಾಮಾನ್ಯ ಒಪ್ಪಂದ

Trade Related Intellectual Property Rights - (TRIPS) - ವ್ಯಾಪಾರ ಸಂಬಂಧಿ ಬೌದ್ಧಿಕ ಆಸ್ತಿಯ ಹಕ್ಕು

| | | |
|---|---|---|
| Trade Related Investment Measures - (TRIMS) | - | ವ್ಯಾಪಾರ ಸಂಬಂಧೀ ಹೂಡಿಕೆ ಕ್ರಮಗಳು |
| Liberalisation, Privatisation and Globalization - (LPG) | - | ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ |

## ಪ್ರಶ್ನೆಗಳು

### I. ಒಂದು ಅಂಕದ ಪ್ರಶ್ನೆಗಳು

೧. ಪ್ರಜಾಪ್ರಭುತ್ವ ಎಂದರೇನು?

೨. ಪ್ರಜಾಪ್ರಭುತ್ವದ ಬಗೆಗಳಾವುವು?

೩. ಹಾಬ್ಸ್‌ನ ಗ್ರಂಥದ ಹೆಸರೇನು?

೪. ಲಾಕ್‌ನ ಗ್ರಂಥದ ಹೆಸರೇನು?

೫. ಜೆ.ಜೆ. ರೋಸೋನ ಗ್ರಂಥದ ಹೆಸರೇನು?

೬. ಮಾನವ ಹಕ್ಕುಗಳು ಯಾವ ಕ್ರಾಂತಿಯಲ್ಲಿ ಘೋಷಣೆಯಾದವು?

೭. ಬಹುಜನರ ಬಹುಸುಖ ತತ್ವದ ಪ್ರತಿಪಾದಕರಾರು?

೮. ಯಾವ ದೇಶದಲ್ಲಿ ೧೬೮೮ರಲ್ಲಿ ಗ್ಲೋರಿಯಸ್ ರೆವಲ್ಯೂಷನ್ ನಡೆಯಿತು?

೯. ಅಮೆರಿಕಾದಲ್ಲಿ ಸ್ವಾತಂತ್ರ್ಯ ಕ್ರಾಂತಿ ನಡೆದದ್ದು ಯಾವಾಗ?

೧೦. ಪ್ರಜಾಸತ್ತಾತ್ಮಕ ಅಧಿಕಾರ ವಿಕೇಂದ್ರೀಕರಣ ಎಂದರೇನು?

೧೧. ಬಲವಂತರಾಯ್ ಮೆಹತಾ ಸಮಿತಿಯನ್ನು ಯಾವಾಗ ರಚಿಸಲಾಗಿತ್ತು?

೧೨. ಸಂವಿಧಾನದ ೭೩ನೇ ಮತ್ತು ೭೪ನೇ ತಿದ್ದುಪಡಿಗಳು ಯಾವ ವಿಷಯಗಳನ್ನು ಪ್ರಾಸ್ತಾಪಿಸಿವೆ?

೧೩. ಮಾನವ ಹಕ್ಕುಗಳ ಜಾಗತಿಕ ಘೋಷಣೆಯನ್ನು ಯಾವಾಗ ಮಾಡಲಾಯಿತು?

೧೪. ಮಾನವ ಹಕ್ಕುಗಳು ಎಂದರೇನು?

೧೫. ಪೊಲೀಸ್ ರಾಜ್ಯ ಎಂದರೇನು?

### II. ಎರಡು ಅಂಕಗಳ ಪ್ರಶ್ನೆಗಳು

೧. ೭೩ನೇ ಸಂವಿಧಾನ ತಿದ್ದುಪಡಿ ಪ್ರಸ್ತಾಪಿಸಿದ ಮೂರು ಹಂತದ ಸ್ಥಳೀಯ ಸರ್ಕಾರಗಳಾವುವು?

೨. ೭೪ನೇ ಸಂವಿಧಾನ ತಿದ್ದುಪಡಿ ಪ್ರಸ್ತಾಪಿಸಿರುವ ನಗರ ಸ್ಥಳೀಯ ಸರ್ಕಾರಗಳಾವುವು?

೩. ಕಲ್ಯಾಣ ರಾಜ್ಯ ಎಂದರೇನು?

೪. ಕೃಷಿ ಕ್ಷೇತ್ರದ ಮೇಲೆ ಗ್ಯಾಟ್‌ನ ಪರಿಣಾಮಗಳನ್ನು ವಿವರಿಸಿ.

೫. ಔದ್ಯೋಗಿಕ ಕ್ಷೇತ್ರದ ಮೇಲೆ ಗ್ಯಾಟ್‌ನ ಪರಿಣಾಮಗಳನ್ನು ವಿವರಿಸಿ.

೬. ರಾಜ್ಯದ ಮೇಲೆ ಗ್ಯಾಟ್‌ನ ಪರಿಣಾಮಗಳನ್ನು ವಿವರಿಸಿ.

**III. ಐದು ಅಂಕದ ಪ್ರಶ್ನೆಗಳು**

೧. ಪ್ರಜಾಪ್ರಭುತ್ವದ ಅರ್ಥ ಮತ್ತು ವಿಧಗಳನ್ನು ವಿವರಿಸಿ.

೨. ಉದಾರತಾ ಪ್ರಜಾಪ್ರಭುತ್ವದ ಪಸರಿಸುವಿಕೆಯನ್ನು ಚರ್ಚಿಸಿ.

೩. ಎರಡನೇ ಮಹಾಯುದ್ಧದ ತರುವಾಯ ಹಲವಾರು ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವದ ಬೆಳವಣಿಗೆಯನ್ನು ವಿವರಿಸಿ.

೪. ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಬಗ್ಗೆ ಒಂದು ಟಿಪ್ಪಣಿ ಬರೆಯಿರಿ.

೫. ಭಾರತದಲ್ಲಿ ಸ್ಥಳೀಯ ಸರ್ಕಾರಗಳ ಅಸ್ತಿತ್ವವನ್ನು ಚರ್ಚಿಸಿ.

೬. ಮಾನವ ಹಕ್ಕುಗಳ ಪ್ರಾಮುಖ್ಯತೆಯನ್ನು ಚರ್ಚಿಸಿ.

೭. ಬದಲಾಗುತ್ತಿರುವ ರಾಜ್ಯದ ಪಾತ್ರದ ಬಗ್ಗೆ ವಿವರಿಸಿ.

**IV. ಹತ್ತು ಅಂಕದ ಪ್ರಶ್ನೆಗಳು**

೧. ಇಂದಿನ ಯುಗವನ್ನು ಪ್ರಜಾಪ್ರಭುತ್ವಯುಗ ಎಂದು ಕರೆಯಲಾಗುತ್ತದೆ, ವಿಷದಪಡಿಸಿ.

೨. ಮಾನವ ಹಕ್ಕುಗಳ ಪ್ರಾಮುಖ್ಯತೆ ಮತ್ತು ಬಗೆಗಳನ್ನು ಚರ್ಚಿಸಿರಿ.

೩. ಬದಲಾಗುತ್ತಿರುವ ರಾಜ್ಯದ ಪಾತ್ರವನ್ನು ವಿವರಿಸಿರಿ.

೪. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳ ಅರ್ಥ ಪ್ರಾಮುಖ್ಯತೆ ಮತ್ತು ರಾಜಕೀಯ ಪರಿಣಾಮಗಳನ್ನು ವಿವರಿಸಿ.

**V. ಅಭ್ಯಾಸ ಮತ್ತು ಚಟುವಟಿಕೆಗಳು**

೧. ನಿಮ್ಮ ಗ್ರಾಮ ಪಂಚಾಯಿತಿಯಲ್ಲಿ ಪ್ರಜಾಸತ್ತಾತ್ಮಕ ಅಧಿಕಾರ ವಿಕೇಂದ್ರೀಕರಣ ವಾಗಿದೆಯಾ, ಪರಿಶೀಲಿಸಿ.

೨. ಮಾನವ ಹಕ್ಕುಗಳನ್ನು ಪಟ್ಟಿ ಮಾಡಿ.

೩. ರಾಜ್ಯದ ಮೇಲೆ ಮತ್ತು ಸ್ಥಳೀಯವಾಗಿ ನಿಮ್ಮ ಮೇಲೆ ಜಾಗತೀಕರಣ ಯಾವ ಪರಿಣಾಮ ಬೀರಿದೆ ಎಂಬುದನ್ನು ಪಟ್ಟಿಮಾಡಿ.

ಅಧ್ಯಾಯ ೪

# ಭಾರತದಲ್ಲಿ ಚುನಾವಣಾ ಪದ್ಧತಿ

## ೪.೧ ಚುನಾವಣಾ ಪದ್ಧತಿ

ಚುನಾವಣೆ ಎಂದರೆ ಪ್ರಜೆಗಳು ಮತದಾನದ ಮೂಲಕ ಪ್ರತಿನಿಧಿಗಳನ್ನು ಆಯ್ಕೆ ಮಾಡುವ ಕಾರ್ಯವೇ ಆಗಿದೆ. ಮತಗಳ ಮೂಲಕ ಶಾಸಕಾಂಗ ಪ್ರತಿನಿಧಿಗಳನ್ನು ಅಥವಾ ಸ್ಪರ್ಧಿಗಳನ್ನು ಆರಿಸುವ ಸಂವಿಧಾನಾತ್ಮಕ ರಾಜಕೀಯ ಪ್ರಕ್ರಿಯೆಯೇ ಚುನಾವಣೆಯಾಗಿದೆ. ಭಾರತದಲ್ಲಿ ಚುನಾವಣೆಗಳು ಐದು ವರ್ಷಗಳಿಗೊಮ್ಮೆ ನಡೆಯಬೇಕೆಂದು ನಿಯಮವಿದೆ. ಆದರೂ ಕೆಲ ಸಂದರ್ಭಗಳಲ್ಲಿ ಆಯ್ಕೆಯಾದ ಪಕ್ಷಗಳು ಸರ್ಕಾರ ರಚಿಸಲು ಬಹುಮತ ಸಾಬೀತು ಪಡಿಸಲು ವಿಫಲವಾದರೆ ಮಧ್ಯಂತರ ಚುನಾವಣೆ ನಡೆಯುತ್ತದೆ. ಚುನಾವಣೆಗಳು ಒಂದು ರೀತಿ ಸಾರ್ವಜನಿಕ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅಸ್ತ್ರವಾಗಿವೆ. ಪ್ರಜಾಪ್ರಭುತ್ವ ರಾಜ್ಯಗಳಲ್ಲಿ ಪ್ರಜೆಗಳಿಗೆ ಒಂದು ಉತ್ತಮ ಸುಸಂದರ್ಭವಾಗಿದೆ.

'ರೈನೋ'ರವರ ಪ್ರಕಾರ "ಚುನಾವಣೆಗಳು ಪ್ರಜೆಗಳ ಸಾರ್ವಜನಿಕ ಇಚ್ಛೆಯನ್ನು ಮುಕ್ತವಾಗಿ ವ್ಯಕ್ತಪಡಿಸುವ ಸಾಧನವಾಗಿದ್ದು ಜನತಾ ಅಭಿಪ್ರಾಯಗಳನ್ನು ಮಂಡಿಸುವ ಉನ್ನತ ವ್ಯವಸ್ಥಿತವಾಗಿ ರೂಪುಗೊಂಡಿರುವ ಸಾಧನಾ ಮಾರ್ಗವಾಗಿದೆ".

ಆರ್.ಎಚ್. ಸಾಲ್ಟೋರವರು "ಮತಕ್ಕಾಗಿ ಮಾನವರು ಕ್ರಾಂತಿ ಮಾಡಿರುತ್ತಾರೆ ಹಾಗೂ ಜೀವವನ್ನೇ ತ್ಯಾಗ ಮಾಡಿರುತ್ತಾರೆ. ಮತಾಧಿಕಾರ ಹೊಂದಿಲ್ಲದ ಪ್ರಜೆಗಳಿಗೆ ಮತವು ಎಲ್ಲಾ ಸಂಕೋಲೆಗಳಿಂದ ಮುಕ್ತಿ ಪಡೆಯುವ ಸಾಧನದಂತೆ ಕಂಡು ಬಂದಿದೆ. ಚುನಾವಣಾ ಕಾಲದಲ್ಲಂತೂ ಆತನಲ್ಲಿರುವ ಮತದಿಂದಾಗಿ ಮತದಾರನ ಬೇಡಿಕೆ ಹೆಚ್ಚಿ ಪ್ರಮುಖ ವ್ಯಕ್ತಿಯಂತೆ ಕಂಗೊಳಿಸುತ್ತಾನೆ".

ಮತದಾರರು ತಮ್ಮ ಪ್ರತಿನಿಧಿಗಳನ್ನು ನೇರವಾಗಿ ಇಲ್ಲವೇ ಪರೋಕ್ಷವಾಗಿ ಆಯ್ಕೆ ಮಾಡಿಕೊಳ್ಳಬಹುದು.

### ಅ. ಪ್ರತ್ಯಕ್ಷ ಮತ್ತು ಪರೋಕ್ಷ ಚುನಾವಣೆ

### ಪ್ರತ್ಯಕ್ಷ ಚುನಾವಣೆ

ಚುನಾವಣೆಯಲ್ಲಿ ನೇರ ಚುನಾವಣೆ ಅತ್ಯಂತ ಸರಳ ವಿಧಾನವಾಗಿದೆ. ಮತದಾರನೇ ನೇರವಾಗಿ ಮತಗಟ್ಟೆಯಲ್ಲಿ ಮತ ಚಲಾಯಿಸಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವಿಧಾನವಾಗಿದೆ. ಭಾರತದಲ್ಲಿ ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಗಳ ಪ್ರತಿನಿಧಿಗಳನ್ನು ನೇರ

ಚುನಾವಣೆಗಳ ಮೂಲಕ ಆಯ್ಕೆಮಾಡುತ್ತಾರೆ. ಯಾವ ಅಭ್ಯರ್ಥಿ ಅತೀ ಹೆಚ್ಚು ಮತಗಳಿಸುತ್ತಾನೋ ಅವರು ವಿಜಯಿಶಾಲಿಗಳಾಗುತ್ತಾರೆ.

**ಗುಣಗಳು**

ನೇರ ಚುನಾವಣೆ ವಿಧಾನವು ಈ ಕೆಳಕಂಡ ಹಲವಾರು ಗುಣಗಳನ್ನು ಹೊಂದಿದೆ ಅವುಗಳೆಂದರೆ:

**೧. ಪ್ರಜಾಸತ್ತಾತ್ಮಕವಾದುದು**

ನೇರ ಚುನಾವಣೆಯು ಪ್ರಜಾಪ್ರಭುತ್ವದ ತತ್ವಕ್ಕೆ ಅತ್ಯಂತ ಪೂರಕವಾಗಿದೆ ಮತ್ತು ಇದು ಜನತಾ ಪರಮಾಧಿಕಾರವನ್ನು ಪ್ರತಿಬಿಂಬಿಸುತ್ತದೆ. ಈ ಪದ್ಧತಿಯಲ್ಲಿ ಪ್ರಜೆಗಳು ನೇರವಾಗಿ ಚುನಾವಣೆಯಲ್ಲಿ ಭಾಗವಹಿಸಿ ಪ್ರತಿನಿಧಿಗಳನ್ನು ಆಯ್ಕೆ ಮಾಡುತ್ತಾರೆ. ಇಲ್ಲಿ ಮತದಾರರು ಎಷ್ಟು ಪ್ರಾಮುಖ್ಯತೆ ಪಡೆದಿರುತ್ತಾರೋ ಅವರನ್ನು ತನ್ನೆಡೆಗೆ ಆಕರ್ಷಿಸುವ ಅಭ್ಯರ್ಥಿಯ ಕಲೆಯು ಅಷ್ಟೇ ಮಹತ್ವದ್ದಾಗಿರುತ್ತದೆ.

**೨. ಕಡಿಮೆ ಭ್ರಷ್ಟಾಚಾರ**

ನೇರ ಚುನಾವಣಾ ಪದ್ಧತಿಯಲ್ಲಿ ಪ್ರಜೆಗಳೇ ನೇರವಾಗಿ ಪ್ರತಿನಿಧಿಗಳನ್ನು ಆಯ್ಕೆ ಮಾಡುವುದರಿಂದ ಭ್ರಷ್ಟಾಚಾರವೆಸಗುತ್ತಿರುವ ಅಭ್ಯರ್ಥಿಗಳನ್ನು ಮತದಾರರು ತಿರಸ್ಕರಿಸ ಬಹುದು.

**೩. ರಾಜಕೀಯ ಪ್ರಜ್ಞೆ**

ಇಲ್ಲಿ ಪ್ರಜೆಗಳು ಚುನಾವಣೆಯಲ್ಲಿ ನೇರವಾಗಿ ಭಾಗವಹಿಸುವುದರಿಂದ ಪ್ರಜೆಗಳು ಸಾರ್ವಜನಿಕ ವ್ಯವಹಾರಗಳಲ್ಲಿ ಹೆಚ್ಚಿನ ಆಸಕ್ತಿ ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಪ್ರಜೆಗಳು ಮತ ಚಲಾಯಿಸುವ ಮುನ್ನ ಅಭ್ಯರ್ಥಿಯ ಯೋಗ್ಯತೆ, ವರ್ಚಸ್ಸು ಹಾಗೂ ಪಕ್ಷದ ಧ್ಯೇಯೋದ್ದೇಶಗಳನ್ನು ಗಮನಿಸುತ್ತಾರೆ. ಇದರಿಂದ ಜನಸಾಮಾನ್ಯರಿಗೂ ಸಹ ರಾಜಕೀಯ ಪ್ರಜ್ಞೆ ಅಧಿಕವಾಗುತ್ತದೆ.

**೪. ರಾಜಕೀಯ ಶಿಕ್ಷಣ**

ನೇರ ಚುನಾವಣಾ ವಿಧಾನದಿಂದ ಜನರಲ್ಲಿ ಮೌಲ್ಯಯುತ ರಾಜಕೀಯಶಿಕ್ಷಣ ದೊರೆಯುತ್ತದೆ. ರಾಜಕೀಯ ಪಕ್ಷಗಳು ಚುನಾವಣೆಯ ಸಂದರ್ಭದಲ್ಲಿ ತಮ್ಮ ಪಕ್ಷದ ನೀತಿ ಧ್ಯೇಯೋದ್ದೇಶಗಳ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿ ಜನರಿಗೆ ವಿವರಿಸುತ್ತವೆ ಮತ್ತು ಉಲ್ಬಣವಾಗಿರುವ ಸಮಸ್ಯೆಗಳ ಬಗ್ಗೆ ಕಂಡುಹಿಡಿದಿರುವ ಪರಿಹಾರೋಪಾಯವನ್ನು ಸೂಚಿಸು ತ್ತವೆ. ಇದರಿಂದ ಪ್ರಜೆಗಳಿಗೆ ರಾಜ್ಯದ ಆಗು ಹೋಗುಗಳು ತಿಳಿಯುತ್ತವೆ. ಹೀಗೆ ಪ್ರಜೆಗಳು ತಮ್ಮ ಮತಾಧಿಕಾರದಿಂದ ರಾಜಕೀಯ ಶಿಕ್ಷಣ ಪಡೆಯುತ್ತಾರೆ.

**೫. ಜವಾಬ್ದಾರಿಯುತ ಸರಕಾರ**

ನೇರ ಚುನಾವಣಾ ಪದ್ಧತಿಯಿಂದಾಗಿ ಪ್ರತಿನಿಧಿಗಳಿಗೂ ಹಾಗೂ ಪ್ರಜೆಗಳಿಗೂ ನೇರ

ಸಂಪರ್ಕವಿರುತ್ತದೆ ಹಾಗೂ ಸರ್ಕಾರ ಯಾವ ರೀತಿ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಪ್ರಜೆಗಳು ಸದಾ ಗಮನಿಸುತ್ತಿರುತ್ತಾರೆ. ಆದ ಕಾರಣ ಸರ್ಕಾರವು ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸುತ್ತದೆ.

**ದೋಷಗಳು**

ನೇರ ಚುನಾವಣಾ ವಿಧಾನವು ಕೆಲವೊಂದು ದೋಷಗಳನ್ನು ಒಳಗೊಂಡಿದೆ. ಅವುಗಳೆಂದರೆ

**೧. ಅನರ್ಹ ಪ್ರತಿನಿಧಿಗಳು**

ಮತಾಧಿಕಾರವನ್ನು ಹೊಂದಿರುವ ಮತದಾರ ವರ್ಗದಲ್ಲಿ ಎಲ್ಲರೂ ಅಕ್ಷರಸ್ಥರೂ ಹಾಗೂ ಜ್ಞಾನಿಗಳೂ ಆಗಿರುವುದಿಲ್ಲ. ಬದಲಿಗೆ ಅಜ್ಞಾನಿಗಳು ಮತ್ತು ಕಡಿಮೆ ರಾಜಕೀಯ ಜ್ಞಾನವನ್ನು ಹೊಂದಿರುತ್ತಾರೆ. ಇಂತಹ ಮತದಾರರು ಅರ್ಹರಾದ ಮತ್ತು ಯೋಗ್ಯರಾದ ಪ್ರತಿನಿಧಿಗಳನ್ನು ಆಯ್ಕೆ ಮಾಡುವಲ್ಲಿ ವಿಫಲರಾಗುತ್ತಾರೆ. ಇದರಿಂದ ಆಡಳಿತ ಅದಕ್ಷವಾಗುತ್ತದೆ.

**೨. ಗುಂಪುಗಾರಿಕೆ**

ಪ್ರತಿನಿಧಿಗಳು ಜನರಿಂದ ನೇರವಾಗಿ ಆಯ್ಕೆಯಾಗುವುದರಿಂದ ಮತದಾರರನ್ನು ಭಾವನಾತ್ಮಕವಾಗಿ ಪ್ರತಿನಿಧಿಗಳು ಹುರಿದುಂಬಿಸುತ್ತಾರೆ. ಇದರಿಂದ ಯಾವುದೇ ರೀತಿಯ ಗುಂಪುಗಾರಿಕೆ (ಜಾತಿ, ಪಕ್ಷ, ಧರ್ಮ, ಅಭ್ಯರ್ಥಿ) ಏರ್ಪಡಬಹುದು. ಇದರಿಂದ ಉತ್ತಮ ಆಡಳಿತ ಸಾಧ್ಯವಿಲ್ಲ.

**೩. ಅಪಪ್ರಚಾರ**

ನೇರ ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ಪಕ್ಷಗಳು ಮತಗಳನ್ನು ಹೆಚ್ಚು ಪಡೆಯುವ ಉದ್ದೇಶದಿಂದ ರಾಜ್ಯದ ವ್ಯವಹಾರಗಳ ಬಗ್ಗೆ ತಪ್ಪು ಮಾಹಿತಿಯನ್ನು ನೀಡುವ ಸಾಧ್ಯತೆ ಇರುತ್ತದೆ. ಇದರಿಂದ ಜನರಲ್ಲಿ ತಪ್ಪಾದ ಅಭಿಪ್ರಾಯ ಹೊರ ಹೊಮ್ಮಬಹುದು.

**೪. ಕಾನೂನು ಸುವ್ಯವಸ್ಥೆಯ ಸಮಸ್ಯೆ**

ರಾಜಕೀಯ ಪಕ್ಷಗಳು ಚುನಾವಣೆಯಲ್ಲಿ ಗೆಲ್ಲುವ ಮನೋಭಿಲಾಷೆಯಿಂದ ಸಂವಿಧಾನ ಬಾಹಿರ, ಅಕೃತ್ಯ ಕಾರ್ಯಗಳಲ್ಲಿ ತೊಡಗುತ್ತಾರೆ. ಸಮಾಜಘಾತುಕ ವರ್ಗವು ಮತದಾರರ ಮೇಲೆ ನಿಯಂತ್ರಣ ಮಾಡುತ್ತದೆ ಮತ್ತು ಅಭ್ಯರ್ಥಿಗಳು ಒಬ್ಬರ ಮೇಲೊಬ್ಬರು ದೋಷಾ ರೋಪಣೆ ಮಾಡುತ್ತಾ ಚುನಾವಣಾ ಪ್ರಚಾರ ಮಾಡುತ್ತಾರೆ. ಇಷ್ಟೆಲ್ಲಾ ವಿದ್ಯಮಾನಗಳು ಆಗಲು ಕಾರಣ ಬಹುತೇಕ ಮತದಾರರು ಅನಕ್ಷರಸ್ಥರೇ ಆಗಿರುತ್ತಾರೆ. ಅವರಲ್ಲಿ ರಾಜಕೀಯ ಗಣನೀಯವಾಗಿ ಕಡಿಮೆ ಇರುತ್ತದೆ.

**೫. ಬುದ್ಧಿವಂತರನ್ನು ಹೊರಗಿಡುತ್ತದೆ**

ಸಮರ್ಥರು, ಉತ್ತಮ ಪ್ರಜೆಗಳು ಹಾಗೂ ವೃತ್ತಿಪರ ಅನುಭವಿಗಳು ರಾಜಕೀಯದಿಂದ ದೂರ ಉಳಿಯುತ್ತಾರೆ ಮತ್ತು ಚುನಾವಣೆಗಳಲ್ಲಿ ಸ್ಪರ್ಧಿಸಲು ಹಿಂದುಳಿಯುತ್ತಾರೆ. ಇದರಿಂದಾಗಿ ರಾಜ್ಯವು ಅಂತಹ ಮೇಧಾವಿಗಳ ಸೇವೆಯಿಂದ ವಂಚಿತಗೊಳ್ಳುತ್ತದೆ.

ಚುನಾವಣೆಯ ಸಂದರ್ಭದಲ್ಲಿ ಅಭ್ಯರ್ಥಿಗಳು ಅನುಸರಿಸುವ ಮಾರ್ಗಗಳಿಂದ ಬುದ್ಧಿ ಜೀವಿಗಳು ಬೇಸತ್ತು ರಾಜಕೀಯ ಪ್ರಕ್ರಿಯೆಯಿಂದಲೇ ಹೊರಗುಳಿಯುತ್ತಾರೆ.

**ಪರೋಕ್ಷ ಚುನಾವಣೆ**

ಪರೋಕ್ಷ ಚುನಾವಣೆ ಎಂದರೆ ಜನತೆಯು ತಮ್ಮ ಪ್ರತಿನಿಧಿಯನ್ನು ಆರಿಸಿದ ನಂತರ ಆ ಪ್ರತಿನಿಧಿಗಳೆಲ್ಲರೂ ಸೇರಿ ಅಂತಿಮವಾಗಿ ತಮ್ಮ ಪ್ರಧಾನ ನಾಯಕ ಪ್ರಾತಿನಿಧ್ಯ ವರ್ಗವನ್ನು ಚುನಾಯಿಸುತ್ತಾರೆ. ಈ ಪದ್ಧತಿಯಲ್ಲಿ ಪ್ರಜೆಗಳು ಪ್ರಾಥಮಿಕ ಮತದಾರರಾಗಿರುತ್ತಾರೆ ಹಾಗೂ ಅವರಿಂದ ಆಯ್ಕೆಗೊಂಡ ಪ್ರತಿನಿಧಿಗಳು ಮಾಧ್ಯಮಿಕ ಮತದಾರರಾಗಿರುತ್ತಾರೆ. ಈ ಮಧ್ಯಮ ವರ್ಗವು ರಾಜ್ಯದ ಉನ್ನತ ಅಧಿಕಾರಿ ಹಾಗೂ ಪ್ರತಿನಿಧಿ ವರ್ಗವನ್ನು ಆಯ್ಕೆ ಮಾಡುತ್ತದೆ.

ಉದಾಹರಣೆಗೆ ಭಾರತದಲ್ಲಿ ಪ್ರಜೆಗಳಿಂದ ನೇರವಾಗಿ ಆರಿಸಲ್ಪಟ್ಟ ಕೇಂದ್ರ ಸಂಸತ್ತಿನ ಹಾಗೂ ರಾಜ್ಯ ವಿಧಾನಸಭಾ ಸದಸ್ಯರು ಒಟ್ಟಾಗಿ ರಾಷ್ಟ್ರಪತಿಯನ್ನು ಆರಿಸುವ ವ್ಯವಸ್ಥೆಯನ್ನು ಪರೋಕ್ಷ ಚುನಾವಣೆ ಎನ್ನಬಹುದು. ರಾಷ್ಟ್ರಾಧ್ಯಕ್ಷರನ್ನು ಆಯ್ಕೆ ಮಾಡಿದ ನಂತರ ಈ ಚುನಾಯಿತ ಸಮುದಾಯ ವಿಸರ್ಜನೆಗೊಳ್ಳುತ್ತದೆ. ಮತ್ತು ಸರಳ ಬಹುಮತದಿಂದ ಆಯ್ಕೆಯಾಗದೆ ಏಕಪರಿವರ್ತನೆಯ ಮತ ಪದ್ಧತಿಯ ಆಧಾರದ ಮೇಲೆ ಆಯ್ಕೆಯಾಗುತ್ತಾರೆ.

**ಗುಣಗಳು**

ಪರೋಕ್ಷ ಚುನಾವಣಾ ವಿಧಾನವು ಹಲವಾರು ಗುಣಗಳನ್ನು ಹೊಂದಿದೆ ಅವುಗಳೆಂದರೆ:

**೧. ಉತ್ತಮ ಪ್ರತಿನಿಧಿಗಳ ಆಯ್ಕೆ**

ಪರೋಕ್ಷ ಚುನಾವಣೆಯಲ್ಲಿ ಚುನಾಯಿತ ಸಮುದಾಯವು ಬುದ್ಧಿವಂತ ಹಾಗೂ ಜ್ಞಾನಿಗಳ ಸಮೂಹವಾಗಿರುತ್ತದೆ. ಈ ಸದಸ್ಯರು ಉತ್ತಮ ಗುಣಮಟ್ಟದ ದಕ್ಷಯುತ ನಾಯಕರನ್ನು ಚುನಾಯಿಸುತ್ತಾರೆ.

**೨. ಗುಂಪುಗಾರಿಕೆಯ ರಹಿತತೆ**

ಈ ಮಾಧ್ಯಮಿಕ ಪ್ರತಿನಿಧಿಗಳು ಪ್ರಾಥಮಿಕ ಪ್ರತಿನಿಧಿಗಳಂತೆ ಭಾವನಾತ್ಮಕವಾಗಿರುವುದಿಲ್ಲ ಹಾಗೂ ಅಲ್ಲಿ ಕೇವಲ ರಾಜ್ಯದ ಹಲವಾರು ಸಾಮಾಜಿಕ, ಆರ್ಥಿಕ, ರಾಜಕೀಯ ಸಮಸ್ಯೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅದಕ್ಕೆ ಪರಿಹಾರ ಹುಡುಕುವ ಮತ್ತು ದಕ್ಷವಾಗಿ ಆಡಳಿತ ನಡೆಸುವ ಅಭ್ಯರ್ಥಿ ಅಥವಾ ನಾಯಕನನ್ನು ಆರಿಸುತ್ತಾರೆ.

**೩. ಮಿತ ವೆಚ್ಚ**

ಪರೋಕ್ಷ ಚುನಾವಣೆಗೆ ನೇರ ಚುನಾವಣೆಯಲ್ಲಿ ವೆಚ್ಚವಾಗುವ ಹಣದಷ್ಟು ಹಣ ಅಪವ್ಯಯವಾಗುವುದಿಲ್ಲ ಮತ್ತು ಈ ಚುನಾವಣೆಗಾಗಿ ಸರಕಾರವು ಹೆಚ್ಚು ಹಣ ವೆಚ್ಚ ಮಾಡುವಂತಿರುವುದಿಲ್ಲ ಹಾಗೂ ಸಾರ್ವಜನಿಕ ಹಣವೂ ದುರುಪಯೋಗವಾಗುವುದಿಲ್ಲ.

**೪. ನೇರ ಪ್ರಜಾಪ್ರಭುತ್ವ ರಾಷ್ಟ್ರಗಳಿಗೆ ಸೂಕ್ತ**

ಪ್ರಜಾಪ್ರಭುತ್ವ ಪದ್ಧತಿಯನ್ನು ಹೊಸದಾಗಿ ಅಳವಡಿಸಿಕೊಂಡ ರಾಷ್ಟ್ರಗಳಿಗೆ ಪರೋಕ್ಷ

ಚುನಾವಣೆ ಅತ್ಯಂತ ಸೂಕ್ತವಾದುದು. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ನೇರ ಚುನಾವಣೆ ಆರ್ಥಿಕ ಅಸ್ಥಿರತೆಯನ್ನುಂಟು ಮಾಡುತ್ತದೆ. ಮತ್ತು ಪ್ರಜಾಪ್ರಭುತ್ವದ ತತ್ವಗಳು ಎಲ್ಲಾ ಜನಸಾಮಾನ್ಯರಿಗೂ ಅಷ್ಟಾಗಿ ಅರಿವಿರುವುದಿಲ್ಲ. ಆದ್ದರಿಂದ ನಿಧಾನ ರಾಜಕೀಯ ಬೆಳವಣಿಗೆ ಹೊಂದುತ್ತಿರುವ ರಾಜ್ಯಗಳಿಗೆ ಪರೋಕ್ಷ ಚುನಾವಣೆಯೇ ಉತ್ತಮವಾದುದು.

**೫. ಕಾಲಾವಕಾಶ**

ಪರೋಕ್ಷ ಚುನಾವಣೆಯಲ್ಲಿ ಎರಡು ಹಂತಗಳಿರುತ್ತವೆ. ಮೊದಲನೇ ಹಂತದಲ್ಲಿ ಪ್ರತಿನಿಧಿಗಳು ಪ್ರಜೆಗಳಿಂದ ನೇರವಾಗಿ ಚುನಾಯಿತರಾಗುತ್ತಾರೆ. ಮತ್ತು ಎರಡನೇ ಹಂತದಲ್ಲಿ ಪ್ರತಿನಿಧಿಗಳ ನಾಯಕರ ಚುನಾವಣೆ ನಡೆಸುತ್ತಾರೆ. ಆದ್ದರಿಂದ ಈ ಎರಡು ಚುನಾವಣೆಯ ನಡುವೆ ಕಾಲಾವಕಾಶವಿರುತ್ತದೆ. ಆದ್ದರಿಂದ ಮತದಾರರು ಯಾವುದೇ ಭಾವೋದ್ವೇಗದಲ್ಲಿ ವರ್ತಿಸುವುದಿಲ್ಲ. ಈ ಕಾಲಾವಕಾಶದ ಅವಧಿಯು ಚುನಾವಣೆಯ ತೀವ್ರತೆಯ ಕಾವನ್ನು ತಿಳಿಗೊಳಿಸುತ್ತದೆ. ಗಿಲ್‌ಕ್ರಿಸ್ಟ್‌ರವರು ಹೇಳುವಂತೆ ಪರೋಕ್ಷ ಚುನಾವಣೆಯು ಚುನಾವಣೆಯಲ್ಲಿ ನಿಧಾನ ಪ್ರಕ್ರಿಯೆಯನ್ನು ಪರಿಚಯಿಸುತ್ತದೆ ಹಾಗೂ ಈ ವಿಳಂಬ ನೀತಿಯು ಒಂದು ರೀತಿಯಲ್ಲಿ ಚುನಾವಣಾ ಕಾವು ಕಡಿಮೆ ಮಾಡುವ ವ್ಯವಸ್ಥೆಯನ್ನು ಒದಗಿಸುತ್ತದೆ.

**ದೋಷಗಳು**

ಪರೋಕ್ಷ ಚುನಾವಣಾ ವಿಧಾನವು ಹಲವಾರು ದೋಷಗಳನ್ನು ಒಳಗೊಂಡಿದೆ. ಅವುಗಳೆಂದರೆ:

**೧. ಪ್ರಜಾಸತ್ತಾತ್ಮಕವಾದುದಲ್ಲ**

ಪರೋಕ್ಷ ಚುನಾವಣೆಯು ಪ್ರಜಾಪ್ರಭುತ್ವದ ತತ್ವಕ್ಕೆ ಅನುಸಾರವಾಗಿರುವುದಿಲ್ಲ. ಕಾರಣ ಎಲ್ಲಾ ಪ್ರಜೆಗಳು ಸರ್ಕಾರದ ಚಟುವಟಿಕೆಯಲ್ಲಿ ನೇರವಾಗಿ ಭಾಗವಹಿಸುವುದನ್ನು ಭಾಗಶಃ ತಡೆದಂತಾಗುತ್ತದೆ. ಈ ಪದ್ಧತಿಯಲ್ಲಿ ಮಧ್ಯವರ್ತಿಗಳಂತೆ ಇರುವ ಕೆಲವೇ ಪ್ರತಿನಿಧಿಗಳು ತಮಗಿಷ್ಟ ಬಂದಂತಹ ನಾಯಕರು ಆಯ್ಕೆ ಮಾಡಿಕೊಳ್ಳುತ್ತಾರೆ. ಲೈಬರ್ ರವರು ಹೇಳುವಂತೆ "ಎರಡು ಚುನಾವಣಾ ಪದ್ಧತಿಯನ್ನು ಪ್ರಾರಂಭಿಸತೊಡಗಿದರೆ ಮತಾಧಿಕಾರಕ್ಕೆ ಬೆಲೆಯಿದೆ ಎನಿಸುವುದಿಲ್ಲ". ಇಲ್ಲಿ ಜನತಾ ಪರಮಾಧಿಕಾರಕ್ಕೂ ಬೆಲೆಯಿಲ್ಲದಂತಾಗುತ್ತದೆ ಮತ್ತು ಮತಾಧಿಕಾರವು ಕೇವಲ ಅಣಕವಾಗುತ್ತದೆ.

**೨. ರಾಜಕೀಯ ನಿರ್ಲಿಪ್ತತೆ**

ಪರೋಕ್ಷ ಪದ್ಧತಿಯಿಂದಾಗಿ ಜನರಲ್ಲಿ ರಾಜಕೀಯ ಅನಾಸಕ್ತಿ ಹೆಚ್ಚಾಗುತ್ತದೆ. ಕಾರಣ ಉನ್ನತ ಮಟ್ಟದ ನಾಯಕರನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಪ್ರಾಥಮಿಕ ಮತದಾರರನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದ ಪ್ರಜೆಗಳು ರಾಜಕೀಯ ಪ್ರವೃತ್ತಿಯನ್ನು ಕಡಿಮೆಗೊಳಿಸಿಕೊಳ್ಳುತ್ತಾರೆ.

೩. ಭ್ರಷ್ಟಾಚಾರ

ಪರೋಕ್ಷ ಚುನಾವಣಾ ಪದ್ಧತಿಯಲ್ಲಿ ರಾಜಕೀಯ ಪಕ್ಷವಾಗಲಿ ಅಥವಾ ಅಭ್ಯರ್ಥಿಯಾಗಲಿ ಆಯ್ಕೆಯಾಗುವ ವರೆಗೆ ಪ್ರಚಾರ ಕಾರ್ಯ ಮಾಡುತ್ತಾರೆ. ಮತ್ತು ಚುನಾಯಿತ ಸಮುದಾಯವನ್ನು ಆಕರ್ಷಿಸಲು ಮಾತ್ರ ಅವರ ಪ್ರಚಾರ ಸೀಮಿತವಾಗಿರುತ್ತದೆ. ಇದರ ನಡುವೆ ಪ್ರಜೆಗಳೂ ಸಹ ರಾಜಕೀಯ ವ್ಯವಹಾರದಲ್ಲಿ ನಿರ್ಲಿಪ್ತತೆಯನ್ನು ಹೊಂದಿರುತ್ತಾರೆ. ಕಾರಣ ಮೊದಲ ಹಂತದ ಮತದಾನದ ನಂತರ ಅವರನ್ನು ಚುನಾವಣಾ ಪ್ರಕ್ರಿಯೆಯಿಂದ ಹೊರಗಿಡಲಾಗುತ್ತದೆ ಮತ್ತು ಪರೋಕ್ಷ ಚುನಾವಣಾ ಪದ್ಧತಿ ಹೆಚ್ಚು ತಾಂತ್ರಿಕವೂ ಸಂಕೀರ್ಣವೂ ಆಗಿರುತ್ತದೆ. ಇದು ಜನ ಸಾಮಾನ್ಯರಿಗೆ ತಿಳಿಯುವಂತಿರುವುದಿಲ್ಲ. ಆದ್ದರಿಂದ ಶಿಕ್ಷಣ ಕುಂಠಿತವಾಗುತ್ತದೆ.

೪. ಜವಾಬ್ದಾರಿ ರಹಿತ ಸರ್ಕಾರ

ಪರೋಕ್ಷ ಚುನಾವಣಾ ಪದ್ಧತಿಯಲ್ಲಿ ಪ್ರಜೆಗಳಿಗೂ ಪ್ರತಿನಿಧಿಗಳಿಗೂ ಸಂಬಂಧವೇ ತಪ್ಪಿಹೋಗುತ್ತದೆ. ಉನ್ನತ ಹುದ್ದೆಗಳಿಗೆ ಸ್ಥಾನಗಳಿಗೆ ಆರಿಸಲಾದ ಅಭ್ಯರ್ಥಿಗಳು ತಮ್ಮನ್ನು ನೇರವಾಗಿ ಆರಿಸದ ಪ್ರಜೆಗಳಿಗೆ, ಜವಾಬ್ದಾರರಾಗಿರಬೇಕಿಲ್ಲ. ಮತದಾರ, ಪ್ರತಿನಿಧಿಗಳ ನಡುವೆ ನೇರ ಸಂಬಂಧ ವಿರುವುದಿಲ್ಲ. ಪ್ರಜೆಗಳ ಅಗತ್ಯತೆ ಮತ್ತು ಅಭಿಪ್ರಾಯಗಳಿಗೆ ಪ್ರತಿನಿಧಿಗಳು ಸ್ಪಂಧಿಸುವುದಿಲ್ಲ. ಪರಿಣಾಮವಾಗಿ ಅಲ್ಲಿ ಜವಾಬ್ದಾರಿ ರಹಿತ ಸರಕಾರ ಸ್ಥಾಪಿತಗೊಳ್ಳುತ್ತದೆ.

ಆ. ಸಾರ್ವತ್ರಿಕ ವಯಸ್ಕರ ಮತದಾನ

ಪ್ರಜಾಪ್ರಭುತ್ವದ ತತ್ವಗಳಲ್ಲಿ ಸಾರ್ವತ್ರಿಕ ಮತದಾನ ಪದ್ಧತಿಯೂ ಸಹ ಅತ್ಯಂತ ಪ್ರಮುಖವಾದ ತತ್ವವಾಗಿದೆ. ಪ್ರಜಾಪ್ರಭುತ್ವದಲ್ಲಿ ಉಲ್ಬಣಿಸುವ ಅತಿ ಮುಖ್ಯ ಸಮಸ್ಯೆಯೆಂದರೆ ಮತಾಧಿಕಾರವನ್ನು ಯಾರಿಗೆ ನೀಡಬೇಕೆಂಬುದೇ ಆಗಿರುತ್ತದೆ. ಇದರಲ್ಲಿ ಹಲವಾರು ಅಭಿಪ್ರಾಯವನ್ನು ಹಲವಾರು ಚಿಂತಕರು ವ್ಯಕ್ತಪಡಿಸಿದ್ದಾರೆ. ಒಂದು ಅಭಿಪ್ರಾಯದಂತೆ ಪ್ರಜೆಗಳು ಒಂದು ನಿರ್ದಿಷ್ಟ ವಯಸ್ಸು ಮೀರಿದ ನಂತರ ಯಾವುದೇ ಭೇದಭಾವವಿಲ್ಲದೆ ತಾರತಮ್ಯ ಮಾಡದೇ ಮತಾಧಿಕಾರವನ್ನು ನೀಡಬೇಕು. ಮತ್ತೊಂದು ಅಭಿಪ್ರಾಯದ ಪ್ರಕಾರ ಕೆಲವು ನಿರ್ದಿಷ್ಟ ವರ್ಗದ ಪ್ರಜೆಗಳಿಗೆ ಮಾತ್ರ ಈ ಅಧಿಕಾರವಿರಬೇಕು. ಅಂದರೆ ಮತದಾನಕ್ಕೆ ಕೆಲವು ಅರ್ಹತೆಗಳನ್ನು ನಿಗದಿಪಡಿಸಿ ಅಂತಹ ಅರ್ಹತೆ ಹೊಂದಿರುವ ಯೋಗ್ಯರಿಗೆ ಮಾತ್ರ ಮತಾಧಿಕಾರವನ್ನು ನೀಡಬೇಕು.

ಎಲ್ಲಾ ಪ್ರಜೆಗಳಿಗೂ ಒಂದು ಕನಿಷ್ಠ ವಯೋಮಿತಿಯನ್ನು ನಿಗದಿಪಡಿಸಿ ಜಾತಿ, ಬಣ್ಣ, ಧರ್ಮ, ಲಿಂಗ, ಆಸ್ತಿ, ವಿದ್ಯೆ, ಉದ್ಯೋಗ ಮುಂತಾದ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡದೆ ಪ್ರತಿಯೊಬ್ಬರಿಗೂ ಸಮಾನವಾದ ಮತದಾನದ ಹಕ್ಕನ್ನು ನೀಡುವುದೇ ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಾಗಿದೆ. ಆದರೆ ಈ ಪದ್ಧತಿಯಲ್ಲಿ ವಿದೇಶಿಯರು, ಬುದ್ಧಿಭ್ರಮಣೆ ಹೊಂದಿದವರು, ಅಪರಾಧಿಗಳು, ದಿವಾಳಿಗಳು ಮತಾಧಿಕಾರವನ್ನು ಪಡೆಯುವಂತಿಲ್ಲ. ಆಧುನಿಕ ಪ್ರಜಾಪ್ರಭುತ್ವ ರಾಷ್ಟ್ರಗಳೆಲ್ಲವೂ ಈ ಪದ್ಧತಿಯನ್ನು ಅಳವಡಿಸಿಕೊಂಡಿವೆ. ಬೇರೆ ಬೇರೆ ರಾಷ್ಟ್ರಗಳಲ್ಲಿ ಬೇರೆ ಬೇರೆ ವಯೋಮಿತಿಯನ್ನು ನಿಗದಿಪಡಿಸಲಾಗಿದೆ.

ಗುಣಗಳು : ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯು ಕೆಳಕಂಡ ಗುಣಗಳನ್ನು ಹೊಂದಿದೆ. ಅವುಗಳೆಂದರೆ

**೧. ಪ್ರಜಾಪ್ರಭುತ್ವದ ತತ್ವಗಳಿಗೆ ಪೂರಕ**

ಪ್ರಜಾಪ್ರಭುತ್ವದ ತತ್ವವಾದ ಸಮಾನತೆಗೆ ಈ ಪದ್ಧತಿಯು ಅನುಸಾರವಾಗಿದೆ ಮತ್ತು ಜನತೆಯ ಪರಮಾಧಿಕಾರ ತತ್ವಕ್ಕೂ ಬೆಂಬಲಿಸಿದೆ. ಪ್ರಜಾಪ್ರಭುತ್ವದಲ್ಲಿ ಎಲ್ಲಾ ಪ್ರಜೆಗಳು ಸರ್ಕಾರದ ಚಟುವಟಿಕೆಯಲ್ಲಿ ಭಾಗವಹಿಸಬೇಕೆಂಬ ತತ್ವವಿರುವುದರಿಂದ ವಯಸ್ಕ ಮತದಾನ ಪದ್ಧತಿ ಆಯ್ಕೆ ಪೂರಕವಾಗಿದೆ.

**೨. ರಾಷ್ಟ್ರೀಯ ಏಕತೆ**

ಸಾರ್ವತ್ರಿಕ ಮತದಾನ ಪದ್ಧತಿಯಿಂದ ರಾಷ್ಟ್ರೀಯ ಏಕತೆ ಸಾಧಿಸಲು ಸಾಧ್ಯ. ಮತಾಧಿಕಾರವು ಕೆಲವೇ ವರ್ಗಕ್ಕೆ ಸೀಮಿತವಾಗಿದ್ದರೆ ಎಲ್ಲಾ ಪ್ರಜೆಗಳು ಸರಕಾರವನ್ನು ತಮ್ಮ ಸರ್ಕಾರವೆಂಬ ಮನೋಭಾವನೆ ಹೊಂದುವುದಿಲ್ಲ. ಆದ್ದರಿಂದ ಕನಿಷ್ಠ ವಯೋಮಿತಿ ದಾಟಿದ ಎಲ್ಲಾ ವಯಸ್ಕ ಪ್ರಜೆಗಳಿಗೂ ಮತಾಧಿಕಾರ ನೀಡುವುದರಿಂದ ರಾಷ್ಟ್ರ ಮತ್ತು ರಾಜಕೀಯ ವ್ಯವಸ್ಥೆಯ ಬಗ್ಗೆ ತಮ್ಮದೇ ಎಂಬ ನಿಲುವನ್ನು ತಾಳುತ್ತಾರೆ.

**೩.ಕಾನೂನಿನ ಅನ್ವಯ**

ಈ ಪದ್ಧತಿಯಿಂದಾಗಿ ರಾಜ್ಯವು ಕಾನೂನು ರಚಿಸುವಾಗ ಎಲ್ಲಾ ವರ್ಗದ ಪ್ರಜೆಗಳಿಗೆ ಅನ್ವಯಿಸುವಂತೆ ರಚಿಸಬೇಕಾಗುತ್ತದೆ. ಬದಲಿಗೆ ಯಾವುದೇ ಒಂದು ವರ್ಗದ ಹಿತಾಸಕ್ತಿಯನ್ನು ಕಾಪಾಡಲು ಮಾತ್ರ ಕಾನೂನನ್ನು ರಚಿಸಲು ಸಾಧ್ಯವಿಲ್ಲ.

**೪. ರಾಜಕೀಯ ತರಬೇತಿ**

ಈ ಪದ್ಧತಿಯಲ್ಲಿ ಎಲ್ಲಾ ವಯಸ್ಕ ಪ್ರಜೆಗಳಿಗೂ ಮತಾಧಿಕಾರವಿರುವುದರಿಂದ ಅವರಿಗೆ ರಾಜಕೀಯ ಶಿಕ್ಷಣ ದೊರಕಿದಂತಾಗುತ್ತದೆ. ಮತದಾರರು ಮತ ಚಲಾಯಿಸುವ ಸಂದರ್ಭದಲ್ಲಿ ಪಕ್ಷದ ಗುಣ ಲೋಪದೋಷಗಳನ್ನು ಗುರುತಿಸಲು ಪ್ರಯತ್ನಿಸುತ್ತಾರೆ ಮತ್ತು ಅದು ಹಿಂದಿನ ಅವಧಿಯಲ್ಲಿ ನಿರ್ವಹಿಸಿದ ಕಾರ್ಯಕ್ಷೇತ್ರದ ವ್ಯಾಪ್ತಿಯನ್ನು ತಿಳಿದುಕೊಳ್ಳುತ್ತಾರೆ. ಮತ್ತು ಅದರ ಬಗೆಗೆ ಹೆಚ್ಚಿನ ಆಸಕ್ತಿ ವಹಿಸುತ್ತಾರೆ. ಇದರಿಂದಾಗಿ ಪ್ರಜೆಗಳಲ್ಲಿ ರಾಜಕೀಯ ಶಿಕ್ಷಣ, ತರಬೇತಿ ದೊರಕಿದಂತಾಗುತ್ತದೆ.

**೫. ಆತ್ಮ ಗೌರವ**

ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಲ್ಲಿ ಸರ್ಕಾರವನ್ನು ಎಲ್ಲಾ ಪ್ರಜೆಗಳು ಆಯ್ಕೆ ಮಾಡುವುದರಿಂದ ಮತ್ತು ಅಂತಹ ಹಕ್ಕು ಅಥವಾ ಅಧಿಕಾರ ಅವರಿಗೆ ಇರುವುದರಿಂದ ಪ್ರಜೆಗಳ ಆತ್ಮಗೌರವ ಹೆಚ್ಚುತ್ತದೆ. ಇದರಿಂದ ವ್ಯಕ್ತಿಯ ರಾಜಕೀಯ ವ್ಯಕ್ತಿತ್ವದ ಬೆಳವಣಿಗೆಯಾಗುತ್ತದೆ.

೬. ಕ್ರಾಂತಿ ರಹಿತತೆ

ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯನ್ನು ಪ್ರಜೆಗಳೇ ತಮಗೆ ಇಚ್ಛೆ ಬಂದ ಪಕ್ಷವನ್ನು ಅಧಿಕಾರಕ್ಕೆ ತರುವುದರಿಂದ ಕ್ರಾಂತಿಯಾಗುವ ಸಂಭವನೀಯತೆ ಕಡಿಮೆ ಇರುತ್ತದೆ. ಮತ್ತು ಸರ್ಕಾರದ ಮೇಲೆ ಸಂಪೂರ್ಣ ಹಿಡಿತ ಪ್ರಜೆಗಳಿಗೆ ಇರುತ್ತದೆ.

೭. ಅಲ್ಪಸಂಖ್ಯಾತರ ಹಿತರಕ್ಷಣೆ

ಈ ಪದ್ಧತಿಯಿಂದಾಗಿ ಕೇವಲ ಬಹುಸಂಖ್ಯಾತರಲ್ಲದೆ ಅಲ್ಪಸಂಖ್ಯಾತರೂ ಮತಾಧಿಕಾರ ಹೊಂದಿರುವುದರಿಂದ ಅವರ ಆಸೆ ಆಕಾಂಕ್ಷೆಗಳಿಗೂ ಮನ್ನಣೆ ದೊರೆಯುತ್ತದೆ. ರಾಜಕೀಯ ನಾಯಕರೂ ಸಹ ಅಲ್ಪಸಂಖ್ಯಾತರ ರಕ್ಷಣೆಯಲ್ಲಿ ಹಿಂಜರಿದರೆ ಚುನಾವಣೆಗಳ ಸಂದರ್ಭದಲ್ಲಿ ಮತಗಳನ್ನು ಪಡೆಯದೆ ಅಧಿಕಾರ ಪಡೆಯದಿರುವ ಸಂದರ್ಭ ಉಂಟಾಗಬಹುದು.

೮. ಸ್ತ್ರೀ ಮತಾಧಿಕಾರ

ಸಾರ್ವತ್ರಿಕ ಮತದಾನ ಪದ್ಧತಿಯ ಅತ್ಯಂತ ಪ್ರಮುಖವಾದ ಗುಣವೆಂದರೆ ಸ್ತ್ರೀಯರೂ ಸಹ ಹೊಂದಿರುವ ಮತಾಧಿಕಾರ, ಆಧುನಿಕ ಜಗತ್ತಿನಲ್ಲಿ ಸ್ತ್ರೀಯರೂ ಸಹ ಪುರುಷರಂತೆ ಸಮಾನ ಅವಕಾಸ ಹೊಂದುವ ಅಧಿಕಾರದ ಮೂಲ ಇದಾಗಿದೆ.

ದೋಷಗಳು

ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯಲ್ಲಿರುವ ಅವಗುಣಗಳನ್ನು ಹಲವಾರು ಲೇಖಕರು ಗುರುತಿಸಿದ್ದಾರೆ. ಅವುಗಳೆಂದರೆ:

೧. ಅನಕ್ಷರಸ್ಥರಿಗೆ ಮತಾಧಿಕಾರ

ರಾಜ್ಯದ ಕಲ್ಯಾಣಕ್ಕಾಗಿ ಮತವನ್ನು ಸೂಕ್ತವಾಗಿ ಬಳಸುವ ಮನೋಭಿಲಾಷೆ ಹೊಂದಿರುವ ಸುಶಿಕ್ಷಿತರಿಗೆ ಮಾತ್ರ ಮತಾಧಿಕಾರವಿರಬೇಕು. ಕಾರಣ ಮತದಾನದ ದಿಕ್ಕು ನೈಸರ್ಗಿಕ ವಾದುದಲ್ಲ. ಇದೊಂದು ವಿಶೇಷ ಸವಲತ್ತಾಗಿದೆ. ಜೆ.ಎಸ್. ಮಿಲ್ ರವರ ಪ್ರಕಾರ ಓದಲು ಬಾರದವನು ಹಾಗೂ ಕನಿಷ್ಠ ಲೆಕ್ಕವೂ ತಿಳುವಳಿಕೆಯಿಲ್ಲದಿರುವವನು ಮತಾಧಿಕಾರದ ಚಲಾವಣೆಯಲ್ಲಿ ಭಾಗವಹಿಸಲು ಅನರ್ಹನಾಗಿರುತ್ತಾನೆ.

೨. ಅದಕ್ಷ ಸರಕಾರ

ವಯಸ್ಕ ಮತದಾನ ಪದ್ಧತಿಯಲ್ಲಿ ಎಲ್ಲಾ ಪ್ರಜೆಗಳೂ ಮತಾಧಿಕಾರ ಹೊಂದಿರುವುದರಿಂದ ಅನಕ್ಷರಸ್ಥರೂ ತಮಗೆ ತಿಳಿಯದಂತೆ ಅದಕ್ಷ ಅಭ್ಯರ್ಥಿಗಳಿಗೆ ಮತ ಚಲಾಯಿಸುತ್ತಾರೆ. ಆದರೆ ಇಂತಹ ಅಭ್ಯರ್ಥಿಗಳು ಸೇರಿಕೊಂಡು ಸರ್ಕಾರ ರಚಿಸುವಾಗ ದಕ್ಷತೆಗೆ ಒತ್ತುನೀಡದೆ ಅದಕ್ಷತೆಗೆ ಮಾರು ಹೋಗುತ್ತಾರೆ.

೩. ತೆರಿಗೆದಾರರಿಗೆ ಅನ್ಯಾಯ

ಕೆಲವು ಲೇಖಕರ ಪ್ರಕಾರ ಮತಾಧಿಕಾರವು ಆಸ್ತಿಯ ಆಧಾರವಾಗಿರಬೇಕು. ಮತದಾನದ ಹಕ್ಕನ್ನು ತೆರಿಗೆ ಪಾವತಿಸುವ ನಾಗರೀಕರಿಗೆ ಮಾತ್ರ ನೀಡಬೇಕು. ಇದರಿಂದ ಅವರು ಉತ್ತಮ

ಸರ್ಕಾರದ ರಚನೆಗೆ ಸಹಕಾರಿಯಾಗುತ್ತಾರೆ. ಯಾರು ಯೋಗ್ಯರು, ಅಯೋಗ್ಯರು ಎಂದು ಪರಿಗಣಿಸಿ ಮತ ಚಲಾಯಿಸುತ್ತಾರೆ.

೪. ಎಲ್ಲ ನಾಗರಿಕರೂ ಸಮಾನರಲ್ಲ

ಎಲ್ಲ ನಾಗರೀಕರೂ ಸಮಾನರಲ್ಲ, ಎಲ್ಲರೂ ನಿಸರ್ಗದತ್ತವಾಗಿ ಕೆಲವು ಮೂಲಭೂತ ವ್ಯತ್ಯಾಸವನ್ನು ಹೊಂದಿರುತ್ತಾರೆ. ಕೆಲವರು ಜ್ಞಾನಿಗಳು, ಬುದ್ಧಿವಂತರೂ ಆಗಿದ್ದಾರೆ ಕೆಲವರು ಅದಕ್ಕೆ ವ್ಯತಿರಿಕ್ತವಾಗಿರುತ್ತಾರೆ. ಇಂತಹ ಅಜ್ಞಾನಿಗಳು ಮತಚಲಾಯಿಸುವುದರಿಂದ ಉತ್ತಮ ರಾಜಕೀಯ ವ್ಯವಸ್ಥೆ ಸ್ಥಾಪನೆಗೊಳ್ಳುವುದು ಅನುಮಾನಾಸ್ಪದವಾಗುತ್ತದೆ.

೫. ಜವಾಬ್ದಾರಿ

ಮತಾಧಿಕಾರವೆಂಬುದು ಕೇವಲ ಜವಾಬ್ದಾರಿಯೇ ಹೊರತು ಹಕ್ಕಲ್ಲ. ಉತ್ತಮ ಸರ್ಕಾರವನ್ನು ಆರಿಸುವುದು ಪ್ರಜೆಗಳ ಜವಾಬ್ದಾರಿಯಾಗಿರುತ್ತದೆ. ಹಕ್ಕುಗಳಿಗಿಂತ ಜವಾಬ್ದಾರಿ ಅಧಿಕವಾಗಿದ್ದರೆ ಪ್ರಜೆಗಳು ನಾಗರೀಕರಂತೆ ವರ್ತಿಸುತ್ತಾರೆ. ಆದರೆ ವಾಸ್ತವಿಕವಾಗಿ ಮತದಾನ ವನ್ನು ಯಾವ ವ್ಯಕ್ತಿಯೂ ಸಹ ಜವಾಬ್ದಾರಿ ಎಂದು ಭಾವಿಸದೆ ಅದನ್ನು ಹಕ್ಕು ಎಂದು ಭಾವಿಸಿ ತಪ್ಪುದಾರಿಗಿಳಿಯುವ ಸಂಭವ ಹೆಚ್ಚಿರುತ್ತದೆ.

೬. ಭ್ರಷ್ಟಾಚಾರಕ್ಕೆ ದಾರಿ

ವಯಸ್ಕ ಮತದಾನ ಪದ್ಧತಿಯಿಂದ ಭ್ರಷ್ಟಾಚಾರಕ್ಕೆ ಸುಗಮ ದಾರಿ ದೊರಕಿದಂತಾಗುತ್ತದೆ. ಕಾರಣ ಹಿಂದುಳಿದ ರಾಜ್ಯಗಳಲ್ಲಿ ಪ್ರಜೆಗಳು ಬಹುತೇಕ ಅಶಿಕ್ಷಿತರು, ಬಡವರೇ ಆಗಿರುತ್ತಾರೆ.

೭. ಸಂಪ್ರದಾಯವಾದಿಗಳು

ಸರ್ ಹೆನ್ರಿಮೈನ್‌ರವರು ಹೇಳುವಂತೆ "ಸಾರ್ವತ್ರಿಕ ಮತಧಿಕಾರವು ಪ್ರಗತಿಯನ್ನು ಕೊನೆಗಾಣಿಸುತ್ತದೆ. ಏಕೆಂದರೆ ಶ್ರೀ ಸಾಮಾನ್ಯರು ಅಧಿಕವಾಗಿ ಸಂಪ್ರದಾಯವಾದಿಗಳಾಗಿದ್ದು ಜಾರಿಯಲ್ಲಿರುವ ಅನಿಷ್ಟಗಳನ್ನು ತೊಡೆದುಹಾಕಿ ಪ್ರಗತಿಪರ ಯೋಜನೆಗಳನ್ನು ರೂಪಿಸುವಲ್ಲಿ ನಿರಾಸಕ್ತಿ ವ್ಯಕ್ತಪಡಿಸುವ ಸಾಧ್ಯತೆ ಇರುತ್ತದೆ".

೩. ಚುನಾವಣಾ ಆಯೋಗ ಮತ್ತು ಚುನಾವಣಾ ಪ್ರಕ್ರಿಯೆ

ಯಾವುದೇ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಅದು ಆ ರಾಷ್ಟ್ರ ದಲ್ಲಿರುವಂತ ಚುನಾವಣಾ ವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ಚುನಾವಣಾ ಪದ್ಧತಿಯನ್ನು ಅಳವಡಿಸಿಕೊಂಡಿರುತ್ತದೆ. ಭಾರತವೂ ಸಹ ತನ್ನದೇ ಆದ ಚುನಾವಣಾ ಆಯೋಗವನ್ನು ರಚಿಸಿಕೊಂಡು ಚುನಾವಣೆಗಳ್ನು ನಡೆಸಲು ಅವಕಾಶ ಮಾಡಿಕೊಂಡಿದೆ.

ಆಯೋಗದ ರಚನೆ

ನಮ್ಮ ಸಂವಿಧಾನದ ೧೫ನೇ ಭಾಗದಲ್ಲಿ ೩೨೪ನೇ ವಿಧಿಯು ಚುನಾವಣಾ ಆಯೋಗ, ಮುಖ್ಯ ಚುನಾವಣಾ ಅಧಿಕಾರಿ ಮತ್ತು ಚುನಾವಣಾಧಿಕಾರಿಗಳನ್ನು ರಾಷ್ಟ್ರಾಧ್ಯಕ್ಷರು ನೇಮಕ

ಮಾಡಬೇಕೆಂದು ಉಲ್ಲೇಖಿಸಲಾಗಿದೆ. ೧೯೮೯ರ ವರೆಗೂ ಚುನಾವಣಾ ಆಯೋಗವು ಏಕ ಸದಸ್ಯ ಆಯೋಗವಾಗಿಯೇ ಕಾರ್ಯನಿರ್ವಹಿಸುತ್ತಿತ್ತು. ಆದರೆ ೧೯೮೯ ರಲ್ಲಿ ಪ್ರಥಮ ಬಾರಿಗೆ ಕೇಂದ್ರ ಸರ್ಕಾರ ಎಸ್.ಎಸ್. ದನೋವಾ ಮತ್ತು ವಿ.ಎಸ್. ಸಿಗೇಲ್ ಎಂಬುವವರನ್ನು ಚುನಾವಣಾಧಿಕಾರಿಗಳಾಗಿ ನೇಮಕ ಮಾಡಿತು. ೧೯೯೧ ರಲ್ಲಿ ಸುಪ್ರೀಂ ಕೋರ್ಟ್ ಸಹ ಬಹು ಸದಸ್ಯ ಆಯೋಗದ ಅವಶ್ಯಕತೆಯನ್ನು ಸಮ್ಮತಿಸಿತು.

## ಚುನಾವಣಾಧಿಕಾರಿಗಳ ನೇಮಕ ಮತ್ತು ಅವಧಿ

ಸಂವಿಧಾನದ ೩೨೪ನೇ ವಿಧಿಯ ಪ್ರಕಾರ ಸಂಸತ್ತು ಅಂಗೀಕರಿಸಿದ ಕಾನೂನಿನನ್ವಯ ಮುಖ್ಯ ಚುನಾವಣಾಧಿಕಾರಿ ಹಾಗೂ ಉಪಚುನಾವಣಾಧಿಕಾರಿಗಳನ್ನು ರಾಷ್ಟ್ರಾಧ್ಯಕ್ಷ ನೇಮಿಸುತ್ತಾನೆ. ಇವರ ಅಧಿಕಾರವಧಿ ಆರು ವರ್ಷ. ಈ ಅವಧಿಗೆ ಮುಂಚಿತವಾಗಿ ೬೫ ವರ್ಷ ವಯಸ್ಸಾದರೆ ಆಗಲೇ ನಿವೃತ್ತಿಯಾಗಬೇಕು. ಇವರ ಜೊತೆ ಅಗತ್ಯವಿದ್ದರೆ ಪ್ರಾದೇಶಿಕ ಚುನಾವಣಾ ಅಧಿಕಾರಿಗಳನ್ನು ಸಹ ರಾಷ್ಟ್ರಾಧ್ಯಕ್ಷರು ನೇಮಿಸಬಹುದು.

## ಪದಚ್ಯುತಿ

ಚುನಾವಣಾಧಿಕಾರಿಗಳನ್ನು ಸುಲಭ ಸಾಧ್ಯವಾಗಿ ಪದಚ್ಯುತಿ ಮಾಡಲು ಸಾಧ್ಯವಿಲ್ಲ. ಅದಕ್ಕೆ ಕೆಲವು ನಿಯಮಾವಳಿಗಳಿದ್ದು ಅವುಗಳ ಪ್ರಕಾರ ಮಾತ್ರ ಪದಚ್ಯುತಿಗೊಳಿಸಬಹುದಾಗಿದೆ. ಆ ನಿಯಮಾವಳಿಗಳೆಂದರೆ:

೧. ಮುಖ್ಯ ಚುನಾವಣಾಧಿಕಾರಿಯನ್ನು ಸುಪ್ರೀಂಕೋರ್ಟ್‌ನ ನ್ಯಾಯಾಧೀಶರನ್ನು ಪದಚ್ಯುತಿಗೊಳಿಸಲು ಅನುಸರಿಸುವ ವಿಧಾನದಂತೆ ಪದಚ್ಯುತಿಗೊಳಿಸಬಹುದು ಎಂದು ಸಂವಿಧಾನದ ೩೨೪ನೇ ವಿಧಿಯ ೫ನೇ ಉಪವಿಧಿಯಲ್ಲಿ ಉಲ್ಲೇಖಿಸಲಾಗಿದೆ.
೨. ಇತರ ಚುನಾವಣಾಧಿಕಾರಿಗಳನ್ನು ಹಾಗೂ ಪ್ರಾದೇಶಿಕ ಚುನಾವಣಾಧಿಕಾರಿಗಳನ್ನು, ಮುಖ್ಯ ಚುನಾವಣಾಧಿಕಾರಿಯವರ ಶಿಫಾರಸಿನ ಮೇರೆಗೆ ವಜಾ ಮಾಡಲು ಅವಕಾಶವಿದೆ.

ಹೀಗೆ ಈ ನಿಯಮಾವಳಿಗಳ ಅಡಿಯಲ್ಲಿ ಚುನಾವಣಾಧಿಕಾರಿಗಳನ್ನು ಅವರ ಅವಧಿಗೂ ಮುನ್ನ ಪದಚ್ಯುತಿ ಮಾಡಬಹುದು. ಆದರೆ ಭಾರತದಲ್ಲಿ ಈವರೆಗೂ ಯಾರನ್ನೂ ಪದಚ್ಯುತಿ ಮಾಡಲಾಗಿಲ್ಲ.

## ಚುನಾವಣಾ ಆಯೋಗದ ಸ್ವತಂತ್ರತೆ

ಚುನಾವಣಾ ಆಯೋಗವು ಸ್ವತಂತ್ರವಾಗಿ ಹಾಗೂ ನಿರ್ಭಯವಾಗಿ ಕಾರ್ಯನಿರ್ವಹಿಸಲು ಅವಕಾಶವಿದ್ದಾಗ ಮಾತ್ರ ನಿಷ್ಪಕ್ಷಪಾತ ಚುನಾವಣೆ ನಡೆಸಲು ಸಾಧ್ಯ ಎಂಬ ದೃಷ್ಟಿಯಿಂದ ಸಂವಿಧಾನ ರಚನಾಕಾರರು ಚುನಾವಣಾ ಆಯೋಗವನ್ನು ಸ್ವತಂತ್ರ ನಿಯಂತ್ರಣ ಆಯೋಗವನ್ನಾಗಿ ರಚಿಸಿದ್ದಾರೆ. ಇದಕ್ಕಾಗಿ ಕೆಲವು ನಿಯಮಗಳನ್ನು ಅಳವಡಿಸಲಾಗಿದೆ. ಅವುಗಳೆಂದರೆ:

೧. ಮುಖ್ಯ ಚುನಾವಣಾಧಿಕಾರಿಯನ್ನು ನೇಮಕ ಮಾಡಿದ ನಂತರ ತನಗೆ ಅನುಕೂಲವಾಗುವ ಸೇವಾ ನಿಯಮಗಳನ್ನು ಸರ್ಕಾರ ಬದಲಾಯಿಸುವಂತಿಲ್ಲ.

೨. ಮುಖ್ಯ ಚುನಾವಣಾಧಿಕಾರಿಗಳಿಗೆ ಸರ್ವೋಚ್ಛ ನ್ಯಾಯಾಲಯದ ನ್ಯಾಯಾಧೀಶರಿಗೆ ನೀಡುವ ಸ್ಥಾನಮಾನ, ವೇತನ, ಪಿಂಚಣಿ ಇತರ ಸೌಲಭ್ಯಗಳನ್ನು ನೀಡಲಾಗಿದೆ.

೩. ಚುನಾವಣೆಯನ್ನು ನಡೆಸಲು ಅವಶ್ಯಕವಿರುವ ಎಲ್ಲಾ ಸಿಬ್ಬಂದಿಗಳನ್ನು ರಾಷ್ಟ್ರಪತಿ ಅಥವಾ ರಾಜ್ಯಪಾಲರು ಒದಗಿಸಬೇಕಾಗುತ್ತದೆ.

೪. ಚುನಾವಣಾಧಿಕಾರಿಗಳನ್ನು ಸುಲಭವಾಗಿ ಪದಚ್ಯುತಿಗೊಳಿಸಲು ಅಸಾಧ್ಯ.

## ಚುನಾವಣಾ ಆಯೋಗದ ಅಧಿಕಾರ ಮತ್ತು ಕಾರ್ಯಗಳು

೧೯೫೦ ಮತ್ತು ೧೯೫೧ರ ಪ್ರಜಾಪ್ರತಿನಿಧಿ ಕಾಯಿದೆಯ ಪ್ರಕಾರ ಚುನಾವಣಾ ಆಯೋಗವು ರಾಷ್ಟ್ರದಲ್ಲಿ ಎಲ್ಲಾ ಚುನಾವಣಾ ಕಾರ್ಯಗಳನ್ನು ನಿರ್ವಹಿಸುತ್ತಿದೆ. ಭಾರತವು ಸಂಯುಕ್ತ ಪದ್ಧತಿ ಹೊಂದಿದ್ದರೂ ಸಹ ಇಡೀ ರಾಷ್ಟ್ರಕ್ಕೆಲ್ಲಾ ಒಂದೇ ಚುನಾವಣೆ ಆಯೋಗವನ್ನು ಹೊಂದಿದೆ. ಇದು ನಿರ್ವಹಿಸುವ ಪ್ರಮುಖ ಕಾರ್ಯಗಳನ್ನು ಸಂವಿಧಾನದ ೩೨೪(೧)ನೇ ವಿಧಿಯಲ್ಲಿ ಉಲ್ಲೇಖಿಸಲಾಗಿದೆ ಅವೆಂದರೆ:

೧. ಮತದಾರರ ಪಟ್ಟಿಯನ್ನು ಸಿದ್ಧಪಡಿಸುವುದು, ಅಂದರೆ ಚುನಾವಣೆಯು ನಡೆಯುವ ಸಂದರ್ಭಗಳಲ್ಲಿ ನಿಯಮ ಬದ್ಧವಾಗಿ ಮತದಾರರ ಪಟ್ಟಿಯನ್ನು ಸಿದ್ಧಪಡಿಸಿ ಅದನ್ನು ಪರಿಷ್ಕರಣಗೊಳಿಸುವಂತೆ ಮುಖ್ಯ ಕಾರ್ಯವನ್ನು ನಿರ್ವಹಿಸುತ್ತದೆ.

೨. ಕೇಂದ್ರ ಶಾಸಕಾಂಗಕ್ಕೆ, ರಾಜ್ಯ ಶಾಸಕಾಂಗಕ್ಕೆ, ರಾಷ್ಟ್ರಾಧ್ಯಕ್ಷರು ಹಾಗೂ ಉಪರಾಷ್ಟ್ರಪತಿ ಯವರ ಸ್ಥಾನಕ್ಕೆ ಚುನಾವಣೆಗಳನ್ನು ನಡೆಸುವುದು.

೩. ಪ್ರಾದೇಶಿಕ ಚುನಾವಣಾಧಿಕಾರಿಗಳನ್ನು ನೇಮಕ ಮಾಡಲು ಹೆಸರುಗಳನ್ನು ಶಿಫಾರಸು ಮಾಡುವ ಕಾರ್ಯ ಮಾಡುತ್ತದೆ. ರಾಜ್ಯಗಳಿಗೆ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಪ್ರಾದೇಶಿಕ ಚುನಾವಣಾಧಿಕಾರಿಗಳನ್ನು ನೇಮಿಸಲಾಗುತ್ತದೆ.

೪. ಚುನಾವಣಾ ವೇಳಾಪಟ್ಟಿಯನ್ನು ಸಿದ್ಧಪಡಿಸಿ, ಚುನಾವಣಾ ದಿನಾಂಕವನ್ನು ನಿಗದಿ ಪಡಿಸುತ್ತದೆ.

೫. ಚುನಾವಣೆಯನ್ನು ಯಾವುದೇ ರಾಜ್ಯ ಅಥವಾ ಪ್ರದೇಶದಲ್ಲಿ ನಡೆಸಲು ಸಾಧ್ಯವೇ ಅಥವಾ ಇಲ್ಲವೇ ಎಂಬ ತೀರ್ಮಾನವನ್ನು ನೀಡುವ ಕಾರ್ಯವನ್ನು ಮಾಡುತ್ತದೆ.

೬. ಚುನಾವಣೆಗಳಿಗೆ ಅವಶ್ಯಕವಿರುವಂತಹ ಎಲ್ಲಾ ರೀತಿಯ ಸಿಬ್ಬಂದಿ ವರ್ಗವನ್ನು ಪಡೆಯುವ ಅಧಿಕಾರ ಹೊಂದಿದೆ.

೭. ಚುನಾವಣೆಗಳಲ್ಲಿ ರಾಜಕೀಯ ಪಕ್ಷಗಳು ತಮ್ಮ ಮನಸ್ಸಾ ಇಚ್ಛೆ ಕಾರ್ಯ ನಿರತ ವಾಗುವುದನ್ನು ತಡೆಯಲು ನೀತಿ ಸಂಹಿತೆಯನ್ನು ಅನುಷ್ಠಾನಗೊಳಿಸುವುದು. ಉದಾ: ವೈಯಕ್ತಿಕ ಟೀಕೆ, ನಿಷೇಧ, ಪೂಜಾಸ್ಥಳಗಳ ಬಳಕೆಯ ನಿಷೇಧ, ಭ್ರಷ್ಟಾಚಾರದ ತಡೆ ಮುಂತಾದವು.

೮. ರಾಜಕೀಯ ಪಕ್ಷಗಳಿಗೆ ಮಾನ್ಯತೆ ನೀಡಿ ಅದು ರಾಷ್ಟ್ರೀಯ ಪಕ್ಷವೇ, ಅಲ್ಲವೇ ಎಂದು ನಿರ್ಧರಿಸಿ ಆಯಾ ಪಕ್ಷಗಳಿಗೆ ಚಿಹ್ನೆಗಳನ್ನು ನೀಡುವ ಕಾರ್ಯವನ್ನು ಮಾಡುತ್ತದೆ.

೯. ಕೇಂದ್ರ ಹಾಗೂ ರಾಜ್ಯ ಶಾಸಕಾಂಗಗಳ ಸದಸ್ಯರ ಅನರ್ಹತೆಯ ಬಗ್ಗೆ ರಾಷ್ಟ್ರಾಧ್ಯಕ್ಷರಿಗೆ ಮತ್ತು ರಾಜ್ಯಪಾರಿಗೆ ಸಲಹೆ ನೀಡುವ ಕಾರ್ಯ ಮಾಡುತ್ತದೆ.

೧೦. ಕೇಂದ್ರ ಶಾಸಕಾಂಗ ಹಾಗೂ ರಾಜ್ಯ ಶಾಸಕಾಂಗಗಳಿಗೆ ರಾಷ್ಟ್ರಾಧ್ಯಕ್ಷರು ಹಾಗೂ ರಾಜ್ಯಪಾಲರು ಚುನಾವಣೆಗಳನ್ನು ಪ್ರಕಟಿಸಬೇಕಾದರೆ ಚುನಾವಣಾ ಆಯೋಗದ ಶಿಫಾರಸನ್ನು ಪಡೆಯಬೇಕು.

೧೧. ಕೇಂದ್ರ ಹಾಗೂ ರಾಜ್ಯ ಶಾಸಕಾಂಗಕ್ಕೆ ಸ್ಥಾನಗಳು ಆಕಸ್ಮಿಕವಾಗಿ ತೆರವಾದರೆ ಉಪ ಚುನಾವಣೆಗಳನ್ನು ನಡೆಸುವ ಕ್ರಮಕೈಗೊಳ್ಳುತ್ತದೆ.

೧೨. ಮತದಾರರ ಪಟ್ಟಿಗಳನ್ನು ಪುನರ್ ನವೀಕರಣ ಮಾಡುವ ಅಥವಾ ವಿಶೇಷ ಪರಿಷ್ಕರಣಕ್ಕೆ ಆದೇಶ ನೀಡುವ ಅಧಿಕಾರವನ್ನು ಹೊಂದಿದೆ.

೧೩. ಯಾವುದಾದರೂ ಕ್ಷೇತ್ರದ ಮತಗಳಿಕೆಯಲ್ಲಿ ಅಹಿತಕರ ಘಟನೆ ನಡೆದು ಮುಕ್ತವಾಗಿ ಮತದಾನವಾಗದಿದ್ದರೆ, ಅಂತಹ ಮತಗಟ್ಟೆಗಳಲ್ಲಿ ಮರು ಮತದಾನಕ್ಕೆ ಆದೇಶಿಸ ಬಹುದು.

೧೪. ಚುನಾವಣಾ ಆಯೋಗವು ಯಾವುದೇ ಸಕಾರಾತ್ಮಕ ಕಾರಣಗಳಿಂದ ಚುನಾವಣಾ ಫಲಿತಾಂಶವನ್ನು ತಡೆಹಿಡಿಯಬಹುದಾಗಿದೆ.

೧೫. ಚುನಾವಣೆ ಪ್ರಕ್ರಿಯೆ ಮುಗಿದ ನಂತರ ಸದನದ ರಚನೆಗೆ ಪ್ರಕಟಣೆಯನ್ನು ಹೊರಡಿಸುವ ಅಧಿಕಾರವನ್ನು ಹೊಂದಿದೆ.

ಈ ಮೇಲೆ ನಮೂದಿಸಿದಂತಹ ಅಧಿಕಾರ, ಕಾರ್ಯಗಳನ್ನು ಚುನಾವಣಾ ಆಯೋಗ ದಕ್ಷತೆಯಿಂದ ಹಾಗೂ ನಿಷ್ಠೆಯಿಂದ ನಿರ್ವಹಿಸುತ್ತಾ ಬಂದಿದೆ. ಈ ರೀತಿಯ ಕಾರ್ಯ ತತ್ಪರತೆಯಿಂದ ಮಾತ್ರ ಪ್ರಜಾಪ್ರಭುತ್ವವು ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಅಂದರೆ ಚುನಾವಣೆಗಳು ಮುಕ್ತವಾಗಿ ನಿಷ್ಪಕ್ಷಪಾತವಾಗಿ ನಡೆಯಬೇಕು. ಆ ನಿಟ್ಟಿನಲ್ಲಿ ಚುನಾವಣಾ ಆಯೋಗ ದಕ್ಷ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ.

**ಚುನಾವಣಾ ಪ್ರಕ್ರಿಯೆ**

ಯಾವುದೇ ಚುನಾವಣೆ ನಡೆಸಲು ಆಯೋಗ ಪ್ರಕಟಣೆ ಹೊರಡಿಸಿದ ನಂತರ ಕೆಲವು ವಿಧಿ ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಆ ವಿಧಿ-ವಿಧಾನಗಳನ್ನೇ ಚುನಾವಣಾ ಪ್ರಕ್ರಿಯೆ ಎಂದು ಕರೆಯಲಾಗುತ್ತದೆ.

೧. ಕೇಂದ್ರ ಸಂಸತ್ತಿನ ಲೋಕಸಭೆಗೆ ಚುನಾವಣೆ ನಡೆಸುವಂತೆ ರಾಷ್ಟ್ರಾಧ್ಯಕ್ಷರು ಪ್ರಕಟಣೆ ಹೊರಡಿಸಬೇಕು. ಈ ಪ್ರಕಟಣೆಯನ್ನು ಅವರು ೧೯೬೧ರ ಪ್ರಜಾಪ್ರತಿನಿಧಿ ಕಾಯ್ದೆಯ ಪ್ರಕಾರ ಹೊರಡಿಸುತ್ತಾರೆ.

೨. ರಾಜ್ಯ ಶಾಸಕಾಂಗದಲ್ಲಿನ ವಿಧಾನಸಭೆಗೆ ರಾಜ್ಯಪಾಲರು ಚುನಾವಣೆ ನಡೆಸುವಂತೆ ರಾಜ್ಯಪಾಲರು ಪ್ರಕಟಣೆ ಹೊರಡಿಸುತ್ತಾರೆ.

೩. ಈ ರೀತಿ ಪ್ರಕಟಣೆಗೊಂಡ ನಂತರ ಚುನಾವಣಾ ಆಯೋಗ, ಚುನಾವಣಾ ಅಭ್ಯರ್ಥಿಗಳು ನಾಮಪತ್ರ ಸಲ್ಲಿಸಲು ಮತ್ತು ನಾಮಪತ್ರ ವಾಪಸ್ಸು ಪಡೆಯಲು ದಿನಾಂಕಗಳನ್ನು ನಿಗದಿಗೊಳಿಸುತ್ತದೆ.

೪. ಚುನಾವಣಾ ಕಣದಲ್ಲಿರುವ ಅಭ್ಯರ್ಥಿಗಳ ನಾಮಪತ್ರಗಳು ನಿಯಮಬದ್ಧವಾಗಿವೆಯೇ ಇಲ್ಲವೇ ಎಂಬುದನ್ನು ಪರಿಶೀಲನೆ ಮಾಡುತ್ತದೆ. ಈ ಪರಿಶೀಲನೆಯ ಸಂದರ್ಭದಲ್ಲಿ ನಾಮಪತ್ರ ನಿಯಮಬದ್ಧವಾಗಿರದಿದ್ದರೆ ಅದನ್ನು ರದ್ದುಗೊಳಿಸಿ ಉಳಿದವುಗಳನ್ನು ಅನುಮೋದಿಸಿ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸಲಾಗುತ್ತದೆ.

೫. ಯಾವುದೇ ಅಭ್ಯರ್ಥಿ ತನ್ನ ಚುನಾವಣಾ ಪ್ರಚಾರವನ್ನು ಅಧಿಕೃತವಾಗಿ ಪ್ರಕಟವಾದ ನಂತರವೇ ಪ್ರಾರಂಭಿಸಬೇಕು.

೬. ಚುನಾವಣಾ ಪ್ರಚಾರವನ್ನು ಮತದಾನದ ಸಮಯಕ್ಕಿಂತ ೩೬ ಗಂಟೆಗಳ ಮುಂಚಿತವಾಗಿಯೇ ಸ್ಥಗಿತಗೊಳಿಸಬೇಕು.

೭. ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳು ಲೋಕಸಭೆಗೆ ೧೦,೦೦೦ ರೂ. ಗಳನ್ನು ಹಾಗೂ ವಿಧಾನಸಭೆಗಳಿಗೆ ೫,೦೦೦ ರೂ. ಗಳನ್ನು ಠೇವಣಿಯಾಗಿ ಕಟ್ಟಬೇಕು. ಆದರೆ ಸಾಮಾನ್ಯ ಕ್ಷೇತ್ರದಲ್ಲಿ ಪರಿಶಿಷ್ಟ ಜನಾಂಗದವರು ಸ್ಪರ್ಧಿಸಿದರೆ ಅವರು ಇದರಲ್ಲಿ ಅರ್ಧದಷ್ಟು ಠೇವಣಿಯನ್ನು ಕಟ್ಟಬೇಕು. ಈ ನಿಯಮವನ್ನು ೧೯೯೮ ರಲ್ಲಿ ಜಾರಿಗೆ ತರಲಾಯಿತು. ಇದಕ್ಕಿಂತ ಮೊದಲು ಲೋಕಸಭೆಗೆ ೫೦೦ ರೂಪಾಯಿಯನ್ನು ಹಾಗೂ ವಿಧಾನಸಭೆಗೆ ೨೫೦ ರೂ.ಗಳ ಠೇವಣಿಯನ್ನು ಕಟ್ಟಬೇಕಿತ್ತು.

೮. ಸ್ಪರ್ಧಿಸುವ ಅಭ್ಯರ್ತಿಗಳಲ್ಲಿ ಯಾರು ⅙ ಭಾಗಕ್ಕಿಂತ ಕಡಿಮೆ ಮತಗಳನ್ನು ಪಡೆಯುತ್ತಾರೋ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.

೯. ವಿಧಾನಸಭೆಯ ಚುನಾವಣೆಯಲ್ಲಿ ಆಯಾ ರಾಜ್ಯದ ಯಾವುದೇ ಕ್ಷೇತ್ರದಿಂದಾರೂ ಸ್ಪರ್ಧಿಸಬಹುದು.

೧೦. ಲೋಕಸಭೆಗೆ ರಾಷ್ಟ್ರದ ಯಾವುದೇ ಕ್ಷೇತ್ರದಿಂದಾದರೂ ಸ್ಪರ್ಧಿಸಬಹುದು.

೧೧. ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು ತಮ್ಮಿಷ್ಟ ಬಂದಂತೆ ಪ್ರಚಾರಕ್ಕಾಗಿ ಹಣವನ್ನು ವೆಚ್ಚ ಮಾಡುವಂತಿಲ್ಲ. ಕೇಂದ್ರ ಸರ್ಕಾರ ಆಗಿಂದಾಗ್ಗೆ ಮಾಡುವ ನಿಯಾಮಾವಳಿಗೆ ಬದ್ಧವಾಗಿ ಖರ್ಚುಮಾಡಬೇಕು. ಈ ನಿಯಮಾವಳಿ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿದೆ. ಕರ್ನಾಟಕದಲ್ಲಿ ಲೋಕಸಭಾ ಚುನಾವಣೆಗೆ ಒಬ್ಬ ಅಭ್ಯರ್ಥಿಗೆ ೪,೫೦,೦೦೦ ರೂಪಾಯಿಗಳನ್ನು ಖರ್ಚು ಮಾಡಬಹುದು. ಸಿಕ್ಕಿಂನಲ್ಲಿ ಒಬ್ಬ ಅಭ್ಯರ್ಥಿ ೧,೫೦,೦೦೦ ರೂ.ಗಳನ್ನು ಖರ್ಚು ಮಾಡಬಹುದಿತ್ತು. ೧೯೯೮ರಲ್ಲಿ ಲೋಕಸಭೆಗೆ ೧೫ ಲಕ್ಷ ಮತ್ತು ವಿಧಾನಸಭೆಗಳಿಗೆ ೬ ಲಕ್ಷ ರೂ.ಗಳನ್ನು ಒಬ್ಬ ಅಭ್ಯರ್ಥಿ ಖರ್ಚು ಮಾಡಬಹುದು ಎಂದು ಸೂಚಿಸಲಾಗಿದೆ.

೧೨. ಚುನಾವಣೆ ನೀಡಿದ ೩೦ ದಿನಗಳೊಳಗೆ ಅಭ್ಯರ್ಥಿಗಳು ಚುನಾವಣಾ ವೆಚ್ಚದ ಬಗ್ಗೆ ಜಿಲ್ಲಾ ಚುನಾವಣಾಧಿಕಾರಿಗಳಿಗೆ ಲೆಕ್ಕವನ್ನು ಪಾವತಿಸಬೇಕು. ಲೆಕ್ಕ ನೀಡದಿದ್ದರೆ ಅಂಥವರ ವಿರುದ್ಧ ಕ್ರಮ ಕೈಗೊಳ್ಳುವ ಅಧಿಕಾರವಿದೆ.

೧೩. ಚುನಾವಣಾ ಫಲಿತಾಂಶ ಹೊರಬಿದ್ದ ಬಳಿಕ ಹೊಸ ಲೋಕಸಭೆಯು ಅಸ್ತಿತ್ವಕ್ಕೆ ಬಂದಿದೆಯೆಂಬುದನ್ನು ಆಯೋಗ ಪ್ರಕಟಿಸುತ್ತದೆ. ಈ ಪ್ರಕಟಣೆಯ ದಿನದಿಂದಲೇ ಲೋಕಸಭಾಸದಸ್ಯರು ತಮ್ಮ ವೇತನ ಮತ್ತು ಸವಲತ್ತುಗಳನ್ನು ಪಡೆಯಲು ಅರ್ಹರಾಗುತ್ತಾರೆ.

೧೪. ವಿವಿಧ ಕಾರಣಗಳಿಂದ ತೆರವಾಗುವ ಲೋಕಸಭಾ ಸ್ಥಾನಗಳಿಗೆ ಉಪಚುನಾವಣೆ ಮಾಡಬೇಕಾಗುತ್ತದೆ.

### ೪.೨ ಚುನಾವಣಾ ಸುಧಾರಣೆಗಳು

ಆಧುನಿಕ ಯುಗದಲ್ಲಿ ವಿಶ್ವದ ಎಲ್ಲಾ ಕ್ಷೇತ್ರದಲ್ಲಿಯೂ ರಾಷ್ಟ್ರಗಳು ಅಭಿವೃದ್ಧಿಯನ್ನು ಸಾಧಿಸುತ್ತಿವೆ. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಚುನಾವಣೆಯು ವ್ಯವಸ್ಥಿತವಾಗಿರುವುದು ಅತ್ಯವಶ್ಯಕವಾಗಿದೆ. ಆದ್ದರಿಂದ ಭಾರತದಲ್ಲಿ ಸಹ ಹಲವಾರು ಸುಧಾರಣೆಗಳ್ನು ಚುನಾವಣಾ ಪದ್ಧತಿಯಲ್ಲಿ ಮಾಡಲಾಗಿದೆ. ಅವುಗಳೆಂದರೆ :

### ಅ. ವಿದ್ಯುನ್ಮಾನ ಮತಯಂತ್ರ ಮತ್ತು ಗುರುತಿನ ಪತ್ರ

### ವಿದ್ಯುನ್ಮಾನ ಮತಯಂತ್ರ

ಇದನ್ನು ೧೯೮೯-೯೦ ರಲ್ಲಿ ಕಂಡುಹಿಡಿಯಲಾಯಿತು. ಇದನ್ನು ಪ್ರಯೋಗ ಮಾಡಲು ಮೊದಲು ೧೬ ಕ್ಷೇತ್ರಗಳಲ್ಲಿ ಬಳಸಲಾಯಿತು. ಮಧ್ಯಪ್ರದೇಶ (೫), ರಾಜಸ್ಥಾನ (೫), ದೆಹಲಿ (೬)ಗಳಲ್ಲಿ ಮೊದಲು ಬಳಸಲಾಯಿತು. ಆದರೆ ಸಾರ್ವತ್ರಿಕವಾಗಿ ೧೯೯೮ರಲ್ಲಿ ಬಳಸಲಾಯಿತು.

ಈ ಯಂತ್ರವು ಎರಡು ಘಟಕಗಳನ್ನು ಹೊಂದಿರುತ್ತದೆ. ಅದೆಂದರೆ ನಿಯಂತ್ರಿತ ಘಟಕ ಮತ್ತು ಸಮ್ಮತಿಯ ಘಟಕ ಅಥವಾ ಬ್ಯಾಲೆಟ್ಟಿನ ಘಟಕ. ನಿಯಂತ್ರಕ ಘಟಕವನ್ನು ಅಧಿಕಾರಿಯವರು ಉಪಯೋಗಿಸುತ್ತಾರೆ ಮತ್ತು ಬ್ಯಾಲೆಟ್ ಘಟಕದಲ್ಲಿ ಅಭ್ಯರ್ಥಿಗಳ ಹೆಸರು ಮತ್ತು ಅದರ ಮುಂದೆ ಚಿಹ್ನೆಗಳನ್ನು ಇರಿಸಲಾಗುತ್ತದೆ. ಯಂತ್ರದ ಬಲಬದಿಯಲ್ಲಿ ನೀಲಿ ಬಣ್ಣದ ಒತ್ತು ಗುಂಡಿಯು ಇರುತ್ತದೆ. ಮತದಾರರು ಆ ಗುಂಡಿಯನ್ನು ಒತ್ತುವ ಮೂಲಕ ಮತಚಲಾಯಿಸಬಹುದು. ಒಂದು ಯಂತ್ರವು ಗರಿಷ್ಠ ೩೮೪೦ ಮತಗಳನ್ನು ರೆಕಾರ್ಡ್ ಮಾಡಿಕೊಳ್ಳುತ್ತದೆ. ಇದರಲ್ಲಿ ಗರಿಷ್ಠ ೬೪ ಅಭ್ಯರ್ಥಿಗಳ ಹೆಸರಿನ ಪಟ್ಟಿಯನ್ನು ಅಳವಡಿಸ ಬಹುದು.

### ಉಪಯೋಗಗಳು

೧. ಬ್ಯಾಲೆಟ್ ಪತ್ರವನ್ನು ತಯಾರಿಸುವ ವೆಚ್ಚವು ಉಳಿಯುತ್ತದೆ.

೨. ಒಂದೇ ಬ್ಯಾಲೆಟ್‌ಶೀಟ್‌ನಿಂದ ಯಂತ್ರದಲ್ಲಿ ಎಲ್ಲರೂ ಮತದಾನ ಮಾಡಬಹುದು.

೩. ಬ್ಯಾಲೆಟ್ ಚೀಟಿಯನ್ನು ತಯಾರಿಸಬೇಕು. ಇದರಿಂದ ಸಾರಿಗೆ ವೆಚ್ಚ, ಸಂಗ್ರಹಣಾ ವೆಚ್ಚ, ವಿತರಣೆಯ ವೆಚ್ಚ ಅಧಿಕವಾಗುತ್ತದೆ.

೪. ವಿದ್ಯುನ್ಮಾನ ಮತಯಂತ್ರದಿಂದಾಗಿ ೨ ರಿಂದ ೩ ಗಂಟೆಯ ಅವಧಿಯಲ್ಲಿ ಮತಗಣನೆ ಮಾಡಬಹುದು.
೫. ಮತದ ಅಪಮೌಲ್ಯವಾಗುವುದನ್ನು ತಡೆಯಬಹುದು.
೬. ನಿಯಂತ್ರಿತ ಘಟಕವು ಫಲಿತಾಂಶವನ್ನು ಸುಮಾರು ೧೦ ವರ್ಷಗಳವರೆಗೆ ನೆನಪಿಟ್ಟು ಕೊಳ್ಳುತ್ತದೆ.

ಭಾರತದಲ್ಲಿ ಅನಕ್ಷರಸ್ಥರೇ ಅಧಿಕವಾಗಿರುವುದರಿಂದ ಈ ಯಂತ್ರದ ಬಳಕೆಯು ಪ್ರಯೋಜನಕಾರಿಯಾಗಿದೆ. ಈ ಯಂತ್ರದ ಸಹಾಯದಿಂದ ಚುನಾವಣಾ ಪ್ರಕ್ರಿಯೆ ವಿಳಂಬವಾಗುವುದನ್ನು ತಡೆಯಬಹುದಾಗಿದೆ.

**ಗುರುತಿನ ಪತ್ರ**

ಚುನಾವಣಾ ಆಯೋಗದಿಂದ ಗುರುತಿನ ಪತ್ರವನ್ನು ಅನುಮೋದಿಸಲಾಗುತ್ತದೆ. ಇದು ತಾನು ಆ ರಾಷ್ಟ್ರದ ಪೌರ ಎಂದು ಗುರುತಿಸಿಕೊಳ್ಳುವ ವಿಧಾನಗಳಲ್ಲಿ ಒಂದು ಸಾಧನವಾಗಿದೆ. ಭಾರತದಲ್ಲಿ ಚುನಾವಣಾ ಸಮಯದಲ್ಲಿ ಮತದಾರರು ಮತಚಲಾಯಿಸುವಾಗ ಕಡ್ಡಾಯವಾಗಿ ಗುರುತಿನ ಪತ್ರವನ್ನು ಅಧಿಕಾರಿಗಳಿಗೆ ತೋರಿಸಲೇಬೇಕು. ಚುನಾವಣಾ ಆಯೋಗ ಸರಕಾರದ ಸಹಯೋಗ ದಿಂದ ಗುರುತಿನ ಪತ್ರವನ್ನು ಪ್ರಜೆಗಳಿಗೆ ಯಾವುದೇ ರೀತಿಯ ಶುಲ್ಕವಿಲ್ಲದೆ ಪುಕ್ಕಟೆಯಾಗಿ ನೀಡುತ್ತದೆ. ಆದರೆ ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಜನತೆಯೇ ಅದನ್ನು ಪಡೆಯಲು ಮತ್ತು ಬಳಸಲು ಸೋಮಾರಿಗಳಂತೆ ವರ್ತಿಸುತ್ತಾರೆ.

ಆದರೆ ೨೦೦೪ರ ಚುನಾವಣೆಯಲ್ಲಿ ಗುರುತಿನ ಪತ್ರವನ್ನು ಕಡ್ಡಾಯ ಮಾಡಲಿಲ್ಲ. ಮತದಾರರ ಪಟ್ಟಿಯಲ್ಲಿ ಹೆಸರಿದ್ದರೆ ಮತದಾನ ಮಾಡಬಹುದಿತ್ತು. ಗುರುತಿನ ಪತ್ರದಿಂದ ವ್ಯಕ್ತಿಯು ತಾನು ಮತದಾರ ಪ್ರಜೆ ಎಂದು ಗುರುತಿಸಿಕೊಳ್ಳಬಹುದು. ಮತ್ತು ಇದರಿಂದ ಮತದಾನ ಸಂದರ್ಭದಲ್ಲಿ ಒಬ್ಬರ ಹೆಸರಿನಲ್ಲಿ ಮತ್ತೊಬ್ಬರು ಮತ ಹಾಕುವುದನ್ನು (ಫ್ರಾಕ್ಸಿ ಮತ) ತಡೆಯಬಹುದು. ಮತ್ತು ಬ್ಯಾಂಕುಗಳಲ್ಲಿ ಖಾತೆ ತೆರೆಯಲು ಸಹಕಾರಿಯಾಗುತ್ತದೆ ಮತ್ತು ಪಾಸ್‌ಪೋರ್ಟ್ ಮಾಡಿಸುವ ಸಂದರ್ಭದಲ್ಲಿ ಸರ್ಕಾರದಿಂದ ಯಾವುದೇ ರೀತಿಯ ಯೋಜನೆಗಳಿಂದ ಧನ ಸಹಾಯ ಪಡೆಯುವಾಗ, ವಾಹನ ಚಾಲನೆಯ ಪರವಾನಗಿ ಪತ್ರವನ್ನು ಪಡೆಯಲು ಈ ಗುರುತಿನ ಪತ್ರ ಸಹಕಾರಿಯಾಗುತ್ತದೆ.

**ಆ. ಚುನಾವಣಾ ಅಭ್ಯರ್ಥಿಗಳ ಪೂರ್ವೋತ್ತರಗಳ ಕಡ್ಡಾಯ ಘೋಷಣೆ (ಶಿಕ್ಷಣ, ಆಸ್ತಿ ಮತ್ತು ಅಪರಾಧ ಕುರಿತಂತೆ)**

ಪ್ರಜಾಪ್ರಭುತ್ವದಲ್ಲಿ ಜನರೇ ಪ್ರತಿನಿಧಿಗಳನ್ನು ನೇರವಾಗಿ ಆಯ್ಕೆ ಮಾಡುವುದರಿಂದ ಪ್ರಜೆಗಳಿಗೆ ಪ್ರತಿನಿಧಿಗಳ ಸಂಪೂರ್ಣ ಮಾಹಿತಿ ದೊರೆಯಬೇಕು. ಕಾರಣ ರಾಜಕೀಯ ವ್ಯವಸ್ಥೆಯು ಪಾರದರ್ಶಕತೆಯಿಂದ ಕೂಡಿರಬೇಕು. ಆಗ ಮಾತ್ರ ಉತ್ತಮ ಅಭ್ಯರ್ಥಿಗಳ ಆಯ್ಕೆ ಸಾಧ್ಯವಾಗುತ್ತದೆ. ಇದರಿಂದ ರಾಜಕೀಯ ವ್ಯವಸ್ಥೆಯು ಸರಿಯಾದ ಮಾರ್ಗದಲ್ಲಿ ನಡೆಯಲು ಸಾಧ್ಯವಾಗುತ್ತದೆ.

೧೯೫೧ರ ಪ್ರಜಾಪ್ರತಿನಿಧಿ ಕಾಯ್ದೆಯ ಸೆಕ್ಷನ್ ೩೩ ಎ ಮತ್ತು ೧೯೬೧ ರ ಚುನಾವಣಾ ಆಯೋಜನಾ ಕಾಯ್ದೆಯಡಿ ಅಭ್ಯರ್ಥಿಯು ಈ ಕೆಳಕಂಡ ಮಾಹಿತಿಗಳನ್ನು ಒದಗಿಸುವುದು ಅವಶ್ಯಕವಾಗಿದೆ.

೧. ಯಾವುದಾದರೂ ಮೊಕದ್ದಮೆ ನ್ಯಾಯಾಲಯದಲ್ಲಿ ದಾಖಲಾಗಿದ್ದರೆ ಮತ್ತು ಅದರ ವಿಚಾರಣೆ ನಡೆಯುತ್ತಿದ್ದರೆ ಹಾಗೂ ಎರಡು ವರ್ಷ ಮತ್ತು ಅದಕ್ಕಿಂತ ಹೆಚ್ಚು ಕಾಲ ಸೆರೆಮನೆ ವಾಸ ಅನುಭವಿಸಿದ್ದರೆ ಅದರ ಮಾಹಿತಿಯನ್ನು ಒದಗಿಸಬೇಕಾಗುತ್ತದೆ.

೨. ಯಾವ ಅಪರಾಧಕ್ಕಾಗಿ ನ್ಯಾಯಾಲಯದಲ್ಲಿ ವಿಚಾರಣೆ ನಡೆಯುತ್ತಿದೆ ಅಥವಾ ನಡೆದಿದೆ, ಮತ್ತು ನ್ಯಾಯಾಲಯ ಅದಕ್ಕೆ ಯಾವ ತೀರ್ಪು ನೀಡಿದೆ ಎಂಬ ಮಾಹಿತಿಯನ್ನು ನೀಡ ಬೇಕಾಗುತ್ತದೆ.

ಇವು ಅಭ್ಯರ್ಥಿಯ ಅಪರಾಧದ ಕುರಿತ ಮಾಹಿತಿಗಳಾಗಿವೆ. ಅಂತೆಯೇ ಅಭ್ಯರ್ಥಿಯ ಶೈಕ್ಷಣಿಕ ವಿದ್ಯಾಭ್ಯಾಸ ಮತ್ತು ಹೊಂದಿರುವ ಆಸ್ತಿಯ ಬಗ್ಗೆ ನಿಖರವಾದ ಮಾಹಿತಿಯನ್ನು ಒದಗಿಸಬೇಕು.

ಆದರೆ ವಾಸ್ತವದಲ್ಲಿ ನಿಯಮಕ್ಕೆ ವ್ಯತಿರಿಕ್ತವಾಗಿ ಅಭ್ಯರ್ಥಿಗಳು ವರ್ತಿಸುತ್ತಾರೆ. ಅಂದರೆ ಚುನಾವಣೆಯ ಸಂದರ್ಭದಲ್ಲಿ ಕೆಲವರು ತಪ್ಪು ಮಾಹಿತಿಯನ್ನು ಒದಗಿಸುತ್ತಾರೆ. ಆಸ್ತಿಯಲ್ಲಿ ಕೇವಲ ಒಂದು ಭಾಗದಷ್ಟು ಮಾತ್ರ ಮಾಹಿತಿ ನೀಡುತ್ತಾರೆ. ಆದರೆ ಕೆಲವರು ಪ್ರಾಮಾಣಿಕವಾಗಿ ಮಾಹಿತಿಯನ್ನು ಒದಗಿಸುತ್ತಾರೆ. ಆದರೆ ಅಪ್ರಾಮಾಣಿಕರೇ ಅಧಿಕವಾಗಿರುವುದರಿಂದ ಪ್ರಾಮಾಣಿಕರು ಅಲ್ಲಿ ಹುದುಗಿ ಹೋಗುತ್ತಾರೆ.

**೩. ರಾಜ್ಯದ ಹಣಕಾಸಿನ ಮೂಲಕ ಚುನಾವಣಾ ವೆಚ್ಚದ ಸುಧಾರಣೆಗಳು**

ಯಾವುದೇ ಸಂಸ್ಥೆಯಾಗಲಿ ಅಥವಾ ವ್ಯಕ್ತಿಯಾಗಲಿ ಏಕಮುಖವಾಗಿ ನಿರ್ಯಾತ ಪ್ರದೇಶದಲ್ಲಿ ಪ್ರಗತಿ ಸಾಧಿಸಲು ಸಾಧ್ಯವಿಲ್ಲ. ಅಂತಹ ಸಂಸ್ಥೆಗಳಿಗೆ ರಾಜ್ಯವೆಂಬ ಆಧಾರ ಸಂಸ್ಥೆಯ ಅಗತ್ಯವು ಅವಶ್ಯಕವಾಗಿರುತ್ತದೆ. ಅಂತೆಯೇ ಚುನಾವಣಾ ಪ್ರಕ್ರಿಯೆಯ ಕಾರ್ಯವನ್ನು ಚುನಾವಣಾ ಆಯೋಗಕ್ಕೆ ವಹಿಸಿದ್ದರೂ ಕೂಡ ಅದೊಂದೇ ಎಲ್ಲಾ ಆರ್ಥಿಕ ಅಂಶಗಳನ್ನು ಸಮರ್ಪಕವಾಗಿ ನಿರ್ವಹಿಸಲಾರದು. ಆದ್ದರಿಂದ ರಾಜ್ಯ ಹಣಕಾಸು ಸಂಸ್ಥೆಯು ಸಹಾಯ ಹಸ್ತವನ್ನು ನೀಡುತ್ತದೆ.

ಸಾಮಾಜಿಕ ಕಾಳಜಿ ಉಳ್ಳ ಅಭ್ಯರ್ಥಿಯು ಚುನಾವಣೆಗೆ ಸ್ಪರ್ಧಿಸುವ ಇಚ್ಛೆಯಿದ್ದರು ಸಹ ಅಂಥವರಿಗೆ ತೊಂದರೆ ಇದ್ದರೆ ಸ್ಪರ್ಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸ್ಪರ್ಧಿಸುವ ಎಲ್ಲರಿಗೂ ಸರ್ಕಾರವೇ ಪ್ರಚಾರ ಇನ್ನಿತರ ಕಾರ್ಯಗಳನ್ನು ನಿರ್ವಹಿಸುವ ಮೂಲಕ, ಒಂದು ರೀತಿಯಲ್ಲಿ ಕಾಳಜಿ ಉಳ್ಳವರಿಗೆ ಅವಕಾಶ ನೀಡಿದಂತಾಗುತ್ತದೆ. ಮತ್ತೊಂದು ರೀತಿಯಿಂದ ಚುನಾವಣೆಯಲ್ಲಿ ಅಭ್ಯರ್ಥಿಗಳು ಹಣದ ಹೊಳೆಹರಿಸುವುದನ್ನೂ ಕಟ್ಟುನಿಟ್ಟಾಗಿ ತಡೆಯ ಬಹುದು. ಆದರೆ ಇದನ್ನು ಇನ್ನೂ ಜಾರಿಗೆ ತರಲು ಸಾಧ್ಯವಾಗಿಲ್ಲ.

ಇಂತಹ ಒಂದು ನಿಯಮಾವಳಿಗಳನ್ನು ರಚಿಸುವ ಪ್ರಾಮಾಣಿಕರು, ರಾಜಕೀಯ ಆಸಕ್ತಿಯುಳ್ಳವರು, ಪ.ಜಾಸೇವೆ ಮಾಡಲು ಮನಸ್ಸು ಹೊಂದಿದವರು ಚುನಾವಣೆಗಳಲ್ಲಿ

ಸ್ಪರ್ಧಿಸಿ ಆಯ್ಕೆಯಾಗುವ ಸಂಭವವಿರುತ್ತದೆ. ಇದರಿಂದ ಉತ್ತಮ ರಾಜಕೀಯ ವ್ಯವಸ್ಥೆ ರೂಪುಗೊಳ್ಳುವುದರಲ್ಲಿ ಯಾವುದೇ ಸಂದೇಹವಿಲ್ಲ. ಆದರೆ ಇನ್ನೊಂದು ದೃಷ್ಟಿಕೋನದಿಂದ ಗಮನಿಸಿದರೆ ಇಂತಹ ಸರ್ಕಾರ ನೀಡುವ ಹಣಕಾಸಿನ ಸೌಲಭ್ಯ ಬಳಸಿಕೊಳ್ಳಲು ಅಯೋಗ್ಯರು, ಭ್ರಷ್ಟರು, ಅನೀತಿವಂತರೂ ಸಹ ಮುಂದೆ ಬರಬಹುದು. ರಾಷ್ಟ್ರದಲ್ಲಿ ಈ ಚುನಾವಣಾ ಸುಧಾರಣೆಯು ಒಂದು ಅತ್ಯುತ್ತಮ ಪ್ರಗತಿಶೀಲದ ಸೂಚನೆಯಾಗಿದ್ದು ಅದು ಎಷ್ಟರಮಟ್ಟಿಗೆ ಫಲಕಾರಿಯಾಗುತ್ತದೆ ಎಂಬುದನ್ನು ಕಾದುನೋಡಬೇಕಿದೆ.

### ೪.೩ ಸಾರಾಂಶ

ಚುನಾವಣೆಗಳು ಒಂದು ರೀತಿ ಸಾರ್ವಜನಿಕ ಅಭಿಪ್ರಾಯವನ್ನು ವ್ಯಕ್ತಪಡಿಸುವ ಅಸ್ತ್ರಗಳಾಗಿವೆ. ಪ್ರಜಾಪ್ರಭುತ್ವಕ್ಕೆ ಬದ್ಧವಾಗಿರುವ ರಾಜ್ಯಗಳಲ್ಲಿ ಪ್ರಜೆಗಳು ತಮ್ಮ ಅಭಿಪ್ರಾಯವು ಯಾವ ಅಭ್ಯರ್ಥಿ ಮತ್ತು ಯಾವ ಪಕ್ಷದ ಪರವಾಗಿ ಇದೆ ಎಂದು ತೋರಿಸಲು ಚುನಾವಣೆ ಒಂದು ಸುಸಂದರ್ಭವಾಗಿದೆ. ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆಯು ಬೃಹತ್ ಜನಸಂಖ್ಯೆಯನ್ನು ಒಳಗೊಂಡಿರುವುದರಿಂದ ಪ್ರತ್ಯಕ್ಷ ಚುನಾವಣೆಗಿಂತ ಪರೋಕ್ಷ ಚುನಾವಣೆ ಹೆಚ್ಚು ಪ್ರಚಲಿತದಲ್ಲಿದೆ.

ಸಾರ್ವತ್ರಿಕ ಮತದಾನ ಪದ್ಧತಿಯೂ ಸಹ ಅತ್ಯಂತ ಪ್ರಮುಖವಾದ ತತ್ವವಾಗಿದೆ. ಇದರಂತೆ ಪ್ರಜೆಗಳು ಒಂದು ನಿರ್ದಿಷ್ಟ ವಯಸ್ಸು ಮೀರಿದ ನಂತರ ಯಾವುದೇ ತಾರತಮ್ಯ ಮಾಡದೇ ಮತಾಧಿಕಾರವನ್ನು ನೀಡಬೇಕಾಗುತ್ತದೆ. ಇಂದು ಬಹುತೇಕ ದೇಶಗಳು ಇದನ್ನು ಅನುಸರಿಸುತ್ತಿವೆ. ಇದು ಎಲ್ಲಾ ಪ್ರಜೆಗಳಿಗೂ ಒಂದು ಕನಿಷ್ಠ ವಯೋಮಿತಿಯನ್ನು ನಿಗದಿಪಡಿಸಿ ಜಾತಿ, ಬಣ್ಣ, ಧರ್ಮ, ಲಿಂಗ, ಆಸ್ತಿ, ವಿದ್ಯೆ, ಉದ್ಯೋಗ ಮುಂತಾದ ಆಧಾರದ ಮೇಲೆ ಯಾವುದೇ ತಾರತಮ್ಯ ಮಾಡದೆ ಪ್ರತಿಯೊಬ್ಬರಿಗೂ ಸಮಾನವಾದ ಮತದಾನದ ಹಕ್ಕನ್ನು ನೀಡುತ್ತದೆ.

ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ಚುನಾವಣಾ ವ್ಯವಸ್ಥೆಯನ್ನು ಅಳವಡಿಸಿಕೊಂಡಿರುತ್ತದೆ. ಯಾವುದೇ ರಾಷ್ಟ್ರದಲ್ಲಿ ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ ಅದು ಆ ರಾಷ್ಟ್ರದಲ್ಲಿರುವಂತಹ ಚುನಾವಣಾ ವ್ಯವಸ್ಥೆಯು ಉತ್ತಮವಾಗಿರಬೇಕು. ಅಂದರೆ ಚುನಾವಣೆಗಳು ಮುಕ್ತವಾಗಿ ನಿಷ್ಪಕ್ಷಪಾತವಾಗಿ ನಡೆಯಬೇಕು. ಆ ನಿಟ್ಟಿನಲ್ಲಿ ಚುನಾವಣಾ ಆಯೋಗ ದಕ್ಷ ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಈ ರೀತಿಯಲ್ಲಿ ಉತ್ತಮವಾದ ಚುನಾವಣಾ ವ್ಯವಸ್ಥೆಯನ್ನು ರೂಪಿಸಿ ನಿರ್ವಹಿಸಲೆಂದೇ ಭಾರತವೂ ಸಹ ತನ್ನದೇ ಆದ ಚುನಾವಣಾ ಆಯೋಗವನ್ನು ರಚಿಸಿಕೊಂಡು ಚುನಾವಣೆಗಳನ್ನು ನಡೆಸುವ ಅವಕಾಶ ಮಾಡಿಕೊಂಡಿದೆ.

ಆಧುನಿಕ ಯುಗದಲ್ಲಿ ವಿಶ್ವದ ಎಲ್ಲಾ ಕ್ಷೇತ್ರದಲ್ಲಿಯೂ ರಾಷ್ಟ್ರಗಳು ಅಭಿವೃದ್ಧಿಯನ್ನು ಸಾಧಿಸುತ್ತಿವೆ. ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಚುನಾವಣೆಯು ವ್ಯವಸ್ಥಿತವಾಗಿರುವುದು

ಅತ್ಯವಶ್ಯಕವಾಗಿದೆ. ಆದ್ದರಿಂದ ಭಾರತದಲ್ಲಿಯೂ ಸಹ ಹಲವಾರು ಸುಧಾರಣೆಗಳನ್ನು ಚುನಾವಣಾ ಪದ್ಧತಿಯಲ್ಲಿ ಮಾಡಲಾಗಿದೆ. ವಿದ್ಯುನ್ಮಾನ ಮತಯಂತ್ರ ಮತ್ತು ಗುರುತಿನ ಪತ್ರ ಇವುಗಳಲ್ಲಿ ಮುಖ್ಯವಾದವು. ಭಾರತದಲ್ಲಿ ಅನಕ್ಷರಸ್ಥರೇ ಅಧಿಕವಾಗಿರುವುದರಿಂದ ಈ ಯಂತ್ರದ ಬಳಕೆಯ ಸದುಪಯೋಗವನ್ನು ಜನತೆಯು ಪಡೆಯಬಹುದು. ಈ ಯಂತ್ರದ ಸಹಾಯದಿಂದ ಚುನಾವಣಾ ಪ್ರಕ್ರಿಯೆ ವಿಳಂಬವಾಗುವುದನ್ನು ತಡೆಯಬಹುದಾಗಿದೆ. ಗುರುತಿನ ಪತ್ರವೂ ಕೂಡ ಮತ್ತೊಂದು ಪ್ರಮುಖವಾದ ಸುಧಾರಣೆಯಾಗಿದೆ. ಇದು ತಾನು ಆ ರಾಷ್ಟ್ರದ ಪೌರ ಎಂದು ಗುರುತಿಸಿಕೊಳ್ಳುವ ವಿಧಾನಗಳಲ್ಲಿ ಒಂದು ಸಾಧನವಾಗಿದೆ. ಗುರುತಿನ ಪತ್ರದಿಂದ ವ್ಯಕ್ತಿಯು ತಾನು ಮತದಾರ ಪ್ರಜೆ ಎಂದು ಗುರುತಿಸಿಕೊಳ್ಳಬಹುದು. ಮತ್ತು ಇದರಿಂದ ಮತದಾನ ಸಂದರ್ಭದಲ್ಲಿ ಒಬ್ಬರ ಹೆಸರಿನಲ್ಲಿ ಮತ್ತೊಬ್ಬರು ಮತ ಹಾಕುವುದನ್ನು (ಫ್ರಾಕ್ಸಿ ಮತ) ತಡೆಯಬಹುದು. ಹಾಗೆಯೇ, ಅಭ್ಯರ್ಥಿಗಳ ಶಿಕ್ಷಣ, ಆಸ್ತಿ, ಅಪರಾಧದ ಬಗೆಗಿನ ಕಡ್ಡಾಯ ಘೋಷಣೆಯು ಕೂಡ ಪ್ರಮುಖವಾದ ಸುಧಾರಣೆಯಾಗಿದ್ದು, ಪ್ರಜಾಪ್ರಭುತ್ವ ತತ್ವದಲ್ಲಿ ಜನರೇ ಪ್ರತಿನಿಧಿಗಳನ್ನು ನೇರವಾಗಿ ಆಯ್ಕೆ ಮಾಡುವುದರಿಂದ ಪ್ರಜೆಗಳಿಗೆ ಪ್ರತಿನಿಧಿಗಳ ಸಂಪೂರ್ಣ ಮಾಹಿತಿ ದೊರೆಯಬೇಕು. ಆಗಮಾತ್ರ ರಾಜಕಾರಣ ಮತ್ತು ರಾಜಕೀಯ ವ್ಯವಸ್ಥೆಯು ಪಾರದರ್ಶಕತೆಯಿಂದ ಕೂಡಿ ಉತ್ತಮ ಅಭ್ಯರ್ಥಿಗಳ ಆಯ್ಕೆ ಸಾಧ್ಯವಾಗುತ್ತದೆ.

**೪.೪ ಪಾರಿಭಾಷಿಕ ಪದಕೋಶ**

೧. Election Commission - ಚುನಾವಣಾ ಆಯೋಗ
೨. Election Process - ಚುನಾವಣಾ ಪ್ರಕ್ರಿಯೆ
೩. Franchise - ಮತದಾನ
೪. Identity Card - ಗುರುತಿನ ಪತ್ರ
೫. Electoral College - ಚುನಾಯಿತ ಕಾಲೇಜು/ಚುನಾಯಿತ ಸಮುದಾಯ
೬. Reformation - ಸುಧಾರಣೆ
೭. Electronic Voting Machine - ವಿದ್ಯುನ್ಮಾನ ಮತ ಯಂತ್ರ

**೪.೫ ಪ್ರಶ್ನೆಗಳು**

**ಅ. ಒಂದು ಅಂಕದ ಪ್ರಶ್ನೆಗಳು**

೧. ಚುನಾವಣೆ ಎಂದರೇನು?
೨. ನೇರ ಚುನಾವಣೆ ಎಂದರೇನು?
೩. ಪರೋಕ್ಷ ಚುನಾವಣೆ ಎಂದರೇನು?
೪. ರಾಷ್ಟ್ರಪತಿಯನ್ನು ಯಾರು ಆಯ್ಕೆ ಮಾಡುತ್ತಾರೆ?
೫. ವಯಸ್ಕ ಮತದಾನ ಪದ್ಧತಿ ಎಂದರೇನು?

೬. ಸ್ವಿಟ್ಜರ್ಲೆಂಡಿನಲ್ಲಿ ಮತದಾನ ಮಾಡಲು ನಿಗದಿಪಡಿಸಿರುವ ವಯೋಮಿತಿ ಎಷ್ಟು?
೭. ಭಾರತದಲ್ಲಿ ಮತದಾನ ಮಾಡಲು ನಿಗದಿಪಡಿಸಿರುವ ವಯೋಮಿತಿ ಎಷ್ಟು?
೮. ಚುನಾವಣಾ ಆಯೋಗದ ಮುಖ್ಯ ಉದ್ದೇಶವನ್ನು ತಿಳಿಸಿ.
೯. ಸಂವಿಧಾನದ ಎಷ್ಟನೇ ವಿಧಿಯು ಚುನಾವಣಾ ಆಯೋಗದ ರಚನೆಯ ಬಗ್ಗೆ ವಿವರಿಸಿದೆ?
೧೦. ಚುನಾವಣಾಧಿಕಾರಿಗಳ ಅಧಿಕಾರಾವಧಿ ಎಷ್ಟು?
೧೧. ನೀತಿ ಸಂಹಿತೆ ಎಂದರೇನು?
೧೨. ಪ್ರಜಾಪ್ರತಿನಿಧಿ ಕಾಯ್ದೆಯು ಜಾರಿಗೆ ಬಂದ ವರ್ಷ ಯಾವುದು?
೧೩. ವಿದ್ಯುನ್ಮಾನ ಮತಯಂತ್ರವನ್ನು ಮೊದಲು ಎಷ್ಟು ಚುನಾವಣಾ ಕ್ಷೇತ್ರಗಳಲ್ಲಿ ಬಳಸಲಾಯಿತು?
೧೪. ವಿದ್ಯುನ್ಮಾನಯಂತ್ರ ಎಷ್ಟು ಮತಗಳನ್ನು ರೆಕಾರ್ಡ್ ಮಾಡಿಕೊಳ್ಳುತ್ತದೆ?

**ಆ. ಎರಡು ಅಂಕದ ಪ್ರಶ್ನೆಗಳು**

೧. ರೈನೋ ರವರ ಅಭಿಪ್ರಾಯವನ್ನು ವ್ಯಕ್ತಪಡಿಸಿ?
೨. ನೇರ ಚುನಾವಣೆಯ ಎರಡು ಅನುಕೂಲಗಳನ್ನು ಬರೆಯಿರಿ.?
೩. ಪರೋಕ್ಷ ಚುನಾವಣೆಯ ಎರಡು ಅನುಕೂಲಗಳನ್ನು ಬರೆಯಿರಿ.?
೪. ನೇರ ಚುನಾವಣೆಯ ಎರಡು ದೋಷಗಳನ್ನು ಹೆಸರಿಸಿ.?
೫. ಪರೋಕ್ಷ ಚುನಾವಣೆಯ ಎರಡು ದೋಷಗಳನ್ನು ಹೆಸರಿಸಿ.?
೬. ಚುನಾವಣಾ ಪ್ರಕ್ರಿಯೆ ಎಂದರೇನು?
೭. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯ ಎರಡು ದೋಷಗಳನ್ನು ಹೆಸರಿಸಿ.
೮. ಮತದಾನದ ಹಕ್ಕನ್ನು ಪಡೆಯಲು ಯಾರು ಅನರ್ಹರು?
೯. ಚುನಾವಣಾ ಆಯೋಗದ ಎರಡು ಪ್ರಮುಖ ಕಾರ್ಯಗಳನ್ನು ತಿಳಿಸಿ.
೧೦. ಚುನಾವಣಾಧಿಕಾರಿಗಳ ನೇಮಕ ಮತ್ತು ಅಧಿಕಾರವಧಿಯನ್ನು ವಿವರಿಸಿ?
೧೧. ವಿದ್ಯುನ್ಮಾನಯಂತ್ರ ಹೊಂದಿರುವ ಘಟಕಗಳನ್ನು ಹೆಸರಿಸಿ?
೧೨. ಪರೋಕ್ಷ ಚುನಾವಣೆಯ ಎರಡು ಅನುಕೂಲಗಳನ್ನು ತಿಳಿಸಿ.
೧೩. ಉಪಚುನಾವಣೆ ಎಂದರೇನು?
೧೪. ಲೋಕಸಭೆ ಮತ್ತು ವಿಧಾನಸಭೆ ಚುನಾವಣೆಗಳಿಗೆ ಅಭ್ಯರ್ಥಿಯ ಪ್ರಚಾರಕ್ಕಾಗಿ ಎಷ್ಟು ಹಣವನ್ನು ವೆಚ್ಚ ಮಾಡಬಹುದು.
೧೫. ಲೋಕಸಭೆ ಮತ್ತು ವಿಧಾನಸಭೆ ಚುನಾವಣೆ ಸ್ಪರ್ಧಿಸುವ ಅಭ್ಯರ್ಥಿ ಎಷ್ಟು ಠೇವಣಿ ಮುಂಗಡವಾಗಿ ಕಟ್ಟಬೇಕು?

**ಇ. ಐದು ಅಂಕದ ಪ್ರಶ್ನೆಗಳು**

೧. ಚುನಾವಣೆ ಎಂದರೇನು? ವ್ಯಾಖ್ಯಾನಗಳ ಸಹಿತ ವಿವರಿಸಿ.
೨. ನೇರ ಚುನಾವಣೆಯ ಗುಣಗಳನ್ನು ವಿವರಿಸಿ.
೩. ನೇರ ಚುನಾವಣೆ ದೋಷಗಳನ್ನು ವಿವರಿಸಿ.

೪. ಪರೋಕ್ಷ ಚುನಾವಣೆ ಗುಣಗಳನ್ನು ವಿವರಿಸಿ.

೫. ಪರೋಕ್ಷ ಚುನಾವಣೆ ದೋಷಗಳನ್ನು ವಿವರಿಸಿ.

೬. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯ ಗುಣಗಳನ್ನು ವಿವರಿಸಿ.

೭. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿಯ ದೋಷಗಳನ್ನು ವಿವರಿಸಿ.

೮. ಚುನಾವಣಾ ಆಯೋಗದ ರಚನೆ ಮತ್ತು ಚುನಾವಣಾಧಿಕಾರಿಗಳ ಪದಚ್ಯುತಿಯ ಕ್ರಮಗಳನ್ನು ವಿವರಿಸಿ.

೯. ವಿದ್ಯುನ್ಮಾನ ಮತಯಂತ್ರದ ಗುಣಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

೧೦. ಗುರುತಿನ ಪತ್ರದ ಬಗ್ಗೆ ಟಿಪ್ಪಣಿ ಬರೆಯಿರಿ.

**ಈ. ಹತ್ತು ಅಂಕದ ಪ್ರಶ್ನೆಗಳು**

೧. ನೇರ ಚುನಾವಣೆಯ ಅರ್ಥ ಹಾಗೂ ಗುಣದೋಷಗಳನ್ನು ವಿವರಿಸಿ.

೨. ಪರೋಕ್ಷ ಚುನಾವಣೆ ಅರ್ಥ ಹಾಗೂ ಗುಣದೋಷಗಳನ್ನು ವಿವರಿಸಿ.

೩. ಸಾರ್ವತ್ರಿಕ ಮತದಾನ ಪದ್ಧತಿಯ ಗುಣದೋಷಗಳನ್ನು ಸ್ಪಷ್ಟೀಕರಿಸಿ.

೪. ವಿದ್ಯುನ್ಮಾನ ಮತಯಂತ್ರದ ಅನುಕೂಲಗಳನ್ನು ಕೂಲಂಕಷವಾಗಿ ವಿವರಿಸಿ.

೫. ಚುನಾವಣಾ ಪ್ರಕ್ರಿಯೆಯನ್ನು ವಿವರಣಾತ್ಮಕವಾಗಿ ಸ್ಪಷ್ಟೀಕರಿಸಿ.

೬. ಚುನಾವಣಾ ಆಯೋಗದ ಅಧಿಕಾರ ಮತ್ತು ಕಾರ್ಯಗಳನ್ನು ತಿಳಿಸಿ.

೭. ರಾಜ್ಯದ ಹಣಕಾಸಿನ ಮೂಲಕ ಚುನಾವಣಾ ಹಣಕಾಸಿನ ಸುಧಾರಣೆಯನ್ನು ವಿವರಿಸಿ.

**ಉ. ಅಭ್ಯಾಸ ಚಟುವಟಿಕೆಗಳು**

೧. ಭಾರತದ ಚುನಾವಣಾ ವಿಧಾನದ ಗುಣಲಕ್ಷಣಗಳನ್ನು ವಿವರಿಸಿ.

೨. ಸಾರ್ವತ್ರಿಕ ವಯಸ್ಕ ಮತದಾನ ಪದ್ಧತಿ ಅವಶ್ಯಕವೇ ಅಥವಾ ನಿರ್ಬಂಧಿತ ಮತದಾನ ಪದ್ಧತಿ ಉತ್ತಮವೇ? ಚರ್ಚಿಸಿ.

೩. ಭಾರತದಲ್ಲಿರುವ ಚುನಾವಣಾ ಆಯೋಗದ ಕಾರ್ಯವಿಧಾನಗಳನ್ನು ಚರ್ಚಿಸಿ.

೪. ಭಾರತದಲ್ಲಿ ಚುನಾವಣಾ ಪದ್ಧತಿಯ ಸುಧಾರಣೆಗಳು ಸಫಲವಾಗಿಯೇ? ಚರ್ಚಿಸಿ.

## ಅಧ್ಯಾಯ ೫

# ಭಾರತದಲ್ಲಿ ರಾಜಕೀಯ ಪಕ್ಷ ಪದ್ಧತಿ

### ೫.೧ ರಾಜಕೀಯ ಪಕ್ಷ ಪರಿಕಲ್ಪನೆಯ ಪರಿಚಯ

ರಾಜಕೀಯ ಪಕ್ಷಗಳು ಪ್ರಜಾಪ್ರಭುತ್ವದಲ್ಲಿ ವಿಶೇಷ ಪ್ರಾಮುಖ್ಯತೆ ಪಡೆದಿವೆ. ಚುನಾವಣಾ ಸಮಯದಲ್ಲಿ ಮತದಾರರಲ್ಲಿ ರಾಜಕೀಯ ಪ್ರಜ್ಞೆಯನ್ನು ಜಾಗೃತಗೊಳಿಸುತ್ತವೆ. ರಾಜಕೀಯ ಪಕ್ಷಗಳು ಸಾಮಾಜಿಕ ಚಿಂತನೆಯನ್ನು ರಾಜಕೀಯ ಕ್ರಿಯೆಯನ್ನಾಗಿಸಲು ಬೆಳೆದು ಬಂದಿವೆ.

ಆಧುನಿಕ ಕಾಲದ ಪ್ರತಿನಿಧಿ ಸರ್ಕಾರವು ರಾಜಕೀಯ ಪಕ್ಷಗಳೊಡನೆ ಕಾರ್ಯನಿರ್ವಹಿಸಲು ಸಾಧ್ಯವಿಲ್ಲ. ಆದರೂ ಸುಮಾರು, ನೂರ ಐವತ್ತು ವರ್ಷಗಳಿಗೆ ಮೊದಲು ರಾಜಕೀಯ ಪಕ್ಷ ಪದ್ಧತಿಯ ಬಗ್ಗೆ ಏನೂ ತಿಳಿದಿರಲಿಲ್ಲ. ಅಮೇರಿಕಾ ಸಂಯುಕ್ತ ಸಂಸ್ಥಾನದ ಸಂಸ್ಥಾಪಕರಿಗೆ ಪಕ್ಷಗಳ ಪ್ರಭಾವ ತೀರಾ ಕೆಟ್ಟದಾಗಿತ್ತು. ಸಂಪ್ರದಾಯಿಕ ಪ್ರಜಾಪ್ರಭುತ್ವದಲ್ಲಿ ಮಾತ್ರ ಪಕ್ಷಗಳು ಹೆಚ್ಚು ಪ್ರಾಮುಖ್ಯತೆ ಪಡೆದಿದ್ದವು. ಪ್ರಜಾ ಸಮುದಾಯಕ್ಕೆ ಮತಾಧಿಕಾರ ವನ್ನು ನೀಡಿದ ಪರಿಣಾಮವಾಗಿ ರಾಜಕೀಯ ಪಕ್ಷಗಳ ಕಾರ್ಯಾಚರಣೆಯು ರಾಜಕೀಯ ಅಧಿಕಾರಕ್ಕಾಗಿ ನಡೆಯುವ ಹೋರಾಟವನ್ನು ಒಂದು ಸಾಂಸ್ಥಿಕ ಕ್ರಿಯೆಯನ್ನಾಗಿಸಿತು. ರಾಜ್ಯ ದಲ್ಲಿನ ಪ್ರಮುಖ ವಿಷಯಗಳ ಬಗ್ಗೆ ಏಕಾಭಿಪ್ರಾಯವನ್ನು ಹೊಂದಿ ಹಾಗೂ ಅದರ ಪರಿಹಾರೋಪಾಯಗಳನ್ನು ರೂಪಿಸುವ ಸಲುವಾಗಿ ಒಂದುಗೂಡಿರುವ ಸಂಘಟಿತ ಸಮು ದಾಯವೇ ರಾಜಕೀಯ ಪಕ್ಷ ಎನ್ನಬಹುದು.

### ವ್ಯಾಖ್ಯಾನಗಳು

ರಾಜಕೀಯ ಪಕ್ಷದ ಬಗ್ಗೆ ಹಲವಾರು ಲೇಖಕರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ರಾಬರ್ಟ್ ಸನ್‌ರವರ ಪ್ರಕಾರ "ಸರ್ಕಾರದ ಮೇಲೆ ನ್ಯಾಯಸಮ್ಮತವಾದ ನಿಯಂತ್ರಣ ವನ್ನು ಪಡೆಯಬೇಕೆಂಬ ನಿರ್ದಿಷ್ಟ ಉದ್ದೇಶಕ್ಕಾಗಿ ಸಂಘಟಿತವಾದ ಜನ ಸಮುದಾಯವೇ ರಾಜಕೀಯ ಪಕ್ಷ".

ಲೀಕಾಕ್‌ರವರ ಅಭಿಪ್ರಾಯದಂತೆ "ಸಾರ್ವಜನಿಕ ಪ್ರಶ್ನೆಗಳ ಬಗ್ಗೆ ಹೆಚ್ಚು ಕಡಿಮೆ ಏಕಾಭಿಪ್ರಾಯ ಹೊಂದಿರುವ ಸುಸಂಘಟಿತ ಪ್ರಜಾಸಮೂಹವೇ ರಾಜಕೀಯ ಪಕ್ಷ".

ಆರ್.ಜಿ. ಗೆಟಲ್‌ರವರ ಪ್ರಕಾರ "ರಾಜಕೀಯ ಘಟಕಗಳಾಗಿ ಕಾರ್ಯನಿರತವಾಗಿರುವ ಮತ್ತು ತಮ್ಮ ಮತಾಧಿಕಾರದ ಮೂಲಕ ಸರ್ಕಾರದ ಆಡಳಿತವನ್ನು ನಿಯಂತ್ರಿಸುವ ಹಾಗೂ ಅದರ ಸಾಮಾನ್ಯ ಧೋರಣೆಗಳನ್ನು ರೂಪಿಸುವ ಉದ್ದೇಶ ಹೊಂದಿರುವ ಪ್ರಜೆಗಳ ಸಮುದಾಯವೇ ರಾಜಕೀಯ ಪಕ್ಷ".

ಗಿಲ್‌ಕ್ರಿಸ್ಟ್‌ರವರ ಪ್ರಕಾರ "ಸಮಾನ ರಾಜಕೀಯ ವಿಚಾರಗಳನ್ನುಳ್ಳ ಒಂದು ರಾಜಕೀಯ ಘಟವಾಗಿ ವರ್ತಿಸುವ ಸುಸಂಘಟಿತ ನಾಗರೀಕ ಸಮುದಾಯವೇ ರಾಜಕೀಯ ಪಕ್ಷವೆನಿಸಿದೆ".

ಎಡ್ಮಂಡ್‌ಬರ್ಕ್‌ರವರ ಪ್ರಕಾರ "ತಾನು ಒಪ್ಪಿಕೊಂಡಿರುವ ತತ್ವಗಳಿಗೆ ಅನುಗುಣವಾಗಿ ಸಾರ್ವಜನಿಕ ಹಿತಾಸಕ್ತಿಯನ್ನು ಸಾಮೂಹಿಕವಾಗಿ ಸಾಧಿಸಲು ಸಂಘಟಿತವಾಗಿರುವ ಸಮುದಾಯವೇ ರಾಜಕೀಯ ಪಕ್ಷ".

ಹರ್ಮನ್‌ಫೈನರ್‌ರವರ ದೃಷ್ಟಿಯಲ್ಲಿ "ಸರ್ಕಾರದ ರಚನೆ ಮತ್ತು ಅದರ ಕಾರ್ಯಸ್ವರೂಪದ ಬಗ್ಗೆ ತಾತ್ವಿಕವಾಗಿ ವಿಶಾಲಾರ್ಥದಲ್ಲಿ ಒಂದಾಗಿ ಮುಂದುವರಿಯುವ ಜನಸ್ತೋಮವೇ ರಾಜಕೀಯ ಪಕ್ಷವಾಗಿದೆ".

ಈ ಮೇಲಿನ ವ್ಯಾಖ್ಯಾನಗಳಿಂದ ತಿಳಿದು ಬರುವ ಅಂಶವೆಂದರೆ ರಾಜಕೀಯ ಪಕ್ಷದ ರಚನೆಗೆ ನಾಲ್ಕು ಅಗತ್ಯಾಂಶಗಳ ಅವಶ್ಯಕತೆಯಿರುತ್ತದೆ.

೧. ಪ್ರಜೆಗಳು ಸಂಘಟಿತರಾಗಿರಬೇಕು.
೨. ಏಕರೂಪದ ತತ್ವಗಳಿರಬೇಕು.
೩. ರಾಜಕೀಯ ಅಧಿಕಾರವನ್ನು ಹೊಂದುವ ಉದ್ದೇಶವಿರಬೇಕು.
೪. ರಾಜಕೀಯ ಅಧಿಕಾರವನ್ನು ಗಳಿಸಲು ಕೇವಲ ಶಾಂತಿಯುತ ಮಾರ್ಗವನ್ನು ಅನುಸರಿಸಬೇಕು.

**೫.೨ ಪಕ್ಷ ಪದ್ಧತಿಯ ಸ್ವರೂಪ**

ಭಾರತವನ್ನು ವಿಶ್ವದಲ್ಲೇ ಅತ್ಯಂತ ಪ್ರಬಲ ಹಾಗೂ ವಿಶಾಲವಾದ ಪ್ರಜಾಪ್ರಭುತ್ವ ರಾಷ್ಟ್ರ ಎಂದು ಕರೆಯಬಹುದಾಗಿದೆ. ಭಾರತದಲ್ಲಿ ಪಕ್ಷ ಪದ್ಧತಿಯು ತನ್ನದೇ ಆದ ಹಲವಾರು ಲಕ್ಷಣಗಳನ್ನು ಹೊಂದಿದೆ. ಭಾರತದಲ್ಲಿ ಬಹುಪಕ್ಷ ಪದ್ಧತಿ ಅಸ್ತಿತ್ವದಲ್ಲಿದೆ.

**೧. ಬಹುಪಕ್ಷಪದ್ಧತಿ**

ಭಾರತವು ಬಹುಪಕ್ಷ ಪದ್ಧತಿಯನ್ನು ಅಳವಡಿಸಿಕೊಂಡ ರಾಷ್ಟ್ರವಾಗಿದೆ. ರಾಜಕೀಯ ಚಟುವಟಿಕೆಗಳಲ್ಲಿ ಹಲವಾರು ರಾಷ್ಟ್ರೀಯ ಮತ್ತು ರಾಜ್ಯ ಪಕ್ಷಗಳು ಭಾಗವಹಿಸುತ್ತವೆ. ರಾಷ್ಟ್ರೀಯ ಪಕ್ಷಗಳು ರಾಷ್ಟ್ರಮಟ್ಟದ ಸ್ಥಾನವನ್ನು ಹೊಂದಿರುತ್ತವೆ. ರಾಷ್ಟ್ರದ ರಾಜಕೀಯ ಚಟುವಟಿಕೆಗಳಲ್ಲಿ ಎರಡಕ್ಕಿಂತ ಹೆಚ್ಚಿನ ರಾಜಕೀಯ ಪಕ್ಷಗಳು ಭಾಗವಹಿಸುವ ಪದ್ಧತಿಯನ್ನು 'ಬಹುಪಕ್ಷಪದ್ಧತಿ' ಎಂದು ಕರೆಯಾಗುತ್ತದೆ. ಸಾರ್ವತ್ರಿಕ ಚುನಾವಣೆಯಲ್ಲಿ ಯಾವ ಪಕ್ಷ ನಾಲ್ಕು ರಾಜ್ಯಗಳಲ್ಲಿ ಶೇ. ನಾಲ್ಕರಷ್ಟು ಮತಗಳನ್ನು ಪಡೆಯುತ್ತದೆಯೋ ಅಂತಹ ಪಕ್ಷವನ್ನು ರಾಷ್ಟ್ರೀಯ ಪಕ್ಷವೆಂದು ಕರೆಯಲಾಗುತ್ತದೆ.

## ೨. ಒಡಕು ಮತ್ತು ವಿಲೀನ

ಭಾರತದ ರಾಜಕೀಯ ಪಕ್ಷಗಳಲ್ಲಿ ಒಡಕುಂಟಾಗುವುದು ಮತ್ತು ಬೇರೆ ಪಕ್ಷಗಳಲ್ಲಿ ವಿಲೀನವಾಗುವುದು ಪ್ರಮುಖ ಲಕ್ಷಣವಾಗಿದೆ. ಪಕ್ಷದ ನೀತಿ, ಧೋರಣೆಗಳಲ್ಲಿ ಬದಲಾವಣೆ ಯಾದಾಗ ಅದೇ ಪಕ್ಷದಲ್ಲಿರುವ ಕೆಲವು ನಾಯಕರಿಗೆ ಹಿಡಿಸದೆ ಆ ಪಕ್ಷದಿಂದ ಹೊರಬಂದು ಬೇರೊಂದು ಪಕ್ಷವನ್ನು ಸೇರಬಹುದು. ರಾಷ್ಟ್ರೀಯ ಕಾಂಗ್ರೆಸ್, ಜನತಾದಳ, ಡಿ.ಎಂ.ಕೆ. ಪಕ್ಷಗಳು ಇದಕ್ಕೆ ಉತ್ತಮ ಉದಾಹರಣೆಯಾಗಿವೆ.

## ೩. ವಾಮಪಂಥೀಯ ಮತ್ತು ಬಲಪಂಥೀಯ ಪಕ್ಷಗಳು

ರಾಜಕೀಯ ತತ್ವಗಳ ಆಧಾರದ ಮೇಲೆ ರಾಜಕೀಯ ಪಕ್ಷಗಳನ್ನು ವಾಮಪಂಥೀಯ ಮತ್ತು ಬಲಪಂಥೀಯ ಪಕ್ಷಗಳೆಂದು ಕರೆಯಲಾಗಿದೆ. ವಾಮಪಂಥೀಯ ಪಕ್ಷಗಳು ರಾಜಕೀಯ, ಆರ್ಥಿಕ, ಸಾಮಾಜಿಕ ಬದಲಾವಣೆಗಳನ್ನು ತ್ವರಿತಗತಿಯಲ್ಲಿ ಆಗಬೇಕೆಂದು ಪ್ರತಿಪಾದಿಸುತ್ತವೆ.

ಉದಾಹರಣೆಗೆ ಸಿ.ಪಿ.ಎಂ., ಸಿ.ಪಿ.ಐ. ಹಾಗೂ ಸಮಾಜವಾದಿ ಪಕ್ಷಗಳು ವಾಮಪಂಥೀಯ ಪಕ್ಷಗಳು. ಇವು ತ್ವರಿತಗತಿಯ ಬದಲಾವಣೆಯನ್ನು ಪ್ರತಿಪಾದಿಸುತ್ತವೆ. ಇಂತಹ ತ್ವರಿತಗತಿಯ ಬದಲಾವಣೆಯನ್ನು ಬಯಸದೆ ಹಂತಹಂತವಾಗಿ ನಿಧಾನಗತಿಯ ಬದಲಾವಣೆಯನ್ನು ತರಲು ಪ್ರಯತ್ನಿಸುವ ಕಾಂಗ್ರೆಸ್(ಐ), ಜನತಾದಳ, ಬಿ.ಜೆ.ಪಿ. ಮುಂತಾದವು ಬಲಪಂಥೀಯ ಪಕ್ಷಗಳಾಗಿವೆ.

## ೪. ಕೋಮುವಾದಿ ಪಕ್ಷಗಳು

ಭಾರತದಲ್ಲಿ ಹಲವಾರು ಕೋಮುವಾದ ಸಂಘಟನೆಗಳಿರುವಂತೆ ಕೋಮುವಾದಿ ಪಕ್ಷಗಳು ಅಸ್ತಿತ್ವದಲ್ಲಿರುವುದನ್ನು ಕಾಣಬಹುದಾಗಿದೆ. ಇಂತಹ ಪಕ್ಷಗಳು ನಿರ್ದಿಷ್ಟವಾಗಿ ತಮ್ಮದೇ ಆದ ಜಾತಿ ಅಥವಾ ಧರ್ಮ ಆಧಾರಿತವಾದ ಗುಂಪುಗಳನ್ನು ಪ್ರತಿನಿಧಿಸುತ್ತವೆ. ಕೇರಳದ ಕೇರಳ ಕಾಂಗ್ರೆಸ್, ಎನ್.ಡಿ.ಪಿ., ಪಂಜಾಬಿನ ಅಕಾಲಿದಳ, ಮುಸ್ಲಿಂಲೀಗ್ ಮುಂತಾದ ಪಕ್ಷಗಳನ್ನು ಕೋಮುವಾದಿ ಪಕ್ಷಗಳೆಂದು ಕರೆಯಬಹುದಾಗಿದೆ.

## ೫. ಜನಪ್ರಿಯ ಮತ್ತು ದಕ್ಷನಾಯಕತ್ವದ ಅವಲಂಬನೆ

ಭಾರತದಲ್ಲಿ ರಾಜಕೀಯ ಪಕ್ಷಗಳ ಅಳಿವು ಉಳಿವು ಪಕ್ಷದ ನಾಯಕರ ದಕ್ಷನಾಯಕತ್ವ ಹಾಗೂ ವರ್ಚಸ್ಸನ್ನು ಅವಲಂಬಿಸಿರುತ್ತದೆ. ರಾಷ್ಟ್ರೀಯ ಕಾಂಗ್ರೆಸ್‌ಪಕ್ಷ ನೆಹರೂ, ಇಂದಿರಾ ಗಾಂಧಿ, ರಾಜೀವ್‌ಗಾಂಧಿಯವರ ನಾಯಕತ್ವವನ್ನು ಅವಲಂಬಿಸಿತ್ತು. ಹಾಗೂ ಭಾರತೀಯ ಜನತಾಪಕ್ಷವು ಅಟಲ್‌ಬಿಹಾರಿ ವಾಜಪೇಯಿ, ಎಲ್.ಕೆ. ಅಡ್ವಾನಿ ಮುಂತಾದ ನಾಯಕರನ್ನು ಅವಲಂಬಿಸಿದೆ. ತೆಲುಗುದೇಶಂ ಪಕ್ಷ ಎನ್.ಟಿ.ರಾಮರಾವ್‌ರವರ ನಾಯಕತ್ವವನ್ನು ಈಗ ಚಂದ್ರಬಾಬುನಾಯ್ಡು, ಎ.ಐ.ಡಿ.ಎಂ.ಕೆ. ಪಕ್ಷ ಎಂ.ಜಿ. ರಾಮಚಂದ್ರನ್ ಈಗ ಜಯಲಲಿತ ರವರ ನಾಯಕತ್ವವನ್ನು ಅವಲಂಬಿಸಿದೆ.

### ೬. ಕಾಂಗ್ರೆಸ್ ಪದ್ಧತಿ

ಭಾರತವು ಸ್ವಾತಂತ್ರ್ಯಗೊಂಡ ನಂತರ ಸುಮಾರು ವರ್ಷಗಳವರೆಗೆ ಕಾಂಗ್ರೆಸ್ ತನ್ನ ಪ್ರಭುತ್ವ ಸ್ಥಾಪಿಸಿ ಏಕಸ್ವಾಮ್ಯತೆಯನ್ನು ಸಾಧಿಸಿತ್ತು. ಇದನ್ನು ಕಾಂಗ್ರೆಸ್ ಪದ್ಧತಿ ಎಂದು ಕರೆದಿದ್ದಾರೆ. ಆದರೆ ಇಂದು ಪಕ್ಷ ತನ್ನ ಏಕಸ್ವಾಮ್ಯ ಪ್ರಭುತ್ವವನ್ನು ಕಳೆದುಕೊಂಡಿದೆ. ಅದೇ ರೀತಿ ರಾಜ್ಯಗಳಲ್ಲಿ ಅನೇಕ ಪಕ್ಷಗಳು ಪ್ರಭುತ್ವಕ್ಕೆ ಬರುತ್ತಿದ್ದು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸರಕಾರ ರಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ.

### ೭. ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳು

ಭಾರತದಲ್ಲಿ ಪಕ್ಷ ಪದ್ಧತಿಯಲ್ಲಿ ಎರಡು ಪ್ರಮುಖ ವಿಧಗಳನ್ನು ಕಾಣಬಹುದು. ಅವುಗಳೆಂದರೆ ರಾಷ್ಟ್ರೀಯ ಪಕ್ಷ ಮತ್ತು ಪ್ರಾದೇಶಿಕ ಪಕ್ಷ. ರಾಷ್ಟ್ರಮಟ್ಟದಲ್ಲಿ ಅಂದರೆ ಕೇಂದ್ರದಲ್ಲಿ ಆಡಳಿತ ನಡೆಸುವ ಮತಗಳನ್ನು ಪಡೆಯಬೇಕು ಹಾಗೂ ರಾಜ್ಯಮಟ್ಟದಲ್ಲಿ ಅಧಿಕಾರ ಸ್ಥಾಪಿಸುವ ಮನೋಭಾವ ಹೊಂದಿರುವ ಪಕ್ಷಗಳೆಲ್ಲ ಪ್ರಾದೇಶಿಕ ಪಕ್ಷಗಳಾಗಿವೆ. ಇತ್ತೀಚೆಗೆ ಇವು ಕೇಂದ್ರದಲ್ಲಿಯೂ ಮೈತ್ರಿಕೂಟದೊಂದಿಗೆ ಪ್ರಾದೇಶಿಕ ಪಕ್ಷಗಳ ಒಡೆತನ ಮತ್ತು ಪಾತ್ರವನ್ನು ಗಮನಿಸಬಹುದು.

### ೮. ಗುರಿ ಮತ್ತು ಉದ್ದೇಶ

ರಾಜಕೀಯ ಪಕ್ಷಗಳು ತಮ್ಮದೇ ಆದ ಗುರಿ ಮತ್ತು ಉದ್ದೇಶಗಳನ್ನು ಹೊಂದಿರುತ್ತವೆ. ಆ ಉದ್ದೇಶಗಳು ಕೆಲವೊಮ್ಮೆ ತಾತ್ಕಾಲಿಕವಾದವುಗಳೂ ಕೆಲವೊಮ್ಮೆ ಅಂತಿಮವಾದವುಗಳೂ ಆಗಿರುತ್ತವೆ. ಪಕ್ಷದ ಯೋಜನೆಯಲ್ಲಿ ಕಾನೂನು ಮತ್ತು ಸರ್ಕಾರಗಳ ಬಗ್ಗೆ ನಿರ್ದಿಷ್ಟ ಅಭಿಪ್ರಾಯಗಳು ಸ್ಪಷ್ಟಗೊಂಡಿರುತ್ತವೆ. ಜನತೆ ರಾಜಕೀಯ ಪರಿಸ್ಥಿತಿಯನ್ನು ನಿಭಾಯಿಸುವ ಬಗ್ಗೆ ವಿವರಣೆ ಹೊಂದಿರುತ್ತದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಸರ್ಕಾರದ ಅಧಿಕಾರವನ್ನು ಹೊಂದುವ ಪ್ರಾಪಂಚಿಕ ಬಯಕೆಯನ್ನು ಹೊಂದಿರುತ್ತದೆ. ಭಾರತದಲ್ಲಿ ಚುನಾವಣೆಯ ಸಂದರ್ಭದಲ್ಲಿ ಪಕ್ಷಗಳು ತಮ್ಮ ಧ್ಯೇಯೋದ್ದೇಶಗಳ ಪ್ರನಾಳಿಕೆಯನ್ನು ಬಿಡುಗಡೆ ಮಾಡುತ್ತವೆ. ಆದರೆ ವಾಸ್ತವವಾಗಿ ಪಕ್ಷಗಳು ಹೊಂದಿರುವ ಗುರಿಗಳನ್ನು ತಲುಪಿಸುವುದರಲ್ಲಿ ಭಾಗಶಃ ಸಫಲವಾಗಿವೆ.

ಒಟ್ಟಿನಲ್ಲಿ ಹೇಳುವುದಾದರೆ ಎಲ್ಲ ರಾಜಕೀಯ ಪಕ್ಷಗಳು ಎಷ್ಟೇ ಭಿನ್ನತೆ ಹೊಂದಿದ್ದರೂ ಎಲ್ಲ ವಿಷಯಗಳಲ್ಲಿ ವಿರೋಧ ವ್ಯಕ್ತಪಡಿಸುವುದಿಲ್ಲ.

### ೯. ಸಮತೋಲನವಿಲ್ಲದ ಪಕ್ಷಪದ್ಧತಿ

ಭಾರತದಲ್ಲಿ ಬಹುಪಕ್ಷಪದ್ಧತಿಯಿದ್ದು ಪಕ್ಷಗಳಲ್ಲಿ ಸಮತೋಲನವಿಲ್ಲ. ಏಕೆಂದರೆ ಕಾಂಗ್ರೆಸ್ ಪಕ್ಷಕ್ಕೆ ಸುಲಭವಾಗಿ ಅಥವಾ ಪ್ರತಿಯಾಗಿ ಯಾವ ಪಕ್ಷವೂ ಬೆಳೆಯಲಿಲ್ಲ. ೧೯೭೭ ರಲ್ಲಿ ಕೇಂದ್ರದಲ್ಲಿ ಸರ್ಕಾರ ರಚಿಸಿದರೂ ಜನತಾಪಕ್ಷವು ಕೂಡ ಐದು ಪಕ್ಷಗಳ ವಿಲೀನವಾಗಿತ್ತು. ಮತ್ತು ೧೯೮೯, ೧೯೯೬, ೧೯೯೮ ಮತ್ತು ೧೯೯೯, ೨೦೦೪ರ ಸಮ್ಮಿಶ್ರ

ಸರ್ಕಾರಗಳು ಕೆಲವು ಪಕ್ಷಗಳ ಒಗ್ಗೂಡಿಕೆಯಿಂದ ನಡೆದವು. ಇದರಿಂದಾಗಿಯೇ ನಮ್ಮ ಪಕ್ಷಪದ್ಧತಿಯಲ್ಲಿ ಸಮತೋಲವನ್ನು ಕಾಯಲು ಸಾಧ್ಯವಾಗಿಲ್ಲ.

### ೫.೩ ಬಹುಪಕ್ಷಪದ್ಧತಿಯ ಬೆಳವಣಿಗೆ

ಒಂದು ರಾಷ್ಟ್ರದಲ್ಲಿ ಸಂವಿಧಾನತ್ಮಕ ವಿಧಾನಗಳಿಂದ ರಾಜ್ಯಾಧಿಕಾರವನ್ನು ಗಳಿಸಲು ಹಲವಾರು ರಾಜಕೀಯ ಪಕ್ಷಗಳು ಪ್ರಯತ್ನಿಸಿದರೆ ಅಲ್ಲಿ ಬಹು ಪಕ್ಷಪದ್ಧತಿ ಇದೆ ಎನ್ನಬಹುದಾಗಿದೆ. ಬಹುಪಕ್ಷಪದ್ಧತಿಗೆ ಫ್ರಾನ್ಸ್ ಉತ್ತಮ ಉದಾಹರಣೆಯಾಗಿದೆ. ಇಟಲಿ, ಭಾರತ, ನಾರ್ವೆ ಮುಂತಾದ ರಾಷ್ಟ್ರಗಳಲ್ಲಿ ಬಹುಪಕ್ಷಪದ್ಧತಿ ಇರುವುದನ್ನು ಕಾಣಬಹುದು.

ಭಾರತದಲ್ಲಿ ಬಹುಪಕ್ಷಪದ್ಧತಿ ಬೆಳವಣಿಗೆಯಾದದ್ದು ೧೯೭೭ರ ನಂತರ. ಭಾರತದಲ್ಲಿ ೧೯೭೭ರ ತನಕ ಕಾಂಗ್ರೆಸ್ ರಾಜಕೀಯ ವ್ಯವಸ್ಥೆಯಲ್ಲಿ ಅಧಿಕಾರದ ಏಕಸ್ವಾಮ್ಯತೆ ಹೊಂದಿತ್ತು. ಆದರೆ ಇಂದಿರಾಗಾಂಧಿಯವರ ಸರ್ವಾಧಿಕಾರದ ಆಳ್ವಿಕೆಯಿಂದಾಗಿ ಹಲವಾರು ಕಾಂಗ್ರೆಸ್ ಧುರೀಣರು ಕಾಂಗ್ರೆಸ್ ಪಕ್ಷದಿಂದ ಹೊರಬಂದು ಹೊಸ ಪಕ್ಷಗಳನ್ನು ಕಟ್ಟಲು ಪ್ರಾರಂಭಿಸಿದರು. ಇಲ್ಲಿಂದ ಬಹುಪಕ್ಷಪದ್ಧತಿ ಮತ್ತು ಸಮ್ಮಿಶ್ರ ಸರ್ಕಾರದ ಯುಗ ಪ್ರಾರಂಭವಾಯಿತು.

೧೯೭೭ರ ಲೋಕಸಭಾ ಚುನಾವಣೆಯಲ್ಲಿ ಸಿ.ಪಿ.ಐ., ಅಕಾಲಿದಳ, ಜನತಾಪಕ್ಷಗಳು ಹೊಂದಿಕೊಂಡು ಸ್ಪರ್ಧಿಸಿ ಪ್ರಥಮಬಾರಿಗೆ ಕಾಂಗ್ರೆಸ್ಸೇತರ ಸರ್ಕಾರ ರಚಿಸಿದ ಹೆಗ್ಗಳಿಕೆಗೆ ಪಾತ್ರವಾದವು. ಆದರೆ ೧೯೮೯ ರಲ್ಲಿ ಭಾರತದಲ್ಲಿ ಪಕ್ಷಪದ್ಧತಿಯಲ್ಲಿ ಮಹತ್ತರ ಬದಲಾವಣೆಗಳು ಆದವು. ಸಮ್ಮಿಶ್ರ ಸರ್ಕಾರ ಅಂದರೆ ಎರಡಕ್ಕಿಂತ ಹೆಚ್ಚು ಪಕ್ಷಗಳ ಆಳ್ವಿಕೆ ಬಹುಪಕ್ಷಪದ್ಧತಿ ಪ್ರಾರಂಭವಾಯಿತು. ಬಹುಪಕ್ಷಪದ್ಧತಿ ಬೆಳೆಯಲು ಕಾರಣ ಪಕ್ಷದ ಎಲ್ಲಾ ತತ್ವಗಳು ಎಲ್ಲರಿಗೂ ಇಷ್ಟವಾಗದಿರುವುದು, ಪಕ್ಷದ ನಾಯಕರ ಗುಣಧರ್ಮಗಳು, ಅಧಿಕಾರದ ಒತ್ತಾಸೆ, ಪಕ್ಷದಿಂದ ಕೆಲವು ಸದಸ್ಯರ ಉಚ್ಚಾಟನೆ ಮೊದಲಾದ ಎಲ್ಲ ಅಂಶಗಳು ಬಹುಪಕ್ಷದ ಉಗಮಕ್ಕೆ ಕಾರಣವಾಗಿರುತ್ತವೆ ಎಂದು ಸಾಮಾನ್ಯವಾಗಿ ಹೇಳಬಹುದು.

೧೯೮೯ರಲ್ಲಿಯೂ ಲೋಕಸಭಾ ಚುನಾವಣೆಯಲ್ಲಿ ಜನತಾದಳ ಬಹುಮತ ಪಡೆಯದೆ ಇತರ ಪಕ್ಷಗಳೊಳಗೂಡಿ ಅಧಿಕಾರಕ್ಕೆ ಬಂದಿತು. ಇದೂ ಸಹ ಬಹುಪಕ್ಷಪದ್ಧತಿಯ ಪ್ರಮುಖ ಲಕ್ಷಣವಾಗಿದೆ.

೧೯೯೬ರಲ್ಲಿಯೂ ಸಹ ಯಾವುದೇ ಪಕ್ಷಕ್ಕೆ ನಿಚ್ಚಳ ಬಹುಮತ ದೊರೆಯದ ಕಾರಣ ಜನತಾದಳದ ನೇತೃತ್ವದಲ್ಲಿ ಸಂಯುಕ್ತ ರಂಗವನ್ನು ಸ್ಥಾಪಿಸಿಕೊಂಡರು ಮತ್ತು ಬೇರೆ ಪಕ್ಷಗಳನ್ನು ವಿಲೀನ ಮಾಡಿಕೊಂಡು ಪ್ರಧಾನಮಂತ್ರಿ ಅಧಿಕಾರವನ್ನು ದೇವೇಗೌಡರು ಪ್ರಾಪ್ತಿಮಾಡಿಕೊಂಡರು.

೧೯೮೦ರಲ್ಲಿ ಜನತಾ ಪಕ್ಷದಿಂದ ಕೆಲವು ಧುರೀಣರು ಹೊರಬಂದು ಭಾರತೀಯ ಜನತಾ ಪಕ್ಷವನ್ನು ಸ್ಥಾಪಿಸಿದರು. ೧೯೯೮ರಲ್ಲಿ ನಡೆದ ಲೋಕಸಭೆಯ ಚುನಾವಣೆಯಲ್ಲಿ ಬಹುಮತ ಪಡೆಯದಿದ್ದರೂ ಸಹ ಅನೇಕ ಪಕ್ಷಗಳೊಡಗೂಡಿ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಒಕ್ಕೂಟ (ಎನ್.ಡಿ.ಎ.)ವನ್ನು ರಚಿಸಿಕೊಂಡು ಎ.ಬಿ.ವಾಜಪೇಯಿಯವರ ನಾಯಕತ್ವದಲ್ಲಿ

ಸರ್ಕಾರವನ್ನು ರಚಿಸಿತು. ಆದರೆ ಇದು ಸಹ ೧೩ ತಿಂಗಳುಗಳ ಕಾಲ ಆಳ್ವಿಕೆ ನಡೆಸಿ ಬಹುಮತ ಸಾಬೀತುಪಡಿಸುವಲ್ಲಿ ವಿಫಲವಾಯಿತು. ನಂತರ ೧೯೯೯ರಲ್ಲಿ ಮತ್ತೆ ಲೋಕಸಭೆಗೆ ಚುನಾವಣೆ ನಡೆದು ವಾಜಪೇಯಿಯವರ ನೇತೃತ್ವದಲ್ಲಿಯೇ ಹಲವಾರು ಪಕ್ಷಗಳು ಸೇರಿಕೊಂಡು ಸರ್ಕಾರ ರಚಿಸಿ ೫ ವರ್ಷ ಅವಧಿಯನ್ನು ಯಶಸ್ವಿಗೊಳಿಸಿದರು.

ಬಹುಪಕ್ಷ ಪದ್ಧತಿ ಕೇವಲ ಕೇಂದ್ರಕ್ಕೆ ಮಾತ್ರವೇ ಸೀಮಿತವಾಗಿರದೆ ರಾಜ್ಯದ ಅಧಿಕಾರದಲ್ಲಿಯೂ ಕಾಣಬಹುದಾಗಿದೆ. ಕರ್ನಾಟಕದಲ್ಲಿ ಅಸ್ತಿತ್ವದಲ್ಲಿರುವ ಕಾಂಗ್ರೆಸ್ ಮತ್ತು ಜೆ.ಡಿ.(ಎಸ್). ಸಹ ಸಮ್ಮಿಶ್ರ ಸರ್ಕಾರದ ಪ್ರತಿಫಲವಾಗಿದೆ ಹಾಗೂ ಕೇಂದ್ರದ ಯು.ಪಿ.ಎ. ಸರ್ಕಾರವೂ ಸಹ ಬಹುಪಕ್ಷ ಆಳ್ವಿಕೆಯ ನಿದರ್ಶನವಾಗಿದೆ. ಆದ್ದರಿಂದ ಬಹುಪಕ್ಷ ಪದ್ಧತಿಯ ಆಳ್ವಿಕೆಯೆಂದರೆ ಸಮ್ಮಿಶ್ರ ಸರ್ಕಾರ ಎಂದು ಅರ್ಥೈಸಬಹುದು. ರಾಷ್ಟ್ರಾದ್ಯಂತ ಕೇವಲ ಒಂದೇ ಪಕ್ಷವಿದ್ದರೆ ಅದು ಸರ್ವಾಧಿಕಾರಿಯಂತೆ ವರ್ತಿಸುವ ಸಂದರ್ಭ ಬರಬಹುದು. ಆದರೆ ಅನೇಕ ಪಕ್ಷಗಳಿದ್ದರೆ ಜನತೆ ತಮಗೆ ಯಾವುದು ಬೇಕೋ ಆ ಪಕ್ಷವನ್ನು ಆರಿಸುತ್ತಾರೆ.

ಬಹುಪಕ್ಷ ಪದ್ಧತಿಯಲ್ಲಿ ಬಹುಸಂಖ್ಯಾತರ ಆಯ್ಕೆಗಿಂತ ಅಲ್ಪಸಂಖ್ಯಾತರ ಆಯ್ಕೆಗೆ ಹೆಚ್ಚಿನ ಮಹತ್ವ ದೊರೆಯುತ್ತದೆ. ಹೇಗೆಂದರೆ ಮತದಾನವನ್ನು ಶೇ. ೧೦೦ ಎಂದುಕೊಂಡರೆ, ಮತ್ತು ಆರರಿಂದ ಏಳು ಪಕ್ಷಗಳು ಚುನಾವಣೆಗೆ ಸ್ಪರ್ಧಿಸಿದರೆ ಆ ನೂರರಲ್ಲಿ ಎಲ್ಲಾ ಪಕ್ಷಕ್ಕೂ ಮತ ಹಂಚಿಕೆಯಾಗುತ್ತದೆ. ಎಲ್ಲಾ ಪಕ್ಷಗಳು ಶೇ. ೧೦, ಶೇ. ೨೦ ರಷ್ಟು ಮತ ಪಡೆಯುತ್ತವೆ. ಆದರೆ ಅದರಲ್ಲೇ ಅಧಿಕ ಮತಗಳಿಸಿದ ಪಕ್ಷ ಆಡಳಿತ ಪಕ್ಷವಾಗುತ್ತದೆ. (ಏಕಪಕ್ಷೀಯ ಅಥವಾ ಸಮ್ಮಿಶ್ರಪಕ್ಷ ಆಡಳಿತಕ್ಕೆ ಬರಬಹುದು) ಇಲ್ಲಿ ಆಡಳಿತ ಪಕ್ಷ ಹೆಚ್ಚೆಂದರೆ ಶೇ.೪೦ ಅಥವಾ ಶೇ. ೩೫ರಷ್ಟು ಮತಗಳನ್ನು ಪಡೆದಿರುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಶೇ. ೬೦ ರಿಂದ ಶೇ. ೭೦ರಷ್ಟು ಪ್ರಜೆಗಳು ಆ ಪಕ್ಷ ಬೇಡವೆಂದು ತಿರಸ್ಕರಿಸಿ ಮತದಾನ ಮಾಡಿರುವುದಿಲ್ಲ. ಆದರೂ ಬಹುಸಂಖ್ಯಾತರು ವಿರೋಧಿಸಿದ ಪಕ್ಷವೇ ಆಡಳಿತ ಪಕ್ಷ ವಾಗುತ್ತದೆ. ಇಲ್ಲಿ ಆಡಳಿತ ಪಕ್ಷ ಶೇ. ೪೦ರಷ್ಟು ಮತಗಳನ್ನು ಪಡೆದುಕೊಂಡಿದೆ ಎಂದು ಪರಿಗಣಿಸಿದರೂ ಶೇ. ೬೦ರಷ್ಟು ಮತದಾರರು ಈ ಪಕ್ಷವು ಆಡಳಿತ ನಡೆಸಬಾರದೆಂದು ಬೇರೆ ಬೇರೆ ಪಕ್ಷಗಳಿಗೆ ಮತ ಚಲಾಯಿಸಿರುತ್ತಾರೆ.

ಆದ್ದರಿಂದ ಇಲ್ಲಿ ಬಹುಸಂಖ್ಯಾತರ ಮತಗಳಿಗಿಂತ ಅಲ್ಪಸಂಖ್ಯಾತರ ಮತಗಳಿಗೆ ಹೆಚ್ಚಿನ ಪ್ರಾಶಸ್ತ್ಯ ದೊರಕಿದಂತಾಗುತ್ತದೆ. (ಇಲ್ಲಿ ಅಲ್ಪಸಂಖ್ಯಾತರು ಮತ್ತು ಬಹುಸಂಖ್ಯಾತರು ಎಂಬ ವಿಭಾಗ ಯಾವುದೇ ಧರ್ಮ, ಜನಾಂಗ, ಜಾತಿ ಇವುಗಳ ಆಧಾರದ ಮೇಲೆ ಅರ್ಥೈಸಿ ಕೊಳ್ಳದೆ ಪ್ರಜಾಪ್ರಭುತ್ವದ ತತ್ವವಾದ ಬಹುಸಂಖ್ಯಾತರ ಆಯ್ಕೆಯನ್ನು ಗಮನದಲ್ಲಿಟ್ಟುಕೊಳ್ಳ ಬೇಕಾಗುತ್ತದೆ).

ಭಾರತದಲ್ಲಿ ಸ್ವತಂತ್ರಪೂರ್ವದಿಂದಲೂ ಕಾಂಗ್ರೆಸ್ ಒಂದೇ ಅಸ್ತಿತ್ವದಲ್ಲಿದ್ದ ಪಕ್ಷ ವಾಗಿತ್ತು. ಸ್ವಾತಂತ್ರ್ಯಾನಂತರವೂ ಸುಮಾರು ವರ್ಷಗಳವರೆಗೆ ರಾಜಕೀಯ ಅಧಿಕಾರ ಸಂಪೂರ್ಣವಾಗಿ ಕಾಂಗ್ರೆಸ್ ಕೈಯಲ್ಲಿದ್ದಿತು. ಆದರೆ ಪಕ್ಷದಲ್ಲಿ ಒಡಕುಗಳು ಪ್ರಾರಂಭವಾದ

ಮೇಲೆ ಹಲವಾರು ಪಕ್ಷಗಳ ಉಗಮಕ್ಕೆ ನಾಂದಿಯಾಯಿತು. ಅದು ಇಲ್ಲಿಯವರೆಗೂ ಸಹ ಅತ್ಯಂತ ಪ್ರಭಾವವನ್ನು ರಾಜಕೀಯ ಮತ್ತು ಪ್ರಜೆಗಳ ಮೇಲೆ ಬೀರುತ್ತದೆ. ಬಹುಪಕ್ಷ ಪದ್ಧತಿ ಫ್ರಾನ್ಸ್‌ನಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿದೆ. ಇತ್ತೀಚೆಗೆ ಭಾರತದಲ್ಲಿಯೂ ಸಹ ಬಹುಪಕ್ಷಪದ್ಧತಿ ತನ್ನ ಪ್ರಭಾವವನ್ನು ಎಲ್ಲದರ ಮೇಲೂ ಬೀರುತ್ತಿದೆ.

### ೫.೪ ಅಖಿಲ ಭಾರತೀಯ ಪಕ್ಷಗಳು ಮತ್ತು ಪ್ರಾದೇಶಿಕ ಪಕ್ಷಗಳು

### ಅ. ರಾಷ್ಟ್ರೀಯ ಪಕ್ಷಗಳು

ರಾಷ್ಟ್ರೀಯ ಪಕ್ಷಗಳೆಂದರೆ ರಾಷ್ಟ್ರಾದ್ಯಂತ ತನ್ನ ಪ್ರಭಾವವನ್ನು ಹೊಂದಿರುವಂತ ಪಕ್ಷಗಳು ಎನ್ನಬಹುದು. ರಾಷ್ಟ್ರಮಟ್ಟದಲ್ಲಿ ಅಂದರೆ ಕೇಂದ್ರದಲ್ಲಿ ಆಡಳಿತ ನಡೆಸುವ ಅರ್ಹತೆ ಹೊಂದಿರುವ ಪಕ್ಷವೇ ರಾಷ್ಟ್ರೀಯ ಪಕ್ಷವಾಗಿದೆ. ನಿರ್ದಿಷ್ಟವಾಗಿ ಹೇಳುವುದಾದರೆ, ಭಾರತ ಚುನಾವಣೆ ಆಯೋಗ ನಿರ್ದಿಷ್ಟಪಡಿಸಿರುವಂತೆ, ಯಾವ ಪಕ್ಷ ಕನಿಷ್ಠ ನಾಲ್ಕು ರಾಜ್ಯಗಳಲ್ಲಿ ಒಟ್ಟು ಮತಗಳಲ್ಲಿ ಶೇಕಡಾ ನಾಲ್ಕರಷ್ಟು ಮತಗಳನ್ನು ಪಡೆಯುತ್ತದೆಯೋ ಅದನ್ನು ರಾಷ್ಟ್ರೀಯ ಪಕ್ಷವೆಂದು ಪರಿಗಣಿಸಬಹುದು. ಭಾರತದ ಪ್ರಮುಖ ರಾಜಕೀಯ ಪಕ್ಷಗಳಲ್ಲಿ ಕೆಲವು ಪ್ರಮುಕವಾದವುಗಳನ್ನು ಇಲ್ಲಿ ಪರಿಚಯಮಾಡಿಕೊಳ್ಳಬಹುದು.

### ಭಾರತದ ರಾಷ್ಟ್ರೀಯ ಕಾಂಗ್ರೆಸ್

ಭಾರತದಲ್ಲಿ ಪ್ರಪ್ರಥಮವಾಗಿ ಒಂದು ರಾಜಕೀಯ ಪಕ್ಷವಾಗಿ ಉದಯಗೊಂಡಿದ್ದು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್. ೧೮೮೫ರಲ್ಲಿ ರಚಿತಗೊಂಡ ಕಾಂಗ್ರೆಸ್ ಪಕ್ಷ ಭಾರತದ ರಾಜಕೀಯದಲ್ಲಿ ಪ್ರಥಮ ರಾಷ್ಟ್ರೀಯ ಪಕ್ಷವಾಗಿ ಹೊರಹೊಮ್ಮಿತು. ರಾಷ್ಟ್ರೀಯ ಕಾಂಗ್ರೆಸ್ಸನ್ನು ಎ.ಒ. ಹ್ಯೂಮ್ ಸ್ಥಾಪಿಸಿದರು. ಆರಂಭದಲ್ಲಿ ಭಾರತೀಯ ಜನತೆ ಬ್ರಿಟೀಷರ ವಿರುದ್ಧ ಕ್ರಾಂತಿಯುತವಾಗಿ ಹೋರಾಡುವ ಬದಲು, ಜನತೆ ಮತ್ತು ಬ್ರಿಟೀಷರ ನಡುವೆ ಇರುವ ಸಂಘರ್ಷ ಮತ್ತು ಸಮಸ್ಯೆಯನ್ನು ಬಗೆಹರಿಸುವ ಸಾಧನವಾಗಲು ಕಾಂಗ್ರೆಸ್ ಪ್ರಯತ್ನಿಸಿತು. ಕಾಲಾಂತರ ಇದು ಒಂದು ಚಳುವಳಿಯ ರೂಪ ತಾಳಿ, ೧೯೪೭ರವರೆಗೆ ಸ್ವಾತಂತ್ರ್ಯಕ್ಕಾಗಿ ಹಲವಾರು ನಾಯಕರ ಅಡಿಯಲ್ಲಿ ಕಾಂಗ್ರೆಸ್ ಹೋರಾಡಿತು. ಸ್ವಾತಂತ್ರ್ಯ ಬಂದ ನಂತರ ಇದು ಸಂಪೂರ್ಣವಾಗಿ ರಾಜಕೀಯ ಪಕ್ಷವಾಯಿತು.

### ರಚನೆ

ಈ ಪಕ್ಷವು ತನ್ನ ಸಂಘಟನಾ ದೃಷ್ಟಿಯಿಂದ ಕೆಳಹಂತದಿಂದ ಮೇಲ್ಮಟ್ಟದವರೆಗೂ ಸಮಿತಿಗಳನ್ನು ರಚಿಸಿದೆ. ಅವುಗಳೆಂದರೆ ಅಖಿಲ ಭಾರತ ಕಾಂಗ್ರೆಸ್ ಸಮಿತಿ, ಕಾರ್ಯಕಾರಿ ಸಮಿತಿ, ಪ್ರದೇಶ ಕಾಂಗ್ರೆಸ್ ಸಮಿತಿ, ಜಿಲ್ಲಾ ಕಾಂಗ್ರೆಸ್ ಸಮಿತಿ, ಮಂಡಲ ಕಾಂಗ್ರೆಸ್ ಸಮಿತಿ.

**ತತ್ವಗಳು**

ಕಾಂಗ್ರೆಸ್ ಪಕ್ಷದ ಪ್ರಮುಖವಾದ ತತ್ವಗಳು ಮತ್ತು ಧೋರಣೆಗಳೆಂದರೆ

೧. ಪ್ರಜಾಸತ್ತಾತ್ಮಕ ಪ್ರಜಾಪ್ರಭುತ್ವದ ತಳಹದಿಯ ಮೇಲೆ ಸಮಾಜದ ರಚನೆ.

೨. ದೇಶದ ಸಮಗ್ರತೆ ರಕ್ಷಿಸುವುದು.

೩. ವಿಶ್ವಶಾಂತಿ, ಅಂತರ-ರಾಷ್ಟ್ರೀಯ ಸಹಕಾರ ಮತ್ತು ಸಹಬಾಳ್ವೆಗೆ ಅಲಿಪ್ತ ನೀತಿಯ ಮೂಲಕ ಶ್ರಮಿಸುವುದು.

೪. ಕೃಷಿ ಮತ್ತು ಕೈಗಾರಿಕೆಗಳಿಗೆ ಪ್ರೋತ್ಸಾಹ.

೫. ದೇಶದ ಆರ್ಥಿಕಾಭಿವೃದ್ಧಿಗೆ ಶ್ರಮಿಸುವುದು.

೬. ರಾಷ್ಟ್ರವು ಸ್ವಾವಲಂಭಿಯಾಗುವಂತೆ ಮಾಡುವುದು.

೭. ವಿಶ್ವಸಂಸ್ಥೆಯನ್ನು ಬೆಂಬಲಿಸುವುದು.

೮. ಅಲ್ಪಸಂಖ್ಯಾತರಿಗೆ ರಕ್ಷಣೆ.

೯. ರಾಷ್ಟ್ರವಿರೋಧಿ ಮತ್ತು ಉಗ್ರಗ್ರಾಮಿ ಶಕ್ತಿಗಳನ್ನು ತಡೆಯುವುದು.

೧೦. ಮಹಿಳೆಯರಿಗೆ ಸಮಾನ ಅವಕಾಶ ಕಲ್ಪಿಸುವುದು.

**ಜನತಾಪಕ್ಷ**

ಇದು ೧೯೭೭ರ ಜನವರಿಯಲ್ಲಿ ಕೆಲವು ವಿರೋಧ ಪಕ್ಷಗಳ ನಾಯಕರುಗಳ ಒಗ್ಗೂಡಿಕೆಯ ಫಲವಾಗಿ ಉದಯವಾದ ಪಕ್ಷವಾಗಿದೆ. ಇದರ ಉದಯಕ್ಕೆ ಮುಖ್ಯಕಾರಣ ಅಂದು ಅಧಿಕಾರದಲ್ಲಿದ್ದ ಶ್ರೀಮತಿ ಇಂದಿರಾಗಾಂಧಿಯವರು ೧೯೭೫ರಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸಿ ವಿರೋಧ ಪಕ್ಷಗಳ ನಾಯಕರನ್ನು ಸೆರೆಮನೆಗೆ ಕಳುಹಿಸಿದ್ದರ ಫಲವಾಗಿದೆ. ಇದರ ಜೊತೆಗೆ ಗುಜರಾತ್ ೧೯೭೫ರಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಸರ್ಕಾರವನ್ನು ತಿರಸ್ಕರಿಸಿ ಕಾಂಗ್ರೆಸ್ಸೇತರ ಪಕ್ಷಗಳ ಸಂಯುಕ್ತ ರಂಗದ ಸರ್ಕಾರ ಅಧಿಕಾರಕ್ಕೆ ಬಂದಿತು. ಇದು ಜಯಪ್ರಕಾಶ ನಾರಾಯಣ್‌ರವರ ಚಳುವಳಿ ಮತ್ತು ವಿರೋಧ ಪಕ್ಷಗಳ ಒಗ್ಗೂಡಿಕೆಯಿಂದ ಬಂದುದ್ದರಿಂದ ರಾಷ್ಟ್ರೀಯ ಮಟ್ಟದಲ್ಲಿಯೂ ಈ ರೀತಿಯ ಒಗ್ಗೂಡುವಿಕೆಗೆ ಅವಕಾಶವಾಯಿತು.

**ಮುಖ್ಯ ತತ್ವಗಳು**

೧. ಪ್ರಜಾಪ್ರಭುತ್ವದ ಪುನರ್ ಸ್ಥಾಪನೆ.

೨. ಅಲಿಪ್ತ ನೀತಿ, ನ್ಯಾಯಾಂಗದ ಸ್ವಾತಂತ್ರ್ಯತೆ, ಕಾನೂನುಬದ್ಧ ಆಳ್ವಿಕೆಗೆ ಗೌರವವನ್ನು ನೀಡಿ ಸುಭದ್ರ ಸರ್ಕಾರ ರಚನೆ.

೩. ಸಂವಿಧಾನದ ೪೨ನೇ ತಿದ್ದುಪಡಿಯ ಬದಲಾವಣೆ.

೪. ಆಸ್ತಿಯ ಹಕ್ಕನ್ನು ಮೂಲಭೂತ ಹಕ್ಕು ಪಟ್ಟಿಯಿಂದ ತೆಗೆಯುವುದು.

೫. ವ್ಯವಸಾಯ ಮತ್ತು ಸಣ್ಣ ಕೈಗಾರಿಕೆಗಳಿಗೆ ಆದ್ಯತೆ.

೬. ಮಹಿಳೆ ಮತ್ತು ಮಕ್ಕಳಿಗೆ ರಕ್ಷಣೆ.

೭. ಶಿಕ್ಷಣದಲ್ಲಿ ತ್ರಿಭಾಷಾ ಸೂತ್ರದ ಜಾರಿ.

೮. ಅನಕ್ಷರತೆಯ ನಿರ್ಮೂಲನೆ.

೯. ಕುಡಿಯುವ ನೀರಿನ ಸೌಕರ್ಯಕ್ಕೆ ಆದ್ಯತೆ.

೧೦. ಹಿಂದುಳಿದ ವರ್ಗಗಳಿಂದ ಹರಿಜನ ಮತ್ತು ಗಿರಿಜನರ ಹಿತಾಸಕ್ತಿಯ ರಕ್ಷಣೆ.

**ಜನತಾದಳ**

ರಾಷ್ಟ್ರದಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯ ಪಕ್ಷವಾಗಿ ಉದಯಗೊಂಡಿದ್ದ ಜನತಾ ಪಕ್ಷ ಛಿದ್ರವಾಗಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿದ್ದರಿಂದ ಕಾಂಗ್ರೆಸ್ ಪಕ್ಷಕ್ಕೆ ಪರ್ಯಾಯ ಪಕ್ಷವೇ ಇಲ್ಲದಂತಾಯಿತು. ಈ ಕೊರತೆಯನ್ನು ನೀಗಿ ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್‌ಗೆ ಪರ್ಯಾಯ ಪಕ್ಷದ ರಚನೆಗಾಗಿ ಪ್ರಯತ್ನಿಸಿ ಲೋಕದಳ, ಜನಮೋರ್ಚ ಮತ್ತು ಜನತಾ ಪಕ್ಷಗಳು ವಿಲೀನಗೊಂಡು ೧೯೮೮ರ ನವೆಂಬರ್ ೧೮ ರಂದು 'ಜನತಾದಳ'ವಾಗಿ ಉದಯವಾಯಿತು. ಇದರ ಅಧ್ಯಕ್ಷರಾಗಿ ವಿ.ಪಿ.ಸಿಂಗ್‌ರವರು ಮತ್ತು ಮಹಾಕಾರ್ಯದರ್ಶಿಯಾಗಿ ಅಜಿತ್‌ಸಿಂಗ್‌ರವರು ನೇಮಕಗೊಂಡರು.

**ಕಮ್ಯುನಿಸ್ಟ್ ಪಕ್ಷ**

೧೯೧೭ರಲ್ಲಿ ರಷ್ಯಾದಲ್ಲಿ ನಡೆದ ಬೋಲ್ಸೆವಿಕ್ ಕ್ರಾಂತಿಯು ವಿಶ್ವದ ಬಹುತೇಕ ರಾಷ್ಟ್ರಗಳ ಮೇಲೆ ಪ್ರಭಾವ ಬೀರಿ ಎಡಪಂಥೀಯ ಪಕ್ಷಗಳು ಬೆಳೆಯಲು ಕಾರಣವಾಯಿತು. ಭಾರತದಲ್ಲಿ ಎಂ.ಎನ್. ರಾಯ್‌ರವರು ಕಮ್ಯುನಿಸ್ಟ್ ಸಂಘಟನೆ ಮಾಡಿದರು. ಈ ಪಕ್ಷವು ಭಾರತದಲ್ಲಿ ೧೯೨೪ರಲ್ಲಿ ಸ್ಥಾಪನೆಯಾಯಿತು.

ಈ ಪಕ್ಷವು ಕಾಂಗ್ರೆಸ್ ನಾಯಕತ್ವಕ್ಕೆ ವಿರುದ್ಧವಾಗಿ ಕೂಲಿಕಾರ್ಮಿಕರು ಮತ್ತು ರೈತರನ್ನು ಸಂಘಟಿಸಿ ಚಳುವಳಿ, ಕ್ರಾಂತಿ ಮೊದಲಾದವುಗಳಲ್ಲಿ ತೊಡಗಿತು. ಈ ಪಕ್ಷದ ತತ್ವಗಳೆಂದರೆ ರಾಷ್ಟ್ರದ ಐಕ್ಯತೆ ಮತ್ತು ಭದ್ರತೆಯ ರಕ್ಷಣೆ, ರಾಜ್ಯಗಳಿಗೆ ಸ್ವಾತಂತ್ರತೆ, ಕಾಮನ್‌ವೆಲ್ತ್ ಕೂಟವನ್ನು ಬಹಿಷ್ಕರಿಸುವುದು. ಜಮೀನ್ದಾರ್ ಪದ್ಧತಿಯ ರದ್ದತಿ ಇವೇ ಮೊದಲಾದವುಗಳಾಗಿವೆ.

**ಸಿ.ಪಿ.ಐ. (ಎಂ) ಪಕ್ಷ**

ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ೧೯೬೪ರಲ್ಲಿ ಉಂಟಾದ ಒಡಕಿನ ಫಲವಾಗಿ ರಚಿತಗೊಂಡ ಪಕ್ಷವೇ ಸಿ.ಪಿ.ಐ.(ಎಂ) ಪಕ್ಷ. ಇದು ಸಿ.ಪಿ.ಐ. ಪಕ್ಷದಂತೆ ಬೇರೆ ಕಮ್ಯುನಿಸ್ಟ್ ರಾಷ್ಟ್ರಗಳ ಬೆಂಬಲಿತ ಅಥವಾ ಅನುಯಾಯಿ ಪಕ್ಷವಲ್ಲ. ಇದರ ತತ್ವಗಳೆಂದರೆ

೧. ಕಾರ್ಮಿಕರ ನೇತೃತ್ವದ ಜನತಾ ಪ್ರಜಾಪ್ರಭುತ್ವದ ಸ್ಥಾಪನೆ (ಪೀಪಲ್ಸ್ ಡೆಮೊಕ್ರಸಿ)

೨. ಪ್ರಜೆಗಳ ಪರಮಾಧಿಕಾರಕ್ಕೆ ಹೊಂದುವಂತಹ ಸಂವಿಧಾನದ ರಚನೆ.

೩. ರಾಷ್ಟ್ರಾಧ್ಯಕ್ಷರ ತುರ್ತು ಪರಿಸ್ಥಿತಿಯ ಅಧಿಕಾರವನ್ನು ರದ್ದುಪಡಿಸುವುದು.

೪. ರಾಜ್ಯಪಾಲರುಗಳ ಹುದ್ದೆಯನ್ನು ರದ್ದುಪಡಿಸುವುದು.

೫. ರಾಜ್ಯದ ಮೇಲ್ಮನೆಯನ್ನು ಶಾಶ್ವತವಾಗಿ ರದ್ದುಪಡಿಸುವುದು.

### ಭಾರತೀಯ ಜನತಾ ಪಕ್ಷ (ಬಿ.ಜೆ.ಪಿ)

ಇದು ಹಿಂದಿನ ಜನಸಂಘದ ಬದಲಾದ ರೂಪವನ್ನು ಪಡೆದ ಪಕ್ಷವೆನ್ನಬಹುದು. ಏಕೆಂದರೆ ಜನಸಂಘ ಜನತಾ ಪಕ್ಷದಲ್ಲಿ ವಿಲೀನಗೊಂಡು ನಂತರ ಜನತಾಪಕ್ಷದಲ್ಲಿ ಉಂಟಾದ ಭಿನ್ನಾಭಿಪ್ರಾಯದ ಫಲವಾಗಿ ೧೯೮೦ರ ಮಾರ್ಚ್‌ನಲ್ಲಿ ಪ್ರತ್ಯೇಕಗೊಂಡು ಜನತಾಸಂಘವು ಬಿ.ಜೆ.ಪಿ. ಎಂಬ ಹೆಸರಿನೊಡನೆ ಅಸ್ತಿತ್ವಕ್ಕೆ ಬಂದಿತು. ಹಿಂದಿನ ಜನಸಂಘವು ೧೯೫೧ರ ಅಕ್ಟೋಬರ್ ೨೧ ರಂದು ಶ್ಯಾಮ್‌ಪ್ರಸಾದ್ ಮುಖರ್ಜಿಯವರ ಅಧ್ಯಕ್ಷತೆಯಲ್ಲಿ ರಚಿತಗೊಂಡಿತು. ಇದರ ಇತರ ಪ್ರಮುಖರೆಂದರೆ ಅಟಲ್ ಬಿಹಾರಿ ವಾಜಪೇಯಿ, ಲಾಲ್ ಕೃಷ್ಣ ಅಡ್ವಾಣಿ, ಬಾಲರಾಜ್ ಮದೂಕರರವರು. ಈ ಪಕ್ಷದ ಪ್ರಮುಖ ತತ್ವಗಳೆಂದರೆ, ಏಕಾತ್ಮಕ ಸರ್ಕಾರಿ ವ್ಯವಸ್ಥೆಯ ಸ್ಥಾಪನೆ, ರಾಜ್ಯಗಳ ಮೇಲ್ಮನೆಯ ರದ್ಧತಿ, ಅದಕ್ಷತೆ ಮತ್ತು ಭ್ರಷ್ಟಾಚಾರದ ತಡೆ, ಶೀಘ್ರ ಮತ್ತು ವ್ಯವಸ್ಥಿತ ನ್ಯಾಯ, ಎಲ್ಲಾ ಜನತೆಗೂ ಸಮಾನ ಅವಕಾಶ, ಅತ್ಯವಶ್ಯಕತೆ ಇರುವ ಕೈಗಾರಿಕೆಗಳ ರಾಷ್ಟ್ರೀಕರಣ, ಅಖಂಡ ಭಾರತ ನಿರ್ಮಾಣ, ಯುವಕರಿಗೆ ಕಡ್ಡಾಯ ಮಿಲಿಟರಿ ತರಬೇತಿ, ಮುಂತಾದವು.

### ಆ. ಪ್ರಾದೇಶೀಕ ಪಕ್ಷಗಳು

ಭಾರತದ ಸಾಮಾಜಿಕ ವ್ಯವಸ್ಥೆಯು ವಿವಿಧ ರೀತಿಯ ವಿಭಿನ್ನತೆಯನ್ನೊಳಗೊಂಡ ಸಮಾಜವಾಗಿದ್ದು ಇಲ್ಲಿ ಜಾತಿ, ಮತ, ಜನಾಂಗ, ಧರ್ಮ, ಪ್ರಾಂತೀಯತೆ ಮೊದಲಾದವು ಗಳಿವೆ. ಇವುಗಳ ಪ್ರಭಾವದಿಂದ ರಾಜಕೀಯ ವೈವಿಧ್ಯತೆಗೆ ಕಾರಣವಾಗಿದೆ. ಭಾರತ ಸ್ವತಂತ್ರಗೊಂಡ ಸಂದರ್ಭದಲ್ಲಿ ಈ ಪಕ್ಷಗಳು ಹೆಚ್ಚು ಪ್ರಭಾವಯುತವಾಗಿರಲಿಲ್ಲ ಮತ್ತು ಹೆಚ್ಚಿನ ಪಕ್ಷಗಳಿರಲಿಲ್ಲ. ೧೯೬೭ರ ನಂತರ ಕಾಂಗ್ರೆಸ್ಸೇತರ ಪಕ್ಷಗಳು ರೂಪುಗೊಂಡವು. ಅವುಗಳೆಂದರೆ ಡಿ.ಎಂ.ಕೆ. ಅಕಾಲಿದಳ, ತೆಲುಗುದೇಶಂ, ನ್ಯಾಷನಲ್ ಕಾನ್ಪರೆನ್ಸ್, ಸಿಕ್ಕಿಂ ಸಂಗ್ರಾಮ ಪರಿಷತ್, ಶಿವಸೇನೆ, ಅಸ್ಸಾಂಗಣಪರಿಷತ್, ಮಿಜೋನ್ಯಾಷನಲ್ ಫ್ರಂಟ್, ಮಹಾರಾಷ್ಟ್ರವಾದಿ ಗೋಮಾಂತಕ ಪಕ್ಷ, ಕರ್ನಾಟಕ ಕಾಂಗ್ರೆಸ್, ರೈತಸಂಘ, ಕನ್ನಡನಾಡು ಪಕ್ಷ, ಕನ್ನಡ ಚಳುವಳಿ ಪಕ್ಷ, ಜನತಾಪಕ್ಷ ಮುಂತಾದವು. ಇವು ಒಂದು ಅಥವಾ ಎರಡು ರಾಜ್ಯಗಳಲ್ಲಿ ಸಿಮೀತವಾಗಿರಬಹುದು ಅಥವಾ ಪ್ರಭಾವಯುತವಾಗಿರಬಹುದು. ಇವುಗಳಲ್ಲಿ ಪ್ರಮುಖವಾದ ಕೆಲವು ಪಕ್ಷಗಳ ರಚನೆ ಮತ್ತು ಸಿದ್ಧಾಂತವನ್ನು ವಿವರಿಸಲಾಗಿದೆ.

### ಡಿ.ಎಂ.ಕೆ. (ದ್ರಾವಿಡ ಮುನ್ನೇತ್ರ ಕಳಗಮ್)

ಈ ಪಕ್ಷವು ಸ್ವಾತಂತ್ರ್ಯ ಪೂರ್ವದಲ್ಲಿ ಉಗಮಗೊಂಡಿತ್ತು. ೧೯೧೭ರಲ್ಲಿ ಜಸ್ಟೀಸ್ ಪಾರ್ಟಿಯ ಇ.ವಿ. ರಾಮಸ್ವಾಮಿ ನಾಯ್ಕರ್‌ರವರಿಂದ ರಚಿತಗೊಂಡಿತು. ನಂತರ ಈ ಪಕ್ಷವು ೧೯೪೪ರಲ್ಲಿ ದ್ರಾವಿಡ ಕಳಗಮ್ ಎಂಬುದಾಗಿ ಬದಲಾವಣೆಗೊಂಡಿತು. ಆದರೆ ರಾಮಸ್ವಾಮಿ ನಾಯ್ಕರ್ ಮತ್ತು ಅಣ್ಣಾದೊರೈ ನಡುವೆ ಉಂಟಾದ ಭಿನ್ನಾಭಿಪ್ರಾಯದ ಫಲವಾಗಿ ಈ ಪಕ್ಷವು ಇಬ್ಭಾಗವಾಗಿ ಅಣ್ಣಾದೊರೈರವರ ನೇತೃತ್ವದಲ್ಲಿ ೧೯೪೯ ಸೆಪ್ಟೆಂಬರ್ ೧೭ರಂದು

ಡಿ.ಎಂ.ಕೆ. ಎಂದು ಅಸ್ತಿತ್ವಕ್ಕೆ ಬಂದಿತು. ಈ ಪಕ್ಷವು ಮತ್ತೆ ೧೯೭೪ರಲ್ಲಿ ಕರುಣಾನಿಧಿ ಮತ್ತು ಎಂ.ಜಿ. ರಾಮಚಂದ್ರನ್‌ರವರ ನಡುವಿನ ಬಿಕ್ಕಟ್ಟಿನಿಂದಾಗಿ ರಾಮಚಂದ್ರನ್‌ರವರು ಎ.ಐ.ಡಿ.ಎಂ.ಕೆ ಪಕ್ಷವನ್ನು ರಚಿಸಿಗರೆ ಕರುಣಾನಿಧಿ ಡಿ.ಎಂ.ಕೆ ಪಕ್ಷದಲ್ಲೇ ಮುಂದುವರಿದರು. ೧೯೬೭ ರಿಂದಲೂ ಕಾಂಗ್ರೆಸ್ ಪಕ್ಷಕ್ಕೆ ಅವಕಾಶ ನೀಡದೆ ಈ ಎರಡು ಪಕ್ಷಗಳು ಅಧಿಕಾರವನ್ನು ಪಡೆದುಕೊಂಡು ಬರುತ್ತಿವೆ. ಈ ಪಕ್ಷಗಳ ಪ್ರಮುಖ ತತ್ವಗಳೆಂದರೆ ತಮಿಳರ ಹಿತಾಸಕ್ತಿ ರಕ್ಷಣೆ, ಹಿಂದಿ ಭಾಷೆಯನ್ನು ವಿರೋಧಿಸುವುದು ಮತ್ತು ರಾಜ್ಯಕ್ಕೆ ಹೆಚ್ಚಿನ ಅಧಿಕಾರ ದೊರಕಿಸುವುದು.

### ತೆಲುಗುದೇಶಂ

ಈ ಪಕ್ಷವು ಆಂಧ್ರಪ್ರದೇಶದಲ್ಲಿ ಎನ್.ಟಿ.ರಾಮರಾವ್ ಅವರಿಂದ ೧೯೮೨ರಲ್ಲಿ ರಚಿತಗೊಂಡು ಆಂಧ್ರಪ್ರದೇಶದ ರಾಜಕೀಯದಲ್ಲಿ ಬದಲಾವಣೆಯನ್ನು ತಂದು ೧೯೮೩ರಲ್ಲಿ ವಿಧಾನಸಭಾ ಚುನಾವಣೆಯಲ್ಲಿ ಬಹುಮತ ಪಡೆದು ಅಧಿಕಾರ ಸ್ಥಾಪಿಸಿತು. ಈ ಪಕ್ಷದ ಪ್ರಮುಖ ತತ್ವಗಳೆಂದರೆ ಜನಕಲ್ಯಾಣ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು. ಕಡಿಮೆ ಬೆಲೆಗೆ ಆಹಾರ ಪದಾರ್ಥಗಳು, ವೃದ್ಧಾಪ್ಯವೇತನ, ವಿಧವಾ ಭತ್ಯೆ, ಮೊದಲಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿತು. ೧೯೯೪ರಲ್ಲಿ ಮತ್ತೆ ಅಧಿಕಾರಕ್ಕೆ ಬಂದಿತು.

### ಅಕಾಲಿದಳ

ಈ ಪಕ್ಷವು ೧೯೨೦ರಲ್ಲಿ ರಚಿತಗೊಂಡರೂ ಇದರ ಉಗಮವನ್ನು ೧೯ನೇ ಶತಮಾನದಲ್ಲೇ ಗುರುತಿಸಬಹುದು. ಹಿಂದುಗಳ ಆರ್ಯಸಮಾಜಕ್ಕೆ ವಿರುದ್ಧವಾಗಿ ತನ್ನ ಚಳುವಳಿಯನ್ನು ಪ್ರಾರಂಭಿಸಿ ಬೆಳೆದುಬಂದಿತ್ತು. ಇದು ಧರ್ಮ ಮತ್ತು ರಾಜಕೀಯ ಎರಡನ್ನೂ ಒಟ್ಟಾರೆಯಾಗಿಯೇ ಮುಂದುವರೆಸುವುದು, ಸಿಖ್ಖರ ಹಿತಾಸಕ್ತಿಯನ್ನು ಕಾಯುವುದು, ಸಿಖ್ಖರ ಗುರುದ್ವಾರದ ಪಾವಿತ್ರ್ಯತೆಯನ್ನು ರಕ್ಷಿಸುವುದು, ಮುಂತಾದ ಉದ್ದೇಶಗಳಲ್ಲದೆ ಸಿಖ್ಖರ ಪ್ರತ್ಯೇಕ ರಾಷ್ಟ್ರಕ್ಕೆ ಮೊದಲು ಒತ್ತಾಯಪಡಿಸಿ, ಪಂಜಾಬ್ ಪ್ರತ್ಯೇಕ ರಾಜ್ಯವಾಗಲು ಹೋರಾಡಿತು.

### ನ್ಯಾಷನಲ್ ಕಾನ್ಫರೆನ್ಸ್

ಈ ಪಕ್ಷವು ೧೯೩೦ರಲ್ಲಿ ಅಸ್ತಿತ್ವಕ್ಕೆ ಬಂದರೂ ಸಹ, ೧೯೨೭ರಲ್ಲಿಯೇ ಸ್ಟೇಟ್ ಕಾನ್ಫರೆನ್ಸ್ ಎಂಬುದಾಗಿ ರಚಿತಗೊಂಡು ನಂತರದಲ್ಲಿ ಬದಲಾವಣೆ ಹೊಂದಿತು. ಇದು ಷೇಖ್ ಅಬ್ದುಲ್ಲಾರವರ ನಾಯಕತ್ವದಲ್ಲಿ ಕಾಶ್ಮೀರದ ಮಹಾರಾಜರ ಆಡಳಿತಕ್ಕೆ ವಿರುದ್ಧವಾಗಿ ಚಳುವಳಿ ನಡೆಸಿ ಸ್ವಾತಂತ್ರ್ಯ ಪಡೆಯುವ ಉದ್ದೇಶದಿಂದ ರಚಿತಗೊಂಡಿತು.

ಒಟ್ಟಾರೆ ಭಾರತದ ಪಕ್ಷಪದ್ಧತಿಯನ್ನು ನೋಡಿದರೆ ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳೆಲ್ಲವು ಕೂಡ ಭಿನ್ನಾಭಿಪ್ರಾಯ ಮತ್ತು ಇಬ್ಭಾಗಕ್ಕೊಳಗಾಗಿರುವುದು ಒಂದು ವೈಶಿಷ್ಟ್ಯವಾಗಿದೆ.

## ೫.೫ ಭಾರತದಲ್ಲಿ ರಾಜಕೀಯ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ

ರಾಜಕೀಯ ಪಕ್ಷಗಳು ಪ್ರಜಾಪ್ರಭುತ್ವ ವ್ಯವಸ್ಥೆಯ ಬೆನ್ನೆಲುಬಾಗಿವೆ ಮತ್ತು ಅಗತ್ಯವೂ ಆಗಿವೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇವುಗಳ ಪಾತ್ರ ಗಣನೀಯವಾಗಿದೆ. ಅವುಗಳ ಪಾತ್ರ ಮತ್ತು ಜವಾಬ್ದಾರಿಯನ್ನು ಅವು ನಿರ್ವಹಿಸುವ ಕಾರ್ಯಗಳ ಮೂಲಕ ಅರ್ಥೈಸಿಕೊಳ್ಳ ಬಹುದಾಗಿದೆ. ಅವುಗಳೆಂದರೆ:

### ೧. ಪಕ್ಷದ ತತ್ವಗಳನ್ನು ಪ್ರಚಾರಪಡಿಸುವುದು

ರಾಜಕೀಯ ಪಕ್ಷಗಳ ಪ್ರಮುಖ ಜವಾಬ್ದಾರಿ ಎಂದರೆ ಅದರ ತತ್ವಗಳ ಸಾಧಕ ಮತ್ತು ಬಾಧಕಗಳನ್ನು ಜನತೆ ಅರಿಯುವಂತೆ ಮಾಡುವುದು. ಆ ಮೂಲಕ ಜನಬೆಂಬಲ ಪಡೆಯಲು ಪ್ರಯತ್ನಿಸುವುದು. ಆದ್ದರಿಂದಲೇ ಚುನಾವಣೆಯ ಸಂದರ್ಭದಲ್ಲಿ ಈ ತತ್ವಗಳ ಮತ್ತು ಕಾರ್ಯಗಳ ಪ್ರಣಾಳಿಕೆಯನ್ನು ಪ್ರಕಟಿಸುತ್ತವೆ.

### ೨. ಸಾರ್ವಜನಿಕ ಅಭಿಪ್ರಾಯ

ರಾಜಕೀಯ ಪಕ್ಷಗಳು ರಾಜ್ಯದಲ್ಲಿ ಉದ್ಭವಿಸಿರುವ ಸಮಸ್ಯೆಗಳನ್ನು ಆಯ್ಕೆ ಮಾಡಿ ಕೊಂಡು ಅದನ್ನು ಜನರಿಗೆ ತಿಳಿಯುವಂತೆ ಮಾಡುತ್ತವೆ ಮತ್ತು ಅದಕ್ಕೆ ಪರಿಹಾರೋಪಾಯ ನೀತಿಗಳನ್ನು ವ್ಯಾಪಕವಾಗಿ ಪ್ರಚಾರ ಮಾಡಿ ಚರ್ಚೆಗೆ ಒಳಪಡಿಸುತ್ತವೆ. ಅಲ್ಲದೆ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿ ಮತ್ತು ಸಂಪರ್ಕ ಮಾಧ್ಯಮಗಳ ಮೂಲಕ ಬಿತ್ತರಿಸಿ ಹಾಗೂ ಕರಪತ್ರಗಳನ್ನು ಹಂಚುವ ಮೂಲಕವೂ ಜನರಲ್ಲಿ ಜಾಗೃತಿ ಮೂಡಿಸುತ್ತವೆ. ಭಾರತದಲ್ಲಿ ಈ ರೀತಿಯ ಸಾರ್ವಜನಿಕ ಅಭಿಪ್ರಾಯವು ಅಷ್ಟಾಗಿ ಮಹತ್ವಪಡೆದಿಲ್ಲ. ಆದರೆ ಕೆಲವು ಸಂದರ್ಭಗಳಲ್ಲಿ ಮಾತ್ರ ಯಶಸ್ವಿಯಾಗಿದೆ.

### ೩. ಸರ್ಕಾರದ ರಚನೆ

ರಾಜಕೀಯ ಪಕ್ಷಗಳು ಚುನಾವಣೆಯಲ್ಲಿ ಸ್ಪರ್ಧಿಸುತ್ತವೆ. ಬಹುಮತ ಪಡೆದ ಪಕ್ಷವು ಸರ್ಕಾರವನ್ನು ರಚಿಸಿ ಅಧಿಕಾರ ಪಡೆಯುತ್ತದೆ. ಈ ರೀತಿಯ ಜವಾಬ್ದಾರಿಯನ್ನು ಬಹುಮತ ಪಡೆದ ಪಕ್ಷ ಹೊಂದಿರುತ್ತದೆ ಹಾಗೂ ದಕ್ಷ ರೀತಿಯ ಆಡಳಿತ ನಡೆಸುವ ಹೊಣೆಗಾರಿಕೆ ಯನ್ನೂ ಹೊಂದಿರುತ್ತದೆ. ಜನರಿಗೆ ಉತ್ತಮ ಆಡಳಿತ ನೀಡುವುದರಲ್ಲಿ ರಾಜಕೀಯ ಪಕ್ಷಗಳು ಗಣನೀಯ ಪಾತ್ರವಹಿಸುತ್ತಿವೆ.

### ೪. ರಾಜಕೀಯ ಶಿಕ್ಷಣ

ಭಾರತದಲ್ಲಿ ರಾಜಕೀಯ ಪಕ್ಷಗಳು ನಾಗರಿಕರಿಗೆ ರಾಜಕೀಯ ಶಿಕ್ಷಣ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತವೆ. ಅದರಲ್ಲಿ ಭಾಗಶಃ ಸಫಲವೂ ಆಗುತ್ತಿವೆ. ಚುನಾವಣೆಗಳ ಮೂಲಕ ಪ್ರತಿಯೊಂದು ಪಕ್ಷವು ಅಧಿಕಾರಕ್ಕೆ ಬರಲು ಪ್ರಯತ್ನಿಸುವುದರಿಂದ ಅವುಗಳು ಪ್ರಚಾರ ಕಾರ್ಯಗಳ ಮೂಲಕ ಜನತೆಯಲ್ಲಿ ರಾಜಕೀಯ ಜಾಗೃತಿ ಮೂಡಿಸುತ್ತವೆ. ರಾಜಕೀಯ ಪಕ್ಷಗಳು ಸಮೂಹ ಮಾಧ್ಯಮಗಳ ಮೂಲಕವೂ ಜನತೆಗೆ ರಾಜಕೀಯ ಜ್ಞಾನ ಮತ್ತು ರಾಜಕೀಯ ಶಿಕ್ಷಣ ನೀಡುತ್ತವೆ.

### ೫. ಸರ್ಕಾರದ ಲೋಪದೋಷಗಳನ್ನು ಗುರುತಿಸುವುದು

ಪ್ರಜಾಪ್ರಭುತ್ವದಲ್ಲಿ ಗೆದ್ದಂತಹ ಪಕ್ಷ ಆಡಳಿತ ರೂಢವಾದರೆ ಪರಾಭವಗೊಂಡ ಪಕ್ಷ ವಿರೋಧ ಪಕ್ಷವಾಗುತ್ತದೆ. ವಿರೋಧ ಪಕ್ಷವು ಆಡಳಿತ ಪಕ್ಷದಲ್ಲಿರುವ ಲೋಪದೋಷಗಳನ್ನು ಗುರುತಿಸಿ ಸಾರ್ವಜನಿಕರಿಗೆ ತಿಳಿಯುವಂತೆ ಮಾಡುತ್ತದೆ ಮತ್ತು ಆಡಳಿತ ಪಕ್ಷ ಅಧಿಕಾರ ದುರುಪಯೋಗಪಡಿಸುವುದನ್ನು ತಡೆಯುತ್ತದೆ. ಇದರಿಂದ ಅದು ಮುಂದೆ ಜನಪ್ರಿಯಗೊಂಡು ಅಧಿಕಾರ ಪಡೆಯಲು ಪ್ರಯತ್ನಿಸುತ್ತದೆ.

### ೬. ಅಭ್ಯರ್ಥಿಗಳ ಆಯ್ಕೆ

ರಾಜಕೀಯ ಪಕ್ಷಗಳು ಹೊಂದಿರುವ ಮತ್ತೊಂದು ಪ್ರಮುಖ ಜವಾಬ್ದಾರಿ ಎಂದರೆ ಚುನಾವಣೆಯ ಸಂದರ್ಭದಲ್ಲಿ ಪಕ್ಷದ ಪರವಾಗಿ ಸ್ಪರ್ಧಿಸಲು ಉತ್ತಮ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಗುತ್ತದೆ. ಏಕೆಂದರೆ ಆಯ್ಕೆಯ ಸಂದರ್ಭದಲ್ಲಿ ಗೆಲ್ಲುವಂಥವರನ್ನು ಹುಡುಕಿ ಆಯ್ಕೆ ಮಾಡಬೇಕಾಗುತ್ತದೆ. ಇದಲ್ಲದೆ ಜಾತಿ, ಜನಾಂಗ, ನಾಯಕರುಗಳ ಪ್ರಭಾವ, ಮೀಸಲಾತಿ ಮೊದಲಾದ ಅಂಶಗಳನ್ನು ಪರಿಗಣಿಸಲಾಗುತ್ತದೆ.

### ೭. ವ್ಯಕ್ತಿಗಳ ಹಾಗೂ ಸರ್ಕಾರದ ನಡುವೆ ಮಧ್ಯಸ್ಥಿಕೆ

ರಾಜಕೀಯ ಪಕ್ಷಗಳು ಸರ್ಕಾರ ಮತ್ತು ಪ್ರಜೆಗಳ ನಡುವೆ ಕೊಂಡಿಯಂತೆ ಕಾರ್ಯನಿರ್ವಹಿಸುತ್ತವೆ. ರಾಜಕೀಯ ಪಕ್ಷಗಳು ಸರ್ಕಾರದ ನೀತಿ-ಧೋರಣೆಯನ್ನು ಪ್ರಜೆಗಳಿಗೆ ತಿಳಿಯುವಂತೆ ಮಾಡುತ್ತವೆ ಹಾಗೂ ಜನರ ಕುಂದು-ಕೊರತೆಗಳನ್ನು, ಸಮಸ್ಯೆ, ಅಹವಾಲುಗಳನ್ನು ಸರ್ಕಾರಕ್ಕೆ ತಿಳಿಸುತ್ತವೆ.

### ೮. ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆ

ರಾಜಕೀಯ ಪಕ್ಷಗಳು ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಸಾಧಿಸಲು ಶ್ರಮಿಸುತ್ತವೆ. ಕಾರಣ ಸಕಾರಾತ್ಮಕವಾದ ಸಾರ್ವಜನಿಕ ಅಭಿಪ್ರಾಯವನ್ನು ತಮ್ಮೆಡೆಗೆ ಸೆಳೆದುಕೊಳ್ಳುವ ದೃಷ್ಟಿಯಿಂದ ಹಾಗೂ ಈ ರೀತಿಯ ಸುಧಾರಣೆ ಮಾಡುವುದು ಅವರ ಜವಾಬ್ದಾರಿಯೂ ಆಗಿರುತ್ತದೆ. ಆದ್ದರಿಂದ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಯಲ್ಲಿ ರಾಜಕೀಯ ಪಕ್ಷಗಳು ಗಣನೀಯ ಪಾತ್ರವಹಿಸುತ್ತವೆ.

### ೯. ಶಾಂತಿಯುತ ಬದಲಾವಣೆ

ರಾಜಕೀಯ ಪಕ್ಷಗಳು ಪ್ರಜಾಪ್ರಭುತ್ವ ವ್ಯವಸ್ಥೆಗೆ ಅಗತ್ಯಾಂಶವಾಗಿರುವುದರಿಂದ ಯಾವುದೇ ಆಡಳಿತರೂಢ ಪಕ್ಷ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ಭ್ರಷ್ಟಾಚಾರ, ಸರ್ವಾಧಿಕಾರ, ಸ್ವಾರ್ಥಪರ ಹಿತಸಾಧನೆ, ಮೊದಲಾದವುಗಳಲ್ಲಿ ತೊಡಗಿದಾಗ ಅದರ ವಿರುದ್ಧ ಕ್ರಾಂತಿ ಅಥವಾ ಚಳುವಳಿ ನಡೆಸಿ ಸರ್ಕಾರವನ್ನು ಬದಲಾಯಿಸುವುದರ ಬದಲು ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ಮತದಾನದ ಮೂಲಕ ಅಂತಹ ಸರ್ಕಾರವನ್ನು ಬದಲಾಯಿಸಬೇಕು. ಭಾರತದಲ್ಲಿ ಎಲ್ಲಾ ಪಕ್ಷಗಳು ಸಹ ಈ ರೀತಿಯ ಜವಾಬ್ದಾರಿಯನ್ನು ಹೊಂದಿವೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ನಮಗೆ ತಿಳಿದು ಬರುವುದೇನೆಂದರೆ ಪ್ರಜಾಪ್ರಭುತ್ವದ ಯಶಸ್ಸಿಗೆ ಹಾಗೂ ರಾಷ್ಟ್ರದ ಅಭ್ಯುದಯಕ್ಕೆ ರಾಜಕೀಯ ಪಕ್ಷಗಳು ತಮ್ಮದೇ ಆದ ಕೊಡುಗೆಯನ್ನು ನೀಡುತ್ತವೆ. ಕೇವಲ ಆಡಳಿತವನ್ನು ಮಾತ್ರ ನಡೆಸುವ ಜವಾಬ್ದಾರಿ ಹೊಂದಿರದೆ, ಆಡಳಿತ ರೂಢ ಪಕ್ಷಗಳ ತಪ್ಪು ಒಪ್ಪುಗಳನ್ನು ಸಾರ್ವಜನಿಕರಿಗೆ ತಿಳಿಯಪಡಿಸುವಲ್ಲಿ ಗಣನೀಯ ಪಾತ್ರವಹಿಸುತ್ತವೆ.

### ೫.೬ ಭಾರತದಲ್ಲಿ ಪಕ್ಷಾಂತರ ನಿಷೇಧ ಕಾಯ್ದೆ

ಭಾರತದ ರಾಜಕೀಯ ವ್ಯವಸ್ಥೆಯು ಬಹುಪಕ್ಷಪದ್ಧತಿಯನ್ನು ಒಳಗೊಂಡಿರುವುದರಿಂದ ರಾಜಕೀಯ ಧುರೀಣರು ಪಕ್ಷಾಂತರವಾಗುವುದು ಸರ್ವೇಸಾಮಾನ್ಯವಾಗಿದೆ. ಧುರೀಣರು ಯಾವುದೇ ಕಾರಣಾಂತರಗಳಿಂದ ಒಂದು ಪಕ್ಷವನ್ನು ತೊರೆದು ಬೇರೊಂದು ಪಕ್ಷದಲ್ಲಿ ತನ್ನನ್ನು ಗುರುತಿಸಿಕೊಳ್ಳುವುದು ಪಕ್ಷಾಂತರ ಪದ್ಧತಿಯಾಗಿದೆ.

ಈ ಪಕ್ಷಾಂತರ ವಿದ್ಯಮಾನವು ೧೯೫೦ ರಿಂದಲೇ ಪ್ರಾರಂಭವಾಯಿತು. ೨೩ ಪ್ರತಿನಿಧಿಗಳು, ಕಾಂಗ್ರೆಸ್‌ನಿಂದ ಜನತಾ ಕಾಂಗ್ರೆಸ್‌ಗೆ ಉತ್ತರ ಪ್ರದೇಶದಲ್ಲಿ ಪಕ್ಷಾಂತರವಾದರು. ಅಂದಿನಿಂದ ಇಂದಿನವರೆಗೂ ಸಹ ಧುರೀಣರು ಪಕ್ಷಾಂತರವಾಗುತ್ತಿದ್ದಾರೆ.

ಪಕ್ಷಾಂತರ ನಿಷೇಧ ಕಾಯ್ದೆಯ ಪ್ರಸ್ತಾವನ್ನು ಮೊದಲ ಬಾರಿಗೆ ೧೯೭೮ರ ಜುಲೈ ೧೫ ರಂದು ಮುಖ್ಯಚುನಾವಣಾಧಿಕಾರಿಯವರು ಕಾನೂನು ಮಂತ್ರಿಯವರಿಗೆ ಕಳುಹಿಸಿದರು. ನಂತರ ೧೯೭೯ ನವೆಂಬರ್ ೨೨ ರಂದು ಪ್ರಧಾನ ಮಂತ್ರಿಯವರಿಗೆ ಕಳುಹಿಸಲಾಯಿತು.

ಚುನಾವಣೆಯ ನಂತರದಲ್ಲಿ ಸಂಸತ್ತಿನ ಸದಸ್ಯರನ್ನು ಅಥವಾ ರಾಜ್ಯ ವಿಧಾನಸಭೆಯ ಪ್ರತಿನಿಧಿಗಳನ್ನು ಅನರ್ಹಗೊಳಿಸುವ ಅಧಿಕಾರ ಚುನಾವಣಾ ಆಯೋಗದ ಅಭಿಪ್ರಾಯದ ಮೇರೆಗೆ ರಾಷ್ಟ್ರಾಧ್ಯಕ್ಷರಿಗೆ ಅಥವಾ ರಾಜ್ಯಪಾಲರಿಗೆ ಇರುತ್ತದೆ. ಅದು ಚುನಾವಣಾ ಆಯೋಗದ ಒಪ್ಪಿಗೆ ಮೇರೆಗೆ ಇದನ್ನು ಸಂವಿಧಾನದ ೧೦೩ನೇ ವಿಧಿ ಹಾಗೂ ೧೯೨ನೇ ವಿಧಿಯಲ್ಲಿ ಉಲ್ಲೇಖಿಸಲಾಗಿದೆ.

ಈ ಕಾಯಿದೆಯ ಪ್ರಮುಖ ಅಂಶವೆಂದರೆ ಯಾವುದೇ ಪಕ್ಷದ ಧುರೀಣ ಚುನಾವಣೆಯ ನಂತರ ಏಕಾಂಗಿಯಾಗಿ ಪಕ್ಷಾಂತರ ಮಾಡಿದರೆ ಅವನು ಅಧಿಕಾರ ಕಳೆದುಕೊಳ್ಳಬೇಕಾಗುತ್ತದೆ. ಗುಂಪು ಗುಂಪಾಗಿ ಪಕ್ಷಾಂತರ ಮಾಡಿದರೆ ಅಧಿಕಾರ ಪದತ್ಯಾಗ ಮಾಡಬೇಕಾಗುವುದಿಲ್ಲ.

ಪ್ರತಿನಿಧಿಗಳು ಪಕ್ಷಾಂತರಗೊಳ್ಳುವಾಗ ಕನಿಷ್ಟ ಪಕ್ಷ ಮೂರನೇ ಒಂದರಷ್ಟು ಸದಸ್ಯರು ಪಕ್ಷದಿಂದ ಹೊರಬರಬೇಕು. ಆಗ ಅವರು ಅಧಿಕಾರ ತ್ಯಾಗ ಮಾಡುವ ಸಂದರ್ಭ ವಿರುವುದಿಲ್ಲ. ಆದ್ದರಿಂದ ರಾಜಕೀಯ ವ್ಯವಸ್ಥೆ ಅಸ್ತವ್ಯಸ್ಥಗೊಳ್ಳಬಾರದು ಎಂಬ ಉದ್ದೇಶ ದಿಂದ ಈ ಕಾಯಿದೆಯನ್ನು ಜಾರಿಗೆ ತರಲಾಯಿತು ಮತ್ತು ಪ್ರತಿನಿಧಿಗಳು ಮನಸ್ಸಾ ಇಚ್ಚೆ ಪಕ್ಷಾಂತರವಾಗುವುದನ್ನು ತಪ್ಪಿಸಲು ಮತ್ತು ರಾಜಕೀಯ ವ್ಯವಸ್ಥೆಯನ್ನು ಸುವ್ಯವಸ್ಥೆಗೊಳಿಸಲು ಚುನಾವಣಾ ಆಯೋಗ ಈ ಕಾಯಿದೆಯನ್ನು ತರುವಲ್ಲಿ ಪ್ರಮುಖ ಪಾತ್ರವಹಿಸಿತು.

ಪಕ್ಷಾಂತರಗೊಂಡ ಧುರೀಣರನ್ನು ಚುನಾವಣಾ ಆಯೋಗವು ತನ್ನ ಅಧಿಕಾರ ವ್ಯಾಪ್ತಿಯೊಳಗೆ ಅವರನ್ನು ಅಧಿಕಾರದಿಂದ ಪದಚ್ಯುತಿಗೊಳಿಸುವಂತಿಲ್ಲ. ಬದಲಿಗೆ ರಾಷ್ಟ್ರಾಧ್ಯಕ್ಷರಿಗೆ ಅಥವಾ ರಾಜ್ಯಪಾಲರಿಗೆ ಇದರ ಬಗ್ಗೆ ಸಲಹೆ ನೀಡಬಹುದು. ಪಕ್ಷಾಂತರ ಗೊಳ್ಳುವುದರಿಂದ ಮರುಚುನಾವಣೆ ನಡೆದು ಅಧಿಕ ದುಂದುವೆಚ್ಚವಾಗುತ್ತದೆ.

ಒಂದು ಕ್ಷೇತ್ರದಲ್ಲಿ ಆಯ್ಕೆಯಾದ ಅಭ್ಯರ್ಥಿಯನ್ನು ಪಕ್ಷವೇ ಆತನನ್ನು ಉಚ್ಚಾಟಿಸಿದರೆ ಅಂತಹ ಸಂದರ್ಭದಲ್ಲಿ ಮರುಚುನಾವಣೆ ನಡೆಯುವುದಿಲ್ಲ. ಆದರೆ ಚುನಾವಣೆಯಲ್ಲಿ ಚುನಾಯಿತನಾದ ಅಭ್ಯರ್ಥಿ ಸ್ವೇಚ್ಛೆಯಿಂದ ಪಕ್ಷಾಂತರಗೊಂಡರೆ ಮಾತ್ರ ಮರುಚುನಾವಣೆ ನಡೆಯುತ್ತದೆ. ಈ ರೀತಿಯ ಒಂದು ಪದ್ಧತಿಗಳನ್ನು ತಪ್ಪಿಸಲು ಸಂವಿಧಾನಾತ್ಮಕವಾಗಿ ಯಾವುದೇ ನಿಯಮಗಳನ್ನು ಜಾರಿಗೆ ತಂದರೂ ಉಪಯುಕ್ತವಾಗುವುದಿಲ್ಲ. ಬದಲಿಗೆ ಅಂತಹ ಧುರೀಣರಿಗೆ ಅದು ಅಂತರಾಳದಲ್ಲಿ ಅರಿವಾಗಬೇಕು. ಒಮ್ಮೆ ಪಕ್ಷಾಂತರಗೊಂಡರೆ ಅದರಿಂದಾಗುವ ಹಣದ ಅಪವ್ಯಯ, ಸಮಯದ ವ್ಯರ್ಥ ಮುಂತಾದ ತೊಂದರೆಗಳನ್ನು ಅವರೇ ಅರಿತು ಉತ್ತಮ ಮಾರ್ಗದಲ್ಲಿ ನಡೆಯಬೇಕಿದೆ ಮತ್ತು ರಾಜಕೀಯ ವ್ಯವಸ್ಥೆಯನ್ನು ಸುವ್ಯವಸ್ಥೆಗೊಳಿಸಬೇಕಿದೆ.

### ೫.೭. ವಿರೋಧ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿ

ಪ್ರಜಾಪ್ರಭುತ್ವದ ಅಗತ್ಯಾಂಶಗಳಲ್ಲಿ ರಾಜಕೀಯ ಪಕ್ಷವು ಪ್ರಮುಖವಾದರೆ ದಕ್ಷ ಆಡಳಿತ ನಿರ್ವಹಣೆಗೆ ವಿರೋಧ ಪಕ್ಷದ ಅಗತ್ಯತೆ ಅವಶ್ಯಕವಾಗಿದೆ. ವಿರೋಧ ಪಕ್ಷಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಭಾರತದಲ್ಲಿ ಕಾಂಗ್ರೆಸ್ಸೇತರ ಪಕ್ಷಗಳು ಅಧಿಕಾರಕ್ಕೆ ಬರುವಂತಹ ಸಂದರ್ಭದ ನಂತರ ವಿರೋಧ ಪಕ್ಷಗಳ ಮಹತ್ವ ಅಧಿಕವಾಯಿತು. ನೆಹರೂ ಮತ್ತು ಶ್ರೀಮತಿ ಇಂದಿರಾಗಾಂಧಿಯವರ ಆಳ್ವಿಕೆಯ ಅವಧಿಯಲ್ಲಿ ವಿರೋಧ ಪಕ್ಷಗಳನ್ನು ಮೂಲೆಗುಂಪಾಗಿಸಿದ್ದರು. ವಿರೋಧ ಪಕ್ಷಗಳನ್ನು ಕೆಲವು ಚಿಂತಕರು 'ಕಾವಲುನಾಯಿ' (ವಾಚಿಂಗ್ ಡಾಗ್) ಎಂತಲೂ ಕರೆದಿದ್ದಾರೆ. ಕಾರಣ ಆಡಳಿತ ರೂಢ ಪಕ್ಷ ನಿರ್ವಹಿಸುವ ಪ್ರತಿಯೊಂದು ಕಾರ್ಯವನ್ನು ಕೂಲಂಕಷವಾಗಿ ಗಮನಿಸುತ್ತಿರುತ್ತವೆ. ಆದ್ದರಿಂದ ವಿರೋಧ ಪಕ್ಷವೂ ಸಹ ಹಲವಾರು ಜವಾಬ್ದಾರಿಯನ್ನು ಹೊಂದಿರುತ್ತದೆ.

ಅಧಿಕಾರವು, ಅದನ್ನು ಚಲಾಯಿಸುವವರನ್ನು ಭ್ರಷ್ಟರನ್ನಾಗಿಸುತ್ತದೆ. ಆಳುವ ಪಕ್ಷವು ರಾಜ್ಯಾಧಿಕಾರವನ್ನು ಹೊಂದಿರುವವರು ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳದಂತೆ ತಡೆಯಲು ಒಂದು ಸಮರ್ಥವಾದ ವಿರೋಧ ಪಕ್ಷವಿರಬೇಕು. ವಿರೋಧ ಪಕ್ಷವು, ಆಡಳಿತ ಪಕ್ಷ ಮಾಡುವ ಎಲ್ಲಾ ದೋಷಯುಕ್ತ ನೀತಿಗಳನ್ನು ಗುರುತಿಸಿ ಪ್ರಜಾಸಮೂಹಕ್ಕೆ ಅರ್ಥವಾಗುವಂತೆ ಪ್ರಚಾರ ಕಾರ್ಯಮಾಡುತ್ತದೆ. ಆ ಮೂಲಕ ಪ್ರತಿನಿಧಿಗಳ ಬೇಜವಾಬ್ದಾರಿತನವನ್ನು ಪ್ರಜೆಗಳಿಗೆ ತಿಳಿಸುತ್ತದೆ. ವಿರೋಧ ಪಕ್ಷವು ಸರ್ಕಾರವನ್ನು ಸದಾ ಜಾಗೃತವಾಗಿರುವಂತೆ ನೋಡಿಕೊಳ್ಳುತ್ತದೆ.

ಸರ್ಕಾರದ ನೀತಿ ನಿರೂಪಣೆಯ ರಚನೆಯ ಸಂದರ್ಭದಲ್ಲಿ ವಿರೋಧಪಕ್ಷವು ಅದಕ್ಕೆ ಸಲಹೆ ಸೂಚನೆಗಳನ್ನು ನೀಡಬಹುದು ಮತ್ತು ಸರ್ಕಾರದ ಯಾವುದೇ ನೀತಿ ರಾಷ್ಟ್ರದ ಪ್ರಗತಿಗೆ ಮಾರಕವಾಗಿದ್ದರೆ ಅದನ್ನು ತಿದ್ದುಪಡಿಮಾಡುವಂತೆ ಅಥವಾ ಆ ನೀತಿಯನ್ನು ಕೈ ಬಿಡುವಂತೆ ಒತ್ತಾಯಿಸಬಹುದು.

ವಿರೋಧ ಪಕ್ಷಗಳ ಸಾರ್ವಜನಿಕ ಅಭಿಪ್ರಾಯವನ್ನು ಪ್ರತಿನಿಧಿಸುವ ಕಾರ್ಯವನ್ನು ಮಾಡುತ್ತದೆ. ಅಂದರೆ ಯಾವುದಾದರೂ ಒಂದು ಸಮಸ್ಯೆಯ ಬಗ್ಗೆ ಆಳ ಅಧ್ಯಯನ ನಡೆಸಿ ಅದರಿಂದ ಉಂಟಾಗುವ ಬಾಧಕಗಳನ್ನು ಹಲವಾರು ಪ್ರಚಾರ ಮಾಧ್ಯಮಗಳ ಮೂಲಕ ಬಹಿರಂಗಪಡಿಸುತ್ತದೆ ಮತ್ತು ಪ್ರಜೆಗಳ ಗಮನವನ್ನು ಅದರತ್ತ ಸೆಳೆಯಲು ಪ್ರಯತ್ನಿಸುತ್ತದೆ. ಇದರ ಮೂಲಕ ಸಾರ್ವಜನಿಕ ಅಭಿಪ್ರಾಯವನ್ನು ಮೂಡಿಸಿ ಜನರಲ್ಲಿ ರಾಜಕೀಯ ಜ್ಞಾನ ಹಾಗೂ ರಾಜಕೀಯ ಜಾಗೃತಿ ಮೂಡಿಸುತ್ತದೆ ಹಾಗೂ ಪ್ರಜೆಗಳ ಪ್ರಚಲಿತ ವಿದ್ಯಮಾನಗಳು ಸರ್ಕಾರದಲ್ಲಿ ಹೇಗೆ ಸಾಗುತ್ತವೆ ಎಂಬುದರ ಸ್ಪಷ್ಟ ನಿದರ್ಶನ ನೀಡುತ್ತದೆ.

ಈ ಎಲ್ಲ ಕಾರ್ಯಗಳನ್ನು ವಿರೋಧ ಪಕ್ಷವು ಯಶಸ್ವಿಯಾಗಿ ನಿರ್ವಹಿಸಬೇಕಾದರೆ ಅದು ಸಾಕಷ್ಟು ಸಮರ್ಥ ಸುವ್ಯವಸ್ಥಿತವೂ ಆಗಿರಬೇಕು. ದುರ್ಬಲ ಹಾಗೂ ಅವ್ಯವಸ್ಥಿತವಾದ ಪಕ್ಷಗಳು ಪ್ರಜಾಪ್ರಭುತ್ವದಲ್ಲಿ ಉತ್ತಮವಾಗಿ ತಮ್ಮ ಜವಾಬ್ದಾರಿಯನ್ನು ಈಡೇರಿಸಲಾಗುವುದಿಲ್ಲ. ಸಂಸದೀಯ ಪ್ರಜಾಪ್ರಭುತ್ವ ತತ್ವದಲ್ಲಂತು ಜವಾಬ್ದಾರಿಯುತ ವಿರೋಧ ಪಕ್ಷವು ಅತ್ಯಂತ ಅವಶ್ಯಕವಾಗಿರುತ್ತದೆ.

ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿ ಕೇವಲ ಆಡಳಿತ ಪಕ್ಷದ ಕಾರ್ಯ ಮಾತ್ರವಲ್ಲ. ಬದಲಿಗೆ ವಿರೋಧ ಪಕ್ಷದ ಪಾತ್ರವೂ ಇದರಲ್ಲಿ ಗೌಣವಾಗಿರುತ್ತದೆ. ವಿರೋಧ ಪಕ್ಷ ಹೆಚ್ಚು ಪ್ರಭಾವಶಾಲಿಯಾದಷ್ಟು ಆಡಳಿತ ಪಕ್ಷ ಅಷ್ಟೇ ಕ್ರಿಯಾಶೀಲವಾಗುತ್ತದೆ. ಹೀಗೆ ವಿರೋಧ ಪಕ್ಷಗಳು ಜನತೆಯ ಹಿತಾಸಕ್ತಿಗಾಗಿ ಇರುವುದರ ಜೊತೆಗೆ ಆಳುವ ಪಕ್ಷದ ಹಿತಾಸಕ್ತಿಯಿಂದಲೂ ಇರಬೇಕಾಗುವುದು ಅವಶ್ಯಕ. ವಿರೋಧ ಪಕ್ಷವು ಪ್ರಬಲವಾಗಿಲ್ಲದಿದ್ದಲ್ಲಿ ಅಧಿಕಾರಯುಕ್ತ ಪಕ್ಷ ಜವಾಬ್ದಾರಿಯಿಂದ ಕಾರ್ಯನಿರ್ವಹಿಸುವುದು ಅಸಾಧ್ಯ. ಒಟ್ಟಿನಲ್ಲಿ ಹೇಳುವುದಾದರೆ ಸರ್ಕಾರದ ಆಡಳಿತದ ದಕ್ಷತೆಯು ಅಲ್ಲಿ ಅಸ್ಥಿತ್ವದಲ್ಲಿರುವ ವಿರೋಧಪಕ್ಷದ ಕಾರ್ಯಚಟುವಟಿಕೆಯ ಮೇಲೆ ಅವಲಂಬಿಸಿರುತ್ತದೆ.

**೫.೮ ಸಾರಾಂಶ**

ಪ್ರಜಾಪ್ರಭುತ್ವದ ಯಶಸ್ಸಿಗೆ ಹಾಗೂ ರಾಷ್ಟ್ರದ ಅಭ್ಯುದಯಕ್ಕೆ ರಾಜಕೀಯ ಪಕ್ಷಗಳು ತಮ್ಮದೇ ಆದ ಕೊಡುಗೆಯನ್ನು ನೀಡುತ್ತವೆ. ಇದು ಕೇವಲ ಆಡಳಿತವನ್ನು ಮಾತ್ರ ನಡೆಸುವ ಜವಾಬ್ದಾರಿ ಹೊಂದಿರದೆ, ಆಡಳಿತ ರೂಢ ಪಕ್ಷಗಳ ತಪ್ಪು ಒಪ್ಪುಗಳನ್ನು ಸಾರ್ವಜನಿಕರಿಗೆ ತಿಳಿಯಪಡಿಸುವಲ್ಲಿ ಗಣನೀಯ ಪಾತ್ರವಹಿಸುತ್ತವೆ. ಭಾರತದಲ್ಲಿ ಸ್ವತಂತ್ರಪೂರ್ವದಿಂದಲೂ ಕಾಂಗ್ರೆಸ್ ಒಂದೇ ಅಸ್ಥಿತ್ವದಲ್ಲಿದ್ದ ಪಕ್ಷವಾಗಿತ್ತು. ಸ್ವಾತಂತ್ರ್ಯಾನಂತರವೂ ಸುಮಾರು ವರ್ಷಗಳವರೆಗೆ ರಾಜಕೀಯ ಅಧಿಕಾರ ಸಂಪೂರ್ಣವಾಗಿ ಕಾಂಗ್ರೆಸ್ ಕೈಯಲ್ಲಿದ್ದಿತು. ಆದರೆ

ಪಕ್ಷದಲ್ಲಿ ಒಡಕುಗಳು ಪ್ರಾರಂಭವಾದ ಮೇಲೆ ಹಲವಾರು ಪಕ್ಷಗಳ ಉಗಮಕ್ಕೆ ನಾಂದಿಯಾಯಿತು. ಇತ್ತೀಚಿನ ಬೆಳವಣಿಗೆಗಳಲ್ಲಿ ಕೇವಲ ರಾಜ್ಯ ರಾಜಕಾರಣದಲ್ಲಿ ಮಾತ್ರವಲ್ಲದೆ, ರಾಷ್ಟ್ರ ರಾಜಕಾರಣದಲ್ಲೂ ಕೂಡ ಪ್ರಾದೇಶಿಕ ಪಕ್ಷಗಳು ಹೆಚ್ಚು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿವೆ. ಇದರ ಪರಿಣಾಮವಾಗಿ ಕೇಂದ್ರ ಮತ್ತು ಹಲವಾರು ರಾಜ್ಯಗಳಲ್ಲೂ ಸಮ್ಮಿಶ್ರ ಸರ್ಕಾರ ಪದ್ಧತಿ ಅನಿವಾರ್ಯವಾಗುತ್ತಿದೆ.

### ೫.೯. ಪಾರಿಭಾಷಿಕ ಪದಕೋಶ

೧. Party System - ಪಕ್ಷಪದ್ಧತಿ
೨. Regional Party - ಪ್ರಾದೇಶಿಕ ಪಕ್ಷ
೩. Ruling Party - ಆಡಳಿತ ರೂಢ ಪಕ್ಷ
೪. Opposition Party - ವಿರೋಧಪಕ್ಷ
೫. Government Formation - ಸರ್ಕಾರದ ರಚನೆ
೬. Multiparty System - ಬಹುಪಕ್ಷಪದ್ಧತಿ
೭. Anti-defection Law - ಪಕ್ಷಾಂತರ ನಿಷೇಧ ಕಾಯ್ದೆ
೮. Representatives - ಪ್ರತಿನಿಧಿಗಳು
೯. Corruption - ಭ್ರಷ್ಟಾಚಾರ
೧೦. National Party - ರಾಷ್ಟ್ರೀಯ ಪಕ್ಷ

### ೫.೧೦ ಪ್ರಶ್ನೆಗಳು

#### ಅ. ಒಂದು ಅಂಕದ ಪ್ರಶ್ನೆಗಳು

೧. ರಾಜಕೀಯ ಪಕ್ಷಗಳು ಏಕೆ ಬೆಳೆದುಬಂದಿವೆ?
೨. ರಾಜಕೀಯ ಪಕ್ಷ ಎಂದರೇನು?
೩. ಬಹುಪಕ್ಷಪದ್ಧತಿ ಎಂದರೇನು?
೪. ಒಡಕು ಎಂದರೇನು?
೫. ವಾಮಪಂಥೀಯ ಪಕ್ಷ ಎಂದರೇನು?
೬. ಬಲಪಂಥೀಯ ಪಕ್ಷ ಎಂದರೇನು?
೭. ರಾಷ್ಟ್ರೀಯ ಪಕ್ಷ ಎಂದರೇನು?
೮. ಪ್ರಾದೇಶಿಕ ಪಕ್ಷ ಎಂದರೇನು?
೯. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಸ್ಥಾಪನೆಯಾದ ವರ್ಷ ಯಾವುದು?
೧೦. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸನ್ನು ಯಾರು ಸ್ಥಾಪಿಸಿದರು?
೧೧. ಜನತಾ ಪಕ್ಷ ಯಾವಾಗ ಉದಯವಾಯಿತು?
೧೨. ಜನತಾದಳ ಪಕ್ಷದ ಉದಯ ಯಾವಾಗ ಆಯಿತು?

೧೩. ಭಾರತದಲ್ಲಿ ಕಮ್ಯುನಿಸ್ಟ್ ಪಕ್ಷ ಯಾವಾಗ ಸ್ಥಾಪನೆಯಾಯಿತು?
೧೪. ಬಿ.ಜೆ.ಪಿ. ಪಕ್ಷವು ಯಾವಾಗ ಅಸ್ತಿತ್ವಕ್ಕೆ ಬಂದಿತು?
೧೫. ವಿರೋಧ ಪಕ್ಷ ಎಂದರೇನು?

**ಆ. ಎರಡು ಅಂಕದ ಪ್ರಶ್ನೆಗಳು**

೧. ರಾಬರ್ಟ್‌ಸನ್‌ರವರ ಪ್ರಕಾರ ರಾಜಕೀಯ ಪಕ್ಷದ ಅರ್ಥವನ್ನು ನೀಡಿ.
೨. ರಾಜಕೀಯ ಪಕ್ಷದ ರಚನೆಗೆ ಅಗತ್ಯವಾದ ಅಂಶಗಳಾವುವು?
೩. ರಾಷ್ಟ್ರೀಯ ಮತ್ತು ಪ್ರಾದೇಶಕ ಪಕ್ಷಗಳು ಎಂದರೇನು?
೪. ಆಡಳಿತ ಪಕ್ಷ ಮತ್ತು ವಿರೋಧಪಕ್ಷಕ್ಕೂ ಇರುವ ವ್ಯತ್ಯಾಸವೇನು?
೫. ಬಹುಪಕ್ಷಪದ್ಧತಿಯು ಭಾರತದಲ್ಲಿ ಎಂದಿನಿಂದ ಪ್ರಾರಂಭವಾಯಿತು?
೬. ಯಾವ ಯಾವ ರಾಷ್ಟ್ರಗಳಲ್ಲಿ ಬಹುಪಕ್ಷಪದ್ಧತಿ ಅಸ್ತಿತ್ವದಲ್ಲಿದೆ?
೭. ಭಾರತದಲ್ಲಿರುವ ಪ್ರಮುಖ ರಾಷ್ಟ್ರೀಯ ಪಕ್ಷಗಳನ್ನು ಹೆಸರಿಸಿ
೮. ಭಾರತದಲ್ಲಿರುವ ಪ್ರಮುಖ ಪ್ರಾದೇಶಿಕ ಪಕ್ಷಗಳನ್ನು ಹೆಸರಿಸಿ
೯. ರಾಜಕೀಯ ಪಕ್ಷಗಳ ಎರಡು ಪ್ರಮುಖ ಜವಾಬ್ದಾರಿಗಳನ್ನು ತಿಳಿಸಿ.
೧೦. ಭಾರತದ ಪಕ್ಷಪದ್ಧತಿಯ ಎರಡು ಗುಣಲಕ್ಷಣಗಳನ್ನು ಹೆಸರಿಸಿ.
೧೧. ವಾಮಪಂಥೀಯ ಮತ್ತು ಬಲಪಂಥೀಯ ಪಕ್ಷಗಳು ಎಂದರೇನು?
೧೨. ವಿರೋಧ ಪಕ್ಷದ ಎರಡು ಪ್ರಮುಖ ಜವಾಬ್ದಾರಿಗಳನ್ನು ತಿಳಿಸಿ.
೧೩. ಭಾರತದಲ್ಲಿ ಎಡಪಂಥೀಯ ಪಕ್ಷಗಳು ಬೆಳೆಯಲು ಕಾರಣವೇನು?
೧೪. ಕಾಂಗ್ರೆಸ್ ಪಕ್ಷದ ನಾಲ್ಕು ತತ್ವಗಳನ್ನು ಹೆಸರಿಸಿ.
೧೫. ರಾಷ್ಟ್ರೀಯ ಮತ್ತು ಪ್ರಾದೇಶಿಕ ಪಕ್ಷಗಳಿಗಿರುವ ವ್ಯತ್ಯಾಸವೇನು?

**ಇ. ಐದು ಅಂಕಗಳ ಪ್ರಶ್ನೆಗಳು**

೧. ರಾಜಕೀಯ ಪಕ್ಷದ ಅರ್ಥವನ್ನು ವ್ಯಾಖ್ಯಾನಗಳ ಮೂಲಕ ಸ್ಪಷ್ಟೀಕರಿಸಿ.
೨. ರಾಜಕೀಯ ಪಕ್ಷಗಳ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿ.
೩. ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಬಗ್ಗೆ ಒಂದು ಲಘು ಟಿಪ್ಪಣಿಯನ್ನು ಬರೆಯಿರಿ.
೪. ಜನತಾ ಪಕ್ಷದ ಬಗ್ಗೆ ಒಂದು ಟಿಪ್ಪಣಿಯನ್ನು ಬರೆಯಿರಿ.
೫. ಭಾರತೀಯ ಜನತಾಪಕ್ಷದ ಬಗ್ಗೆ ಟಿಪ್ಪಣಿಯನ್ನು ಬರೆಯಿರಿ.
೬. ಭಾರತದಲ್ಲಿ ಪಕ್ಷಾಂತರ ನಿಷೇಧ ಕಾಯ್ದೆಯನ್ನು ಸಂಕ್ಷಿಪ್ತವಾಗಿ ಬರೆಯಿರಿ.
೭. ರಾಜಕೀಯ ಪಕ್ಷಗಳು ಜವಾಬ್ದಾರಿಯನ್ನು ಸಂಕ್ಷಿಪ್ತವಾಗಿ ಬರೆಯಿರಿ.
೮. ಬಹುಪಕ್ಷಪದ್ಧತಿ ಭಾರತದಲ್ಲಿ ಬೆಳವಣಿಗೆಯಾದುದರ ಬಗ್ಗೆ ಸಂಕ್ಷಿಪ್ತವಾಗಿ ಬರೆಯಿರಿ.
೯. ವಿರೋಧ ಪಕ್ಷಗಳ ಮಹತ್ವವನ್ನು ಬರೆಯಿರಿ.
೧೦. ರಾಜಕೀಯ ಪಕ್ಷದ ಸ್ವಭಾವವನ್ನು ಸಂಕ್ಷಿಪ್ತವಾಗಿ ವಿವರಿಸಿ.

### ಈ. ಹತ್ತು ಅಂಕಗಳ ಪ್ರಶ್ನೆಗಳು

೧. ರಾಜಕೀಯ ಪಕ್ಷ ಎಂದರೇನು? ಅರ್ಥ ಮತ್ತು ವ್ಯಾಖ್ಯಾನಗಳ ಮೂಲಕ ವಿವರಿಸಿ.
೨. ಭಾರತದ ರಾಜಕೀಯ ಪಕ್ಷದ ಸ್ವಭಾವವನ್ನು ವಿವರಣಾತ್ಮಕವಾಗಿ ಬರೆಯಿರಿ.
೩. ಭಾರತದಲ್ಲಿ ಬಹುಪಕ್ಷಪದ್ಧತಿಯ ಬೆಳವಣಿಗೆಯನ್ನು ಚರ್ಚಿಸಿ.
೪. ಭಾರತದಲ್ಲಿರುವ ರಾಷ್ಟ್ರೀಯ ಪಕ್ಷಗಳ ಬಗ್ಗೆ ಒಂದು ಪ್ರಬಂಧವನ್ನು ಬರೆಯಿರಿ.
೫. ಭಾರತದಲ್ಲಿರುವ ಪ್ರಮುಖ ಪ್ರಾದೇಶಿಕ ಪಕ್ಷಗಳ ತತ್ವಗಳನ್ನು ವಿವರಿಸಿ.
೬. ಭಾರತದಲ್ಲಿ ವಿರೋಧ ಪಕ್ಷಗಳ ಜವಾಬ್ದಾರಿ ಮತ್ತು ಪಾತ್ರವನ್ನು ವಿವರಿಸಿ.
೭. ರಾಜಕೀಯ ಪಕ್ಷಗಳ ಪಾತ್ರ ಮತ್ತು ಜವಾಬ್ದಾರಿಯನ್ನು ವಿವರಿಸಿ.

### ಉ. ಅಭ್ಯಾಸ ಚಟುವಟಿಕೆಗಳು

೧. ಭಾರತಕ್ಕೆ ಎಂತಹ ಪಕ್ಷ ಪದ್ಧತಿ ಸೂಕ್ತವೆಂದು ತಿಳಿಸಿ ಮತ್ತು ಕಾರಣಕೊಡಿ.
೨. ಕರ್ನಾಟಕದಲ್ಲಿರುವ ಪ್ರಮುಖ ಪ್ರಾದೇಶಿಕ ಪಕ್ಷಗಳನ್ನು ಪಟ್ಟಿಮಾಡಿ.
೩. ಪಕ್ಷಪದ್ಧತಿಯು ಜನರ ಜೀವನದ ಮೇಲೆ ಯಾವ ಯಾವ ಸಂದರ್ಭದಲ್ಲಿ ಹೇಗೆ ಪ್ರಭಾವ ಬೀರುತ್ತಿದೆ? ಚರ್ಚಿಸಿ.
೪. ಆಧುನಿಕ ಪ್ರಜಾಪ್ರಭುತ್ವದಲ್ಲಿ ವಿರೋಧ ಪಕ್ಷದ ಅವಶ್ಯಕತೆಯನ್ನು ಚರ್ಚಿಸಿ.
೫. ರಾಷ್ಟ್ರೀಯ ಪಕ್ಷಗಳಿಗೂ ಹಾಗೂ ಪ್ರಾದೇಶಿಕ ಪಕ್ಷಗಳಿಗೂ ಇರುವ ಸಾಮ್ಯತೆ ಮತ್ತು ಭಿನ್ನತೆಗಳನ್ನು ಪಟ್ಟಿಮಾಡಿ.

ಅಧ್ಯಾಯ ೬

# ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಒತ್ತಡ ಗುಂಪುಗಳು

## ೬.೧ ಸಾರ್ವಜನಿಕ ಅಭಿಪ್ರಾಯ : ಅರ್ಥ, ಮಹತ್ವ ಮತ್ತು ಪಾತ್ರ

ಆಧುನಿಕ ಜಗತ್ತಿನಲ್ಲಿ ಪ್ರಜಾಪ್ರಭುತ್ವ ಮತ್ತು ಸಾರ್ವಜನಿಕ ಅಭಿಪ್ರಾಯ ಒಂದಕ್ಕೊಂದು ನಿಕಟವಾದ ಸಂಬಂಧವನ್ನು ಹೊಂದಿವೆ ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯ ಯಶಸ್ವಿಗೆ ಸಾರ್ವಜನಿಕ ಅಭಿಪ್ರಾಯವು ಒಂದು ಅಗತ್ಯ ಅಂಶ ಎಂದರೆ ಉತ್ಪ್ರೇಕ್ಷೆ ಆಗಲಾರದು. ಯುರೋಪಿನ ರಾಜಕೀಯದಲ್ಲಿ ಫ್ರಾನ್ಸ್‌ನ ಮಹಾಕ್ರಾಂತಿಯ ಸಂದರ್ಭದಲ್ಲಿ ಈ ಪದವನ್ನು ಪ್ರಪ್ರಥಮವಾಗಿ ಬಳಸಿದರು. ಸಾರ್ವಜನಿಕ ಅಭಿಪ್ರಾಯವೆಂದರೆ ಯಾವುದೇ ನೀತಿ ನಿಯಮಗಳ ಮೇಲೆ ಸರ್ಕಾರದ ಮೇಲೆ ಜನರು ಹೊಂದಿರುವ ಅಭಿಪ್ರಾಯವಾಗಿದೆ.

### ವ್ಯಾಖ್ಯೆಗಳು

ಸಾರ್ವಜನಿಕ ಅಭಿಪ್ರಾಯದ ಬಗ್ಗೆ ಹಲವಾರು ಚಿಂತಕರು ತಮ್ಮದೇ ಆದ ವ್ಯಾಖ್ಯಾನ ಗಳನ್ನು ನೀಡಿದ್ದಾರೆ. ಅವುಗಳೆಂದರೆ:

**ಲಾರ್ಡ್ ಬ್ರೈಸ್**‌ರವರ ಪ್ರಕಾರ "ಸಮಾಜದ ಹಿತಕ್ಕೆ ಸಂಬಂಧಿಸಿದ ವಿಷಯಗಳ ಮೇಲೆ ಜನರು ವ್ಯಕ್ತಪಡಿಸುವ ಅಭಿಪ್ರಾಯಗಳ ಒಟ್ಟಾದ ಸಮೂಹವನ್ನು ಸಾರ್ವಜನಿಕ ಅಭಿಪ್ರಾಯ" ಎಂದಿದ್ದಾರೆ.

**ಯಂಗ್**‌ರವರ ಪ್ರಕಾರ "ಸಾರ್ವಜನಿಕರು ನಿರ್ದಿಷ್ಟ ಸಮಯದಲ್ಲಿ ಹೊಂದಿರುವ ಅಭಿಪ್ರಾಯವೇ ಸಾರ್ವಜನಿಕ ಅಭಿಪ್ರಾಯ"ವೆನಿಸುತ್ತದೆ.

**ಎಲ್.ಡಬ್ಲ್ಯೂ.ಡಾಬ್**‌ರ ಪ್ರಕಾರ "ಒಂದು ಗುಂಪಿಗೆ ಸೇರಿರುವ ಜನರು ಯಾವುದೇ ಒಂದು ವಿಷಯದ ಕುರಿತು ತೋರುವ ಪ್ರವೃತ್ತಿಯೆ ಸಾರ್ವಜನಿಕ ಅಭಿಪ್ರಾಯ" ಎನಿಸಿ ಕೊಂಡಿದೆ.

**ಗಿನ್ಸ್‌ಬರ್ಗ್**‌ರವರ ದೃಷ್ಟಿಯಲ್ಲಿ "ಹಲವಾರು ಮನಸ್ಸುಗಳ ಪರಸ್ಪರ ಕ್ರಿಯೆಯ ಪರಿಣಾಮವಾಗಿ ಬಂದ ಸಾರ್ವಜನಿಕ ಫಲವೇ ಸಾರ್ವಜನಿಕ ಅಭಿಪ್ರಾಯ"ವಾಗಿರುತ್ತದೆ.

**ಕಾಸಕ್**‌ರವರ ಪ್ರಕಾರ "ಒಂದು ನಿರ್ದಿಷ್ಟ ಸ್ಥಾನ ಮತ್ತು ಕಾಲಾವಧಿಯಲ್ಲಿ ಅಸ್ತಿತ್ವ ದಲ್ಲಿರುವ ವಿಚಾರ ಸರಣಿಗಳ ಪ್ರವಾಹದಲ್ಲಿ ಮೇಲುಗೈ ಸಾಧಿಸಿ ಒಮ್ಮತ ಹೊಂದಿರುವುದು ಸಾರ್ವಜನಿಕ ಅಭಿಪ್ರಾಯವಾಗಿದೆ. ಇದು ಯಾವುದೇ ಒಂದು ಗುಂಪಿನ ಸದಸ್ಯರು ತಮ್ಮ ಗುಂಪಿಗೆ ಅನ್ವಯಿಸುವ ವಿಷಯಗಳ ಬಗ್ಗೆ ತೋರಿಸುವ ಒಟ್ಟು ಅಭಿಪ್ರಾಯ."

ಸಾರ್ವಜನಿಕ ಅಭಿಪ್ರಾಯದ ಬಗ್ಗೆ ಹೀಗೆ ಭಿನ್ನವಾದ ವ್ಯಾಖ್ಯಾನಗಳಿದ್ದರೂ ಸಹ ಅದಕ್ಕೆ ನಿರ್ದಿಷ್ಟವಾದ ಅರ್ಥ ನೀಡುವುದು ಕಷ್ಟಕರವೆಂದೇ ಭಾವಿಸಿದರೂ ಹಲವಾರು ಸಂದರ್ಭದಲ್ಲಿ ಸಾರ್ವಜನಿಕ ಅಭಿಪ್ರಾಯವು ಅಲ್ಪಸಂಖ್ಯಾತರ ಅಭಿಪ್ರಾಯವನ್ನು ಕಡೆಗಣಿಸಿದಂತಹ ಕೆಲವರದೇ ಅಭಿಪ್ರಾಯವಾಗಿರುತ್ತದೆ.

ಬ್ರಿಟನ್ ಮತ್ತು ಅಮೇರಿಕಾ ಮುಂತಾದ ಹಲವಾರು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಾರ್ವಜನಿಕ ಅಭಿಪ್ರಾಯಕ್ಕೆ ಅಧಿಕ ಮಹತ್ವವಿದೆ. ಅಲ್ಲಿಯ ಸಮೂಹ ಮಾಧ್ಯಮಗಳು ಸಾರ್ವಜನಿಕ ಅಭಿಪ್ರಾಯವನ್ನು ಕ್ರಿಯಾಶೀಲಗೊಳಿಸುವಲ್ಲಿ ಗಣನೀಯ ಪಾತ್ರವನ್ನು ವಹಿಸುತ್ತವೆ ಮತ್ತು ಅದಕ್ಕಾಗಿ ಅಪಾರ ಹಣವನ್ನು ವೆಚ್ಚ ಮಾಡಲಾಗುತ್ತದೆ. ಕಾರಣ ಅಲ್ಲಿ ಸರ್ಕಾರದ ಅಸ್ತಿತ್ವವೇ ಸಾರ್ವಜನಿಕ ಅಭಿಪ್ರಾಯದ ಮೇಲೆ ಅವಲಂಬಿತವಾಗಿರುತ್ತದೆ. ಆದರೆ ಭಾರತದಲ್ಲಿ ಕೆಲವು ಸಂದರ್ಭಗಳಲ್ಲಿ ಹೊರತು ಪಡಿಸಿದರೆ ಅಷ್ಟಾಗಿ ಮಹತ್ವ ಪಡೆದಿಲ್ಲ.

ಪ್ರಜಾಪ್ರಭುತ್ವದ ಬೆಳವಣಿಗೆಯೊಂದಿಗೆ ಸಾರ್ವಜನಿಕ ಅಭಿಪ್ರಾಯವು ಮಹತ್ವ ಪಡೆಯುತ್ತಾಬಂದಿದೆ. ಸರ್ಕಾರದ ನೀತಿ ನಿರ್ಧಾರಗಳು ಅಭಿಪ್ರಾಯದ ಫಲವಾಗಿಯೇ ವಿನಹ ಬಲದ ಪರಿಣಾಮವಾಗಿ ಮೂಡಿಬರಲಿಲ್ಲ. ಸಾರ್ವಜನಿಕ ಅಭಿಪ್ರಾಯದ ಪಾತ್ರ ಸರ್ಕಾರದ ನಿರ್ವಹಣೆಯಲ್ಲಿ ಪ್ರಮುಖವಾಗಿ ಮಾನ್ಯತೆ ಪಡೆಯುವಂತೆ ಆಯಿತು. ಸಾರ್ವಜನಿಕ ಅಭಿಪ್ರಾಯವು ಯಾವುದೇ ರೀತಿಯ ದಾಖಲೆಯಾಗಿರದೆ, ಅದು ಆಯಾ ಸಂದರ್ಭದಲ್ಲಿ ಸರ್ಕಾರದ ನೀತಿ ನಿರೂಪಣೆ ಮತ್ತು ಸಮಸ್ಯೆಗಳ ಬಗ್ಗೆ ತತ್‌ಕ್ಷಣದಲ್ಲಿ ಪ್ರಜೆಗಳು ನೀಡುವ ನಕಾರಾತ್ಮಕ ಅಥವಾ ಸಕಾರಾತ್ಮಕ ಅಭಿಪ್ರಾಯವೇ ಆಗಿರುತ್ತದೆ.

ಬಹುಸಂಖ್ಯಾತರ ಅಭಿಪ್ರಾಯವನ್ನು ಅಲ್ಪಸಂಖ್ಯಾತರು ಆ ಬಗ್ಗೆ ಸ್ವಲ್ಪ ಸಹಮತವನ್ನು ವ್ಯಕ್ತಪಡಿಸದೆ ಹೋದರೂ ಅದಕ್ಕೆ ಸಮ್ಮತಿಯನ್ನು ಸೂಚಿಸಿರುತ್ತಾರೆ. ಅಂದರೆ ಬಹು ಸಂಖ್ಯಾತರ ಅಭಿಪ್ರಾಯವು ಅಲ್ಪಸಂಖ್ಯಾತರೂ ಸಮ್ಮತಿಸುವಂತೆ ಇರಬೇಕಾಗುತ್ತದೆ. ಸಮಾಜದಲ್ಲಿನ ಹಲವಾರು ವಿಭಿನ್ನ ಅಭಿಪ್ರಾಯಗಳು ಹೊರಹೊಮ್ಮುವುದೇ ಪ್ರಜಾಭಿಪ್ರಾಯವೆನಿಸಿಕೊಳ್ಳುತ್ತದೆ. ಪ್ರಜೆಗಳ ಸ್ವಾರ್ಥ ಅಭಿಪ್ರಾಯವು ಸಾರ್ವಜನಿಕ ಅಭಿಪ್ರಾಯವೆನಿಸಿಕೊಳ್ಳುವುದಿಲ್ಲ. ಸಾರ್ವಜನಿಕರ ಸರ್ವರ ಕಲ್ಯಾಣಕ್ಕೋಸ್ಕರ ಸಾರ್ವಜನಿಕ ವಿಷಯಗಳ ಮೇಲೆ ಸಾರ್ವಜನಿಕರು ವ್ಯಕ್ತಪಡಿಸುವ ಅಭಿಪ್ರಾಯವೇ ಸಾರ್ವಜನಿಕ ಅಭಿಪ್ರಾಯವಾಗಿರುತ್ತದೆ.

### ಸಾರ್ವಜನಿಕ ಅಭಿಪ್ರಾಯದ ಪ್ರಾಮುಖ್ಯತೆ

ಪ್ರಜಾಪ್ರಭುತ್ವದ ಯಶಸ್ಸಿಗೆ ಅತ್ಯಂತ ಅಗತ್ಯವಾದ ಅಂಶಗಳಲ್ಲಿ ಸಾರ್ವಜನಿಕ ಅಭಿಪ್ರಾಯ ಸಹ ಒಂದಾಗಿದೆ. ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆಯು ಸಾರ್ವಜನಿಕ ಅಭಿಪ್ರಾಯದ ತಳಹದಿಯ ಮೇಲೆ ರೂಪುಗೊಂಡಿರುತ್ತದೆ.

ಸಾರ್ವಜನಿಕ ಅಭಿಪ್ರಾಯಕ್ಕೆ ಪ್ರಾಚೀನ ಕಾಲದಲ್ಲಿ ಮಹತ್ವ ಅಷ್ಟಾಗಿ ಇರಲಿಲ್ಲ. ಕಾರಣ ರಾಜರು ಸರ್ವಾಧಿಕಾರಿಯಾಗಿ ಆಡಳಿತ ನಡೆಸುತ್ತಿದ್ದರು ಮತ್ತು ಪ್ರಜೆಗಳು ರಾಜನನ್ನು

ದೈವಾಂಶ ಸಂಭೂತನೆಂದು ದೈವಿಕ ಸಿದ್ಧಾಂತ (ರಾಜ್ಯದ ಉಗಮದ ಸಿದ್ಧಾಂತ)ದ ಮೇಲೆ ಅಪಾರ ನಂಬಿಕೆ ಹೊಂದಿದ್ದರು. ಆದುದರಿಂದ ಪ್ರಭುತ್ವದ ಬಗ್ಗೆ ಪ್ರಜೆಗಳು ಯಾವುದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಲು ಹಿಂಜರಿಯುತ್ತಿದ್ದರು ಮತ್ತು ವ್ಯಕ್ತಪಡಿಸಿದರೂ ಸಹ ಅದು ಘೋರ ಅಪರಾಧವಾಗುತ್ತಿತ್ತು. ಆದರೆ ಕಾಲಾನಂತರ ಪ್ರಜಾಪ್ರಭುತ್ವದ ವ್ಯವಸ್ಥೆ ಬೆಳವಣಿಗೆ ಹೊಂದಲು ಪ್ರಾರಂಭವಾದ ಮೇಲೆ ಮತ್ತು ಸಾರ್ವಜನಿಕ ಶಿಕ್ಷಣ ಅಧಿಕವಾಗತೊಡಗಿದ್ದರಿಂದ ಮತ್ತು ಆಡಳಿತದಲ್ಲಿ ಪ್ರಜೆಗಳೂ ಭಾಗವಹಿಸುವ ಪದ್ಧತಿ ಅಧಿಕವಾಗಿದ್ದರಿಂದ ಸಾರ್ವಜನಿಕ ಅಭಿಪ್ರಾಯ ಹೆಚ್ಚು ಮಹತ್ವವನ್ನು ಪಡೆಯಲು ಪ್ರಾರಂಭಿಸಿತು. ಸರ್ವಾಧಿಕಾರಿಗಳಾಗಿದ್ದ ಹಿಟ್ಲರ್, ಮುಸುಲೋನಿಯೂ ಸಹ ಪ್ರಬಲ ಜರ್ಮನಿಯ, ಇಟಲಿಯ ರೂಪುರೇಷೆಗಳನ್ನು ತೋರಿಸಿ ಪ್ರಜೆಗಳ ಬೆಂಬಲ ಪಡೆಯಲು ಪ್ರಯತ್ನಿಸಿದರು.

ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಜನರೇ ಅಂತಿಮ ಪರಮಾಧಿಕಾರವನ್ನು ಹೊಂದಿರುತ್ತಾರೆ. ಆದ್ದರಿಂದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾರ್ವಜನಿಕ ಅಭಿಪ್ರಾಯ ಅತ್ಯಂತ ಪ್ರಭಾವಶಾಲಿಯಾದ ಮಹತ್ವವನ್ನು ಪಡೆದಿದೆ ಮತ್ತು ಸಂಸದೀಯ ಮಾದರಿಯ ಸರ್ಕಾರ ಪದ್ಧತಿಯಲ್ಲಿಯೂ ಸಹ ಇದರ ಪ್ರಭಾವ ಅಧಿಕವಾಗುತ್ತಿದೆ. ಕೆಲವು ಸಂದರ್ಭಗಳಲ್ಲಿ ಸಾರ್ವಜನಿಕ ಅಭಿಪ್ರಾಯವು ಸರ್ಕಾರದ ನೀತಿಗಳ ಮೇಲೆ ನೇರವಾಗಿ ಪ್ರಭಾವ ಬೀರಿದರೆ ಮತ್ತೆ ಕೆಲವು ಸಂದರ್ಭಗಳಲ್ಲಿ ಪರೋಕ್ಷವಾಗಿಯೂ ಪ್ರಭಾವ ಬೀರುತ್ತದೆ. ಪ್ರಜೆಗಳು ಸುಶಿಕ್ಷಿತರಾಗಿದ್ದಾಗ ಮಾತ್ರ ಸಾರ್ವಜನಿಕ ಅಭಿಪ್ರಾಯ ಹೆಚ್ಚುಬಲಯುತವಾಗಿರುತ್ತದೆ.

ಭಾರತದಲ್ಲಿ ೧೯೯೧ರಿಂದ ೧೯೯೬ರವರೆಗೆ ಪ್ರಧಾನ ಮಂತ್ರಿಯಾಗಿದ್ದ ದಿ.ಪಿ.ವಿ.ನರಸಿಂಹ ರಾವ್‌ರವರು ಗ್ಯಾಟ್‌ಗೆ ಸಹಿ ಹಾಕಿದ್ದಾಗ ದೇಶಾದ್ಯಂತ ಅದರ ಪರವಾಗಿ ಮತ್ತು ವಿರೋಧವಾಗಿ ಸಾರ್ವಜನಿಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಇದೂ ಸಹ ಸರ್ಕಾರದ ಮೇಲೆ ಗಾಢವಾದ ಪರಿಣಾಮವನ್ನು ಬೀರಿತ್ತು. ಇಂತಹ ಸಂದರ್ಭಗಳಲ್ಲಿ ಸಾರ್ವಜನಿಕ ಅಭಿಪ್ರಾಯವು ಸರ್ಕಾರದ ನೀತಿ ನಿರೂಪಣೆಯಲ್ಲಿ ತನ್ನ ಮಹತ್ವವನ್ನು ಮೆರೆಯುತ್ತದೆ.

ಸಾರ್ವಜನಿಕ ಅಭಿಪ್ರಾಯವು ಪ್ರಜಾಪ್ರಭುತ್ವದ ಸರ್ಕಾರದಲ್ಲಿ ಎರಡು ಪ್ರಮುಖ ಕಾರ್ಯಗಳನ್ನು ಮಾಡುತ್ತದೆ. ಮೊದಲನೆಯದಾಗಿ ಸಮಾಜದಲ್ಲಿ ಅನೇಕ ಗುಂಪು, ಸಮೂಹಗಳಿದ್ದು ಅವುಗಳ ಅಭಿಪ್ರಾಯದಲ್ಲಿ ಸಾಮರಸ್ಯ, ಸಮತೋಲನ ಉಂಟಾದಾಗ ಸರ್ಕಾರವು ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತದೆ. ವಿಭಿನ್ನ ಅಭಿಪ್ರಾಯಗಳಿಗೆ ಮುಕ್ತ ಅವಕಾಶ ನೀಡುವುದರಿಂದಲೇ ಅಲ್ಲಿ ಸಮತೋಲನ ಸಾಧ್ಯವಾಗುತ್ತದೆ. ಎರಡನೆಯದಾಗಿ ಶಾಸನಗಳು ಸಾರ್ವಜನಿಕ ಅಭಿಪ್ರಾಯದ ಪ್ರತಿಬಿಂಬ ಎನ್ನುವಾಗ ಪ್ರಜೆಗಳು ಕಾನೂನನ್ನು ಪಾಲಿಸಲೇಬೇಕಾಗುತ್ತದೆ. ಏಕೆಂದರೆ ಕಾನೂನಿನ ಸೃಷ್ಟಿಕರ್ತನೂ ಹಾಗೂ ಅದರ ಪಾಲಕನೂ ಪ್ರಜೆಯೇ ಆಗಿರುತ್ತಾನೆ.

ಸಾರ್ವಜನಿಕ ಅಭಿಪ್ರಾಯವು ಎಷ್ಟು ಮಹತ್ವ ಹೊಂದಿದೆ ಎಂಬುದನ್ನು ಕೆಲ ಚಿಂತಕರ ಅಭಿಪ್ರಾಯವನ್ನು ಗಮನಿಸಿದರೆ ಅರಿವಾಗುತ್ತದೆ. **ಮೆಕೆವರ್**ರವರ ಪ್ರಕಾರ "ಸಾರ್ವಜನಿಕ ಅಭಿಪ್ರಾಯದ ನಿರಂತರ ಚಟುವಟಿಕೆಯೇ ಪ್ರಜಾಪ್ರಭುತ್ವದ ಕ್ರಿಯಾಶಕ್ತಿಯಾಗಿರುತ್ತದೆ." ಅಂದರೆ ಪ್ರಜಾಪ್ರಭುತ್ವವನ್ನು ಸದಾ ಕ್ರಿಯಾತ್ಮಕವಾಗಿರುವಂತೆ ಮಾಡುವಲ್ಲಿ ಸಾರ್ವಜನಿಕ ಅಭಿಪ್ರಾಯದ ಪಾತ್ರವು ಗಣನೀಯವಾದುದಾಗಿದೆ. **ಗೆಟಲ್**ರವರ ಪ್ರಕಾರ "ಪ್ರಜಾಪ್ರಭುತ್ವದ ಯಶಸ್ಸು ಅಲ್ಲಿನ ಸಾರ್ವಜನಿಕ ಅಭಿಪ್ರಾಯವು ಎಷ್ಟರಮಟ್ಟಿಗೆ ಬೆಳೆದಿದೆ, ಯೋಗ್ಯವಾಗಿದೆ ಹಾಗೂ ಸರ್ಕಾರದ ರೀತಿ-ನೀತಿ ಕಾರ್ಯ ಕಲಾಪಗಳನ್ನು ನಿಯಂತ್ರಿಸುತ್ತಿದೆ ಎನ್ನುವುದನ್ನು ಅವಲಂಬಿಸಿದೆ." ಆದ್ದರಿಂದ ಸಾರ್ವಜನಿಕ ಅಭಿಪ್ರಾಯವನ್ನು ಕಡೆಗಣಿಸಿ ಪ್ರಭುತ್ವವು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲ.

ಆದ್ದರಿಂದ ಆಧುನಿಕ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾರ್ವಜನಿಕ ಅಭಿಪ್ರಾಯವು ಅಧಿಕ ಮಹತ್ವ ಪಡೆಯುತ್ತಿದೆ ಮತ್ತು ಅದರ ಆಧಾರದ ಮೇಲೆ ಸರ್ಕಾರದ ನೀತಿನಿಯಮಗಳು ರೂಪುಗೊಳ್ಳುತ್ತಿವೆ ಎಂದರೆ ತಪ್ಪಾಗಲಾರದು.

### ೬.೨. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ನಿಯೋಗಿಗಳು

ಸಾರ್ವಜನಿಕ ಅಭಿಪ್ರಾಯವು ಜನರಲ್ಲಿ ಮೂಡುವಂತೆ ಒಂದು ಅಂಶವಾದರೂ ಸಹ ಅದು ಪ್ರಜೆಗಳಲ್ಲಿ ಸ್ವಯಂ ಪ್ರೇರಿತವಾಗಿ ಅಂತರ್ಗತದಲ್ಲಿ ಹುಟ್ಟುವುದಿಲ್ಲ. ನಾಗರಿಕರಲ್ಲಿ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವಂತೆ ಮಾಡಲು ಹಲವಾರು ಸಂಸ್ಥೆಗಳು ತಮ್ಮದೇ ಆದ ನಿಟ್ಟಿನಲ್ಲಿ ಪ್ರಯತ್ನಿಸುತ್ತವೆ. ಆಧುನಿಕ ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಅಭಿಪ್ರಾಯವು ಎಷ್ಟು ಪ್ರಾಮುಖ್ಯತೆ ಪಡೆದಿದೆಯೋ ಅಷ್ಟೇ ಮಹತ್ವವನ್ನು ಅದನ್ನು ರೂಪಿಸುವ ಸಂಸ್ಥೆಗಳೂ ಸಹ ಪಡೆದಿವೆ. ಅಂತಹ ಸಂಸ್ಥೆಗಳು ಯಾವುವೆಂದರೆ..

#### ೧. ಪತ್ರಿಕೆಗಳು

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಸಂಸ್ಥೆಗಳಲ್ಲಿ ಪತ್ರಿಕೆಗಳು ಅಗ್ರಗಣ್ಯಸ್ಥಾನ ಪಡೆದಿವೆ. ಇವು ರಾಜ್ಯದಲ್ಲಿನ ಹಲವಾರು ವಿಷಯಗಳನ್ನು ಪ್ರಕಟಿಸಿ ಪ್ರಜೆಗಳಿಗೆ ರಾಜಕೀಯ ವ್ಯವಸ್ಥೆಯ ಸಾಧಕ ಬಾಧಕಗಳನ್ನು ಅರಿಯುವಂತೆ ಮಾಡುತ್ತವೆ. ಪತ್ರಿಕಾರಂಗಕ್ಕೆ ಸಂಪೂರ್ಣ ಸ್ವಾತಂತ್ರ್ಯ ದೊರಕಿದಲ್ಲಿ ಸಾರ್ವಜನಿಕ ಅಭಿಪ್ರಾಯವನ್ನು ಪ್ರಭಾವಶಾಲಿಯುತವಾಗಿ ರೂಪಿಸಬಹುದು. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಪತ್ರಿಕೆಗಳಿಗೆ ಹೆಚ್ಚಿನ ಸ್ವಾತಂತ್ರ್ಯ ನೀಡಿದ್ದು ಪ್ರಜಾಭಿಪ್ರಾಯವನ್ನು ರೂಪಿಸುವ ಗಣನೀಯ ಪಾತ್ರವಹಿಸುತ್ತಿವೆ. ಪತ್ರಿಕೆಗಳು ದೇಶದ ಪ್ರತಿಯೊಂದು ಸ್ಥಳಗಳಿಗೂ ತಲುಪುವುದರಿಂದ ಸಮಗ್ರ ನಾಗರೀಕರು ರಾಜಕೀಯ ಜ್ಞಾನ ಪಡೆದು ಅದರ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಹಕಾರಿಯಾಗಿದೆ.

**ಲಿಪ್‌ಮನ್**ರವರು ಪತ್ರಿಕೆಗಳನ್ನು ಪ್ರಜಾಪ್ರಭುತ್ವದ ಬೈಬಲ್ ಎಂದಿದ್ದಾರೆ. ಪತ್ರಿಕೆಗಳಲ್ಲಿ ಪ್ರಕಟಗೊಳ್ಳುವ ವಿಮರ್ಶೆಗಳನ್ನು ಉಪೇಕ್ಷಿಸುವ ಸಾಹಸವನ್ನು ಸರ್ಕಾರ ಮಾಡುವುದಿಲ್ಲ.

ಇದರ ಜೊತೆ ಸಂಪಾದಕರುಗಳು ಪತ್ರಿಕೆಗಳು ತಮ್ಮ ಸ್ವಹಿತಾಸಕ್ತಿಗಾಗಿ ಜನರನ್ನು ತಪ್ಪು ದಾರಿಗೆ ಎಳೆಯಬಹುದು. ಆದರಿಂದ ಉತ್ತಮ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವುದಿಲ್ಲ. ಪತ್ರಿಕೆಗಳು ಸಾಮಾನ್ಯವಾಗಿ ರಾಜ್ಯದ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ವಿಷಯಗಳ ಬಗ್ಗೆ ವಿವರಣೆ ನೀಡುವ ಮೂಲಕ ಜನತೆಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತವೆ. ತದನಂತರ ಜನತೆ ಅದಕ್ಕೆ ಸ್ಪಂದಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತಾರೆ. ಹೀಗೆ ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ಪತ್ರಿಕೆಗಳು ಗಣನೀಯ ಪಾತ್ರ ವಹಿಸುತ್ತವೆ.

**೨. ರಾಜಕೀಯ ಪಕ್ಷಗಳು**

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ರಾಜಕೀಯ ಪಕ್ಷಗಳು ತಮ್ಮದೇ ಆದ ಛಾಪನ್ನು ಮೂಡಿಸಿಕೊಂಡಿವೆ. ಈ ರಾಜಕೀಯ ಪಕ್ಷಗಳು ರಾಜ್ಯದ ವಿವಿಧ ಸಮಸ್ಯೆಗಳನ್ನು ಜನತೆಗೆ ತಿಳಿಸಿ ಹಾಗೂ ಅವನ್ನು ಹೇಗೆ ಬಗೆಹರಿಸಬಹುದು ಎಂದು ತಿಳಿಸುತ್ತವೆ. ರಾಜಕೀಯ ಪಕ್ಷಗಳ ಮೂಲ ಉದ್ದೇಶವೆಂದರೆ ಅಧಿಕಾರವನ್ನು ಪಡೆಯುವುದೇ ಆಗಿರುತ್ತದೆ. ಆದಕಾರಣ ಸಾರ್ವಜನಿಕರ ಅಭಿಪ್ರಾಯ ಆ ಪಕ್ಷಗಳ ಪರವಾಗಿರುವಂತೆ ಮಾಡಲು ಪ್ರಯತ್ನಿಸುತ್ತವೆ.

ಫೈನರ್‌ರವರ ದೃಷ್ಟಿಯಲ್ಲಿ "ಪ್ರಜಾಪ್ರಭುತ್ವ ಹಾಗೂ ಮತದಾರರಲ್ಲಿ ಏನೂ ವ್ಯತ್ಯಾಸ ವಿರುವುದಿಲ್ಲ. ಮತದಾರರನ್ನು ಹೊರತುಪಡಿಸಿದರೆ ಪ್ರಬಲವಾದ ಸಾರ್ವಜನಿಕ ಅಭಿಪ್ರಾಯ ದೊರೆಯಲು ಸಾಧ್ಯವಿಲ್ಲ."

ಲೋವೆಲ್‌ರವರು ಹೇಳುವಂತೆ "ರಾಜಕೀಯ ಪಕ್ಷಗಳು ಅಭಿಪ್ರಾಯಗಳ ದಲ್ಲಾಳಿ" ಎಂದು ಹೆಸರಾಗಿವೆ. ಪಕ್ಷ ಪ್ರಚಾರ ವೇದಿಕೆ, ನಿಯತಕಾಲಿಕೆ, ರೇಡಿಯೋ, ಕರಪತ್ರಗಳ ಮೂಲಕ, ಪ್ರಜೆಗಳು ತಮ್ಮ ಅಭಿಪ್ರಾಯವನ್ನು ಉತ್ತಮ ರೀತಿಯಲ್ಲಿ ರೂಪಿಸುವಂತೆ ಸಹಕಾರ ಪ್ರೇರಣೆ ನೀಡುತ್ತದೆ. ರಾಜಕೀಯ ಪಕ್ಷಗಳು ಪ್ರಜೆಗಳಿಗೆ, ವಿವಿಧ ಧ್ಯೇಯ ಧೋರಣೆಗಳಲ್ಲಿ ಉಪಯುಕ್ತವಾದುದನ್ನು ಆಯ್ಕೆ ಮಾಡಿಕೊಳ್ಳುವಂತೆ ವ್ಯವಸ್ಥೆಗೊಳಿಸುತ್ತವೆ".

**೩. ಸಾರ್ವಜನಿಕ ವೇದಿಕೆಗಳು**

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಸಾರ್ವಜನಿಕ ವೇದಿಕೆಗಳು ಸಹ ಗಣನೀಯ ಪಾತ್ರವಹಿಸುತ್ತವೆ. ಸಾರ್ವಜನಿಕ ಸಭೆ, ಸಮಾರಂಭಗಳು ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಲು ನೇರವಾಗಿ ಸಹಕಾರಿಯಾಗಿವೆ. ಇಲ್ಲಿ ರಾಜಕೀಯ ಧುರೀಣರು ಮತ್ತು ಸಾರ್ವಜನಿಕರು ನೇರವಾಗಿ ಭೇಟಿಯಾಗುವುದರಿಂದ ಧುರೀಣರು ಜನತೆಯಲ್ಲಿ ತಮ್ಮ ಪರ ಪ್ರಜಾಭಿಪ್ರಾಯವನ್ನು ರೂಪಿಸಲು ಪ್ರಯತ್ನಿಸುತ್ತಾರೆ. ಈ ಸಭೆಗಳು ಸಾರ್ವಜನಿಕ ಆಸಕ್ತಿ ಕೆರಳಿಸುವುದರ ಜೊತೆಗೆ ಅವರಿಗೆ ಪ್ರಜಾಪ್ರಭುತ್ವದ ಶಿಕ್ಷಣ ನೀಡುವುದರಲ್ಲಿ ಯಶಸ್ವಿ ಯಾಗಿದೆ. ಈ ವೇದಿಕೆಗಳಿಂದಾಗಿ ಎಲ್ಲಾ ವಿಷಯಗಳು ಸಾಮಾನ್ಯ ಜನರನ್ನು ತಲುಪುವಲ್ಲಿ ಬಹಳ ಪ್ರಭಾವ ಬೀರುತ್ತವೆ.

೪. ರೇಡಿಯೋ, ದೂರದರ್ಶನ ಮತ್ತು ಸಿನಿಮಾ

ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳಲು ಪ್ರಚಾರ ಮಾಧ್ಯಮದ ಈ ಮೂರು ಅಂಶಗಳು ಅತ್ಯಂತ ಪ್ರಭಾವಶಾಲಿಯಾಗಿವೆ. ರೇಡಿಯೋ ಮತ್ತು ದೂರಗರ್ಶನ ಅಕ್ಷರಸ್ಥರಲ್ಲಿ ಅಭಿಪ್ರಾಯ ಮೂಡಿಸಿದರೆ ಸಿನಿಮಾವು ಅಕ್ಷಸ್ಥರನ್ನಲ್ಲದೆ ಅನಕ್ಷರಸ್ಥರಲ್ಲಿಯೂ ಅಭಿಪ್ರಾಯ ಮೂಡುವಂತೆ ಮಾಡುತ್ತದೆ. ಆಕಾಶವಾಣಿಯಲ್ಲಿ ಬರುವ ಸುದ್ದಿ ಪ್ರಸಾರ, ಭಾಷಣ, ಕಾರ್ಯಕ್ರಮಗಳು ಸಾಕಷ್ಟು ಜನಮನದಲ್ಲಿ ಪರಿಣಾಮ ಬೀರುತ್ತವೆ. ಮನರಂಜನೆ ದೃಷ್ಟಿಯಿಂದಲೋ ಇತರ ನಾನಾ ಕಾರಣಗಳಿಗಾಗಿ ಅನೇಕರು ರೇಡಿಯೋ ಕೇಳುತ್ತಾರೆ. ಅಂತೆಯೇ ಯಾವುದೆ ಸುದ್ದಿ, ಸಂಗತಿಗಳನ್ನು ನೇರವಾಗಿ ಏಕಕಾಲದಲ್ಲಿ ಅಧಿಕ ಸಂಖ್ಯೆಯ ಜನರಿಗೆ ಮುಟ್ಟಿಸಲು ಸಾಧ್ಯ. ಭಾರತಕ್ಕೆ ಈ ವಿದ್ಯುನ್ಮಾನ ಮಾಧ್ಯಮಗಳು ಅತ್ಯಂತ ಉಪಯುಕ್ತ ಹಾಗೂ ಸೂಕ್ತ ಮಾಧ್ಯಮಗಳಾಗಿವೆ.

೫. ವಿದ್ಯಾಸಂಸ್ಥೆಗಳು

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ವಿದ್ಯಾಸಂಸ್ಥೆಗಳು ಅತ್ಯಂತ ಮಹತ್ವದ ಪಾತ್ರವಹಿಸುತ್ತವೆ. ಶಾಲಾ, ಕಾಲೇಜು, ವಿಶ್ವವಿದ್ಯಾನಿಲಯಗಳಲ್ಲಿ ಪ್ರಗತಿಪರ ಚಿಂತನೆಗಳನ್ನು ಮಾಡುವ ಮೂಲಕ ವಿದ್ಯಾರ್ಥಿ ಸಮೂಹಗಳಲ್ಲಿ ಅಭಿಪ್ರಾಯವನ್ನು ರೂಪಿಸುವಲ್ಲಿ ವಿದ್ಯಾ ಸಂಸ್ಥೆಗಳು ಗಣನೀಯವಾಗಿ ಸಹಕರಿಸುತ್ತಿವೆ. ಆದ್ದರಿಂದ ಇಂತಹ ವಿದ್ಯಾರ್ಥಿಗಳ ಅಭಿಪ್ರಾಯವು ಅತ್ಯಂತ ಪರಿಣಾಮಕಾರಿಯಾದ ಪ್ರಭಾವ ಸರ್ಕಾರದ ಮೇಲೆ ಬೀರುತ್ತದೆ.

ಕೆಲವೊಮ್ಮೆ ವಿದ್ಯಾಸಂಸ್ಥೆಗಳ ರಾಜಕೀಯ ವ್ಯವಸ್ಥೆಯ ಬಗ್ಗೆ ನಕಾರಾತ್ಮಕವಾದ ವಿಚಾರ ಗಳನ್ನು ತಿಳಿಸಿ ಅಪಾಯಕಾರಿಯಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಬಹುದು. ಆದರೂ ವ್ಯಕ್ತಿಗಳಲ್ಲಿ ರಾಜಕೀಯ ಚಿಂತನೆ, ರಾಜಕೀಯ ಜಾಗೃತಿ, ರಾಜಕೀಯ ಅಭಿಪ್ರಾಯ ಹೊಂದಲು ಈ ವಿದ್ಯಾಸಂಸ್ಥೆಗಳು ಅತ್ಯಂತ ಸಹಕಾರಿಯಾಗಿವೆ.

೬. ಚುನಾವಣೆಗಳು

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಚುನಾವಣೆಗಳು ಸಹ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತಿವೆ. ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ಪಕ್ಷಗಳು ತಮ್ಮ ಬಗ್ಗೆ ಮತ್ತು ತಮ್ಮ ಧುರೀಣರು ಹೊಂದಿರುವ ಧ್ಯೇಯೋದ್ದೇಶಗಳ ಬಗ್ಗೆ ಕುಲಂಕಷವಾಗಿ ವಿವರಿಸಿ ಸಾರ್ವಜನಿಕ ಅಭಿಪ್ರಾಯ ತಮ್ಮೆಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತವೆ. ಇಂತಹ ಸಂದರ್ಭಗಳಲ್ಲಿ ಪ್ರಜೆಗಳು ಮತದಾನ ಮಾಡುವ ಮೂಲಕ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಚುನಾವಣಾ ಫಲಿತಾಂಶವು ರಾಜ್ಯದ ಜನತೆಯ ಇಚ್ಛೆಯನ್ನು ತಿಳಿಸುವ ಮಾಪನದಂತೆ ಹೊರಹೊಮ್ಮುತ್ತದೆ.

೭. ಧಾರ್ಮಿಕಸಂಸ್ಥೆಗಳು

ಧಾರ್ಮಿಕ ಸಂಸ್ಥೆಗಳೂ ಸಹ ಸಾರ್ವಜನಿಕ ಅಭಿಪ್ರಾಯವನ್ನು ಬೆಳೆಸುವಲ್ಲಿ ಅತ್ಯಂತ

ಸಹಕಾರಿಯಾಗಿದೆ. ಭಾರತವು ಧಾರ್ಮಿಕ ಗುಂಪುಗಳನ್ನು ಹೊಂದಿದ ಜನರಿಂದ ಕೂಡಿದ ರಾಷ್ಟ್ರವಾಗಿದೆ. ಆದ್ದರಿಂದ ರಾಜ್ಯದ ರಾಜಕೀಯದಲ್ಲಿ ಧರ್ಮದ ಪ್ರಭಾವ ಅಪಾರವಾಗಿದೆ. ಆದರೆ ರಾಜಕೀಯ ಪಕ್ಷಗಳು ಧಾರ್ಮಿಕ ಸಂಸ್ಥೆಗಳನ್ನು ತಮ್ಮ ಸ್ವಾರ್ಥ ರಾಜಕೀಯ ಪ್ರಚಾರಗಳಿಗಾಗಿ ಬಳಸಿಕೊಳ್ಳುತ್ತವೆ. ಇದರಿಂದಾಗಿ ಇಂತಹ ಧಾರ್ಮಿಕ ಸಂಸ್ಥೆಗಳು ತಮ್ಮ ಪಾವಿತ್ರ್ಯತೆಯನ್ನು ಕಳೆದುಕೊಂಡು ಕೇವಲ ಪ್ರಚಾರ ಸಂಸ್ಥೆಗಳಾಗಿಬಿಡುತ್ತವೆ. ಚುನಾವಣೆ ಸಂದರ್ಭದಲ್ಲಿ ಧಾರ್ಮಿಕ ನಾಯಕರುಗಳು ತಮ್ಮ ಧರ್ಮದ ಕುಲಬಾಂಧವರು ಯಾವುದೇ ಒಂದು ಪಕ್ಷಕ್ಕೆ ಬೆಂಬಲಿಸುವಂತೆ ಪ್ರಭಾವ ಬೀರುತ್ತಾರೆ.

### ೮. ಅಭಿಪ್ರಾಯ ಧುರೀಣರು

ರಾಜ್ಯದಲ್ಲಿನ ಶಾಸಕಾಂಗ ಸದಸ್ಯರು, ಪತ್ರಿಕಾ ಪ್ರತಿನಿಧಿಗಳು, ಸಮಾಜ ಸೇವಕರು, ಬುದ್ಧಿಜೀವಿಗಳು, ವಿದ್ಯಾವಂತರು ಇವರನ್ನು ಅಭಿಪ್ರಾಯ ಧುರೀಣರು ಎನ್ನಲಾಗುತ್ತದೆ. ಈ ವರ್ಗವು ಸಮಾಜದಲ್ಲಿ ಉತ್ತಮವಾದ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸಲು ಸಹಕಾರಿಯಾಗುತ್ತದೆ. ಸಾರ್ವಜನಿಕ ರೀತಿ ನೀತಿಗಳ ಬಗ್ಗೆ ಇವರು ಅದರ ಲೋಪದೋಷಗಳನ್ನು ಹಾಗೂ ಗುಣಗಳನ್ನು ಗುರುತಿಸಿ ಪತ್ರಿಕೆಗಳ ಮೂಲಕ ಅದರ ಬಗ್ಗೆ ಪ್ರಚಾರ ನೀಡುತ್ತಾರೆ ಮತ್ತು ಅದರಿಂದ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವಂತೆ ಮಾಡುತ್ತಾರೆ. ಭಾರತದಲ್ಲಿ ಬಹುಸಂಖ್ಯಾತರು ಅನಕ್ಷರಸ್ಥರು ಹಾಗೂ ರಾಜಕೀಯ ಅನಾಸಕ್ತಿವುಳ್ಳವರು ಆಗಿರುವುದರಿಂದ ಈ ವರ್ಗದ ಅಭಿಪ್ರಾಯವನ್ನು ಎಲ್ಲರು ಸ್ವೀಕರಿಸುತ್ತಾರೆ.

ಬ್ರೈಸ್ ಹೇಳಿರುವಂತೆ "ಈ ವರ್ಗವು ಅಭಿಪ್ರಾಯವನ್ನು ಉತ್ತಮ ಚಿಂತಕರಂತೆಯಾಗಲೀ ವಿಮರ್ಶಕರಂತಾಗಲೀ ಮಂಡಿಸದೆ ಅದನ್ನು ಕೇವಲ ಗಾತ್ರದಲ್ಲಿ ದೊಡ್ಡದಾಗಿಸುತ್ತಾರೆ." ಆದರೂ ಕೆಲವರಿಂದ ಹೊರ ಹೊಮ್ಮಿದ ಅಭಿಪ್ರಾಯವು ಹಲವರನ್ನು ಆಕರ್ಷಿಸಿ ಅದು ಸಾರ್ವಜನಿಕ ಅಭಿಪ್ರಾಯವಾಗುವಂತೆ ಮಾಡುತ್ತದೆ.

### ೯. ರಾಜಕೀಯ ಸಾಹಿತ್ಯ

ಸಾಹಿತಿಗಳು, ಪತ್ರಿಕೆಗಳ ಪ್ರಕಾಶಕರು ಮತ್ತಿತರ ಬುದ್ಧಿ ಜೀವಿಗಳು ಪ್ರತಿದಿನವೂ ಹಲವಾರು ರೀತಿಯ ರಾಜಕೀಯ ಸಾಹಿತ್ಯವನ್ನು ಪ್ರಕಟಿಸುತ್ತಾರೆ. ಪ್ರಜೆಗಳು ಇಂತಹ ಸಾಹಿತ್ಯವನ್ನು ಓದಿ ರಾಜಕೀಯ ವ್ಯವಸ್ಥೆಯ ಬಗ್ಗೆ ತಮ್ಮದೇ ಆದ ಸ್ವ-ನಿಲುವುಗಳನ್ನು ಹೊಂದುತ್ತಾರೆ ಮತ್ತು ಅದಕ್ಕೆ ತಕ್ಕಂತೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಶ್ರೀ ಸಾಮಾನ್ಯ ವರ್ಗದ ಜನರು ರಾಜಕೀಯ ವ್ಯವಸ್ಥೆಯ ಬಗ್ಗೆ ಸ್ವಂತ ವಿಚಾರ ಮತ್ತು ಅಭಿಪ್ರಾಯಗಳನ್ನು ಹೊಂದಿರುವುದಿಲ್ಲ. ಇಂತಹ ಸಾಹಿತ್ಯಗಳಿಂದಾಗಿ ತಮ್ಮ ಅಭಿಪ್ರಾಯವನ್ನು ರೂಪಿಸಿಕೊಳ್ಳುತ್ತಾರೆ.

ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಈ ಮೇಲೆ ಹೇಳಲಾಗಿರುವ ವಿವಿಧ ಸಂಸ್ಥೆಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸುತ್ತವೆ. ಸಾರ್ವಜನಿಕ ಅಭಿಪ್ರಾಯ

ರೂಪುಗೊಳ್ಳುವ ಮೊದಲು ಜನರಲ್ಲಿ ರಾಜಕೀಯ ಜಾಗೃತಿ, ರಾಜಕೀಯ ಜ್ಞಾನ ಬೆಳೆಯಬೇಕು. ಅಂತಹ ಜ್ಞಾನವನ್ನು ಬೆಳೆಸುವಲ್ಲಿ ಈ ಸಂಸ್ಥೆಗಳು ತಮ್ಮದೇ ಆದ ಪಾತ್ರವಹಿಸುತ್ತವೆ.

**೬.೩ ಒತ್ತಡ ಗುಂಪುಗಳು : ಅರ್ಥ, ಸ್ವರೂಪ ಮತ್ತು ಪಾತ್ರ**

ಒತ್ತಡ ಗುಂಪನ್ನು "ಹಿತಾಸಕ್ತಿಯೊಂದನ್ನು ರಕ್ಷಿಸಿ ಬೆಳೆಸುವುದಕ್ಕಾಗಿ ಜೊತೆಗೂಡುವ ವ್ಯಕ್ತಿಗಳ ಸ್ವಯಂ ಪ್ರೇರಿತ ಸಂಘ" ಎಂದು ವ್ಯಾಖ್ಯಾನಿಸಬಹುದು. ಹಿತಾಸಕ್ತಿಯ ಗುಂಪನ್ನು ಒತ್ತಡ ಗುಂಪು, ಸಂಘಟಿತ ಗುಂಪು, ಲಾಬಿ ಮತ್ತು ರಾಜಕೀಯ ಗುಂಪುಗಳೆಂದೂ ಕರೆಯಲಾಗಿದೆ. ಎಚ್ ಝೀಗ್ಲರ್ ಪ್ರಕಾರ "ತನ್ನ ಸದಸ್ಯರನ್ನು ಔಪಚಾರಿಕವಾಗಿ ಸರ್ಕಾರಿ ಹುದ್ದೆಯಲ್ಲಿಡಲು ಪ್ರಯತ್ನಿಸದೆ, ಸರ್ಕಾರದ ತೀರ್ಮಾನಗಳ ಮೇಲೆ ಪ್ರಭಾವ ಬೀರಲು ಪ್ರಯತ್ನಿಸುವ ಸಂಘಟಿತ ಗುಂಪೆ ಹಿತಾಸಕ್ತಿ/ಒತ್ತಡ ಗುಂಪು" ಇವು ಮೂರು ರೀತಿಯ ಲಕ್ಷಣಗಳನ್ನು ಒಳಗೊಂಡಿರುತ್ತದೆ.

೧. ಒತ್ತಡ ಗುಂಪುಗಳು ರಾಷ್ಟ್ರದ ರಾಜಕೀಯ ಪ್ರಭಾವದ ಭಾಗವಾಗಿವೆ.
೨. ಅವು ಸರ್ಕಾರದ ನೀತಿಯನ್ನು ಬಲಯುತಗೊಳಿಸಲು ಅಥವಾ ಬದಲಾಯಿಸಲು ಸರ್ಕಾರದ ಮೇಲೆ ಒತ್ತಡ ತರುತ್ತವೆ.
೩. ಅವು ನೇರವಾಗಿ ರಾಜಕೀಯ ಅಧಿಕಾರವನ್ನು ಕೈವಶಪಡಿಸಿಕೊಂಡು ಸರ್ಕಾರ ನಡೆಸಲು ಪ್ರಯತ್ನಿಸುವುದಿಲ್ಲ.

ಭಾರತದಲ್ಲಿಯೂ ಸಹ ಇಂತಹ ಒತ್ತಡ ಗುಂಪುಗಳು ಸರ್ವೇಸಾಮಾನ್ಯವಾಗಿವೆ. ಏಕೆಂದರೆ ಭಾರತ ವಿವಿಧತೆಯಲ್ಲಿ ಏಕತೆ ಹೊಂದಿದ್ದು, ಈ ವಿವಿಧತೆ ಎಂದರೆ ಅನೇಕ ಭಾಷೆಗಳು, ಪ್ರಾಂತ್ಯಗಳು, ಧರ್ಮಗಳು, ಜಾತಿಗಳು, ಪಂಗಡಗಳು, ವರ್ಗಗಳು ಇವೇ ಮೊದಲಾದವುಗಳು ಸೇರಿರುವುದು. ಇವುಗಳೆಲ್ಲವು ಒಂದಲ್ಲ ಒಂದು ವಿಧದಲ್ಲಿ ಸಂಘಟಿತರಾಗಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಸರ್ಕಾರದ ಮೇಲೆ ವಿವಿಧ ರೀತಿಯಲ್ಲಿ ಪ್ರಭಾವ ಬೀರುತ್ತವೆ. ಇವುಗಳಲ್ಲಿ ಪ್ರಭಾವಶಾಲಿಗಳಾಗಿರುವಂತಹ ಗುಂಪುಗಳು ಸರ್ಕಾರದ ಭವಿಷ್ಯ ವನ್ನೇ ನಿರ್ಧರಿಸುವಂತಾಗಬಹುದು. ಅಲ್ಲದೆ ಚುನಾವಣೆ ಸಂದರ್ಭದಲ್ಲಿ ಇವುಗಳು ಒಂದು ಪಕ್ಷದ ಅಳಿವು ಉಳಿವನ್ನು ನಿರ್ಧರಿಸುವಂತೆ ಕಾರ್ಯಕ್ರಮಗಳನ್ನು ಸಹ ಮಾಡಬಹುದು, ಇಂತಹ ಗುಂಪುಗಳು ಯಾವುದೇ ಸರ್ಕಾರ ಆಡಳಿತಕ್ಕೆ ಬಂದರೂ ಕೂಡ ತಮ್ಮ ಪ್ರಭಾವ ಬೀರುತ್ತವೆ.

**ಲಕ್ಷಣಗಳು**

ಭಾರತದಲ್ಲಿರುವಂತಹ ಒತ್ತಡ ಗುಂಪುಗಳು ತಮ್ಮದೇ ಆದಂತಹ ಕೆಲವು ಲಕ್ಷಣಗಳನ್ನು ಹೊಂದಿವೆ. ಆ ಲಕ್ಷಣಗಳನ್ನು ಅವುಗಳ ರಚನೆ, ಕಾರ್ಯವೈಖರಿ ಮೊದಲಾದ ಅಂಶಗಳನ್ನು ಆಧರಿಸಿಕೊಂಡು ವಿವರಿಸಬಹುದು.

೧. ಭಾರತದಲ್ಲಿನ ಒತ್ತಡ ಗುಂಪುಗಳು ಶಾಶ್ವತ ರಚನೆಯನ್ನು ಹೊಂದಿಲ್ಲ. ಅಂದರೆ ಕೆಲವು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ರಚಿತಗೊಂಡು ಈ ಉದ್ದೇಶಿತ ಗುರಿ ಸಾಧಿಸಿದ

ನಂತರ ಅವು ವಿಸರ್ಜನೆಗೊಳ್ಳಬಹುದು. ಈ ರೀತಿಯ ಶಾಶ್ವತ ನೆಲೆಗಟ್ಟಿಲ್ಲದ ಒತ್ತಡ ಗುಂಪುಗಳ ರಚನೆಯ ವಿವರಣೆ ನೀಡುವುದು ಕಷ್ಟಸಾಧ್ಯವಾದುದು.

೨. ಭಾರತದಲ್ಲಿ ಒತ್ತಡ ಗುಂಪುಗಳನ್ನು ಎಲ್ಲಾ ಕ್ಷೇತ್ರದಲ್ಲಿಯೂ ಗುರುತಿಸಬಹುದು. ಅಂದರೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳೆಲ್ಲದರಲ್ಲೂ ಇವುಗಳ ಪ್ರಭಾವವಿದೆ.

೩. ಭಾರತದಲ್ಲಿನ ಒತ್ತಡ ಗುಂಪುಗಳಿಗೆ ಉದ್ದೇಶ ಸಾಧನೆ ಮುಖ್ಯವೇ ವಿನಃ ನಿಷ್ಠೆ ಮುಖ್ಯವಲ್ಲ. ಇದರಿಂದಾಗಿಯೇ ಯಾವ ಪಕ್ಷದ ಸರ್ಕಾರ ಅಧಿಕಾರಕ್ಕೆ ಬಂದರೂ ಅವುಗಳೊಡನೆ ಸಂಪರ್ಕ ಬೆಳೆಸಿ ತಮ್ಮ ಉದ್ದೇಶ ಸಾಧಿಸಲು ಯತ್ನಿಸುತ್ತವೆ.

೪. ಕೆಲವು ಒತ್ತಡ ಗುಂಪುಗಳು ರಾಜಕೀಯ ಪಕ್ಷಗಳಾಗಿಯೂ ತಮ್ಮನ್ನು ಪ್ರತಿನಿಧಿಸಿಕೊಂಡಿವೆ. ಉದಾಹರಣೆಗೆ ಕರ್ನಾಟಕ ರಾಜ್ಯ ರೈತ ಸಂಘ.

೫. ಒತ್ತಡ ಗುಂಪುಗಳು ಸಾಮಾನ್ಯವಾಗಿ ಯಾವುದೇ ಸೈದ್ಧಾಂತಿಕ ನೆಲೆಗಟ್ಟನ್ನು ಹೊಂದಿರುವುದಿಲ್ಲ. ಇದರಿಂದಾಗಿ ಯಾವುದೇ ರಾಜಕೀಯ ಸಿದ್ಧಾಂತಕ್ಕೂ ಮಾನ್ಯ ಮಾಡದೆ ತಮ್ಮ ಉದ್ದೇಶ ಸಾಧನೆಗಾಗಿ ಕೆಲವು ಸಂದರ್ಭಗಳಲ್ಲಿ, ಪ್ರತಿಭಟನೆ, ಬೆದರಿಕೆ ಮೊದಲಾದ ಮಾರ್ಗಗಳನ್ನು ಅನುಸರಿಸುತ್ತವೆ.

೬. ಒತ್ತಡ ಗುಂಪುಗಳು ತಮ್ಮ ಉದ್ದೇಶ ಸಾಧನೆಗಾಗಿ ವಿವಿಧ ರೀತಿಯ ಮಾರ್ಗಗಳನ್ನು ಅನುಸರಿಸಬಹುದು. ಕೆಲವು ಸಂದರ್ಭದಲ್ಲಿ ಪ್ರಾದೇಶಿಕ ಭಾವನೆಯ ಮೂಲಕ ಜಾತಿ ಧರ್ಮಗಳನ್ನು ಆಧಾರವಾಗಿ ಹೊಂದುವುದು, ಸಾಂಪ್ರದಾಯಿಕ ಅಂಶಗಳಿಗೆ ಒತ್ತು ನೀಡುವುದು ಇವೇ ಮೊದಲಾದ ಮಾರ್ಗಗಳ ಮೂಲಕ ಕೆಲವು ಒತ್ತಡ ಗುಂಪುಗಳು ತಮ್ಮ ಹಿತಾಸಕ್ತಿ ಪೂರೈಸಿಕೊಳ್ಳಲು ಪ್ರಯತ್ನಿಸಬಹುದು. ಇದರಿಂದ ಕೆಲವು ಸಂದರ್ಭಗಳಲ್ಲಿ, ಪ್ರಾದೇಶಿಕತೆಗೆ, ಜಾತಿ-ಧರ್ಮಗಳ ದ್ವೇಷಕ್ಕೆ ಪ್ರಚೋದನೆ ನೀಡಿದಂತಾಗುತ್ತದೆ. ಇಂತಹ ಮಾರ್ಗಗಳು ರಾಷ್ಟ್ರದ ಅಭದ್ರತೆಗೆ ಅವಕಾಶ ಕಲ್ಪಿಸುತ್ತವೆ.

೭. ಭಾರತೀಯ ಒತ್ತಡ ಗುಂಪುಗಳಲ್ಲಿ ಗುಂಪುಗಾರಿಕೆ ಸರ್ವೇಸಾಮಾನ್ಯವಾಗಿದೆ. ಅಸ್ತಿತ್ವದಲ್ಲಿರುವ ಒತ್ತಡ ಗುಂಪುಗಳಲ್ಲಿಯೇ ಗುಂಪುಗಾರಿಕೆಯಿಂದಾಗಿ ವಿಭಾಗವಾಗಿ ಅವು ಸ್ವತಂತ್ರವಾಗಿ ಹೋರಾಟ ನಡೆಸಲು ಅಶಕ್ತವಾಗುತ್ತವೆ. ಅದ್ದರಿಂದ ಸರ್ಕಾರ ಇವುಗಳನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಗುತ್ತದೆ.

೮. ನಮ್ಮ ದೇಶದ ಒತ್ತಡ ಗುಂಪುಗಳಲ್ಲಿ ಏಕತೆಯನ್ನು ಕಾಣಲು ಸಾಧ್ಯವಿಲ್ಲ. ಎಲ್ಲಾ ಒತ್ತಡ ಗುಂಪುಗಳು ತಮ್ಮ ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ರಚಿತಗೊಂಡಿದ್ದರೂ ಸಹ ಇವುಗಳ ನಡುವೆ ಕಾರ್ಯಕ್ರಮದಲ್ಲಾಗಲಿ, ರಚನೆಯಲ್ಲಾಗಲಿ ಏಕತೆಯನ್ನು ಕಾಣಲು ಸಾಧ್ಯವಿಲ್ಲ.

೯. ಭಾರತದಲ್ಲಿ ಒತ್ತಡ ಗುಂಪುಗಳು ಕಾಲಕ್ರಮೇಣ ದುರ್ಬಲವಾಗುತ್ತಿವೆ. ಸಾರ್ವಜನಿಕ ಅಭಿಪ್ರಾಯವನ್ನು ಕ್ರಿಯಾಶೀಲಗೊಳಿಸುವಲ್ಲಿಯೂ ಸಹ ವಿಫಲವಾಗುತ್ತಿವೆ.

### ಕಾರ್ಯಗಳು

ಭಾರತದಲ್ಲಿರುವಂತೆ ಒತ್ತಡ ಗುಂಪುಗಳ ಪಾತ್ರವನ್ನು ಆಧರಿಸಿಕೊಂಡು ಅವುಗಳ ಕಾರ್ಯಗಳನ್ನು ನಿಗದಿಗೊಳಿಸಬಹುದು. ಅವುಗಳೆಂದರೆ:

#### ೧. ಹಿತಾಸಕ್ತಿಗಳ ದೃಢೀಕರಣ

ಒತ್ತಡ ಗುಂಪುಗಳು ರಚಿತಗೊಳ್ಳುವುದೇ ಹಿತಾಸಕ್ತಿಗಳನ್ನು ಆಧರಿಸಿಕೊಂಡು. ಒಂದು ಒತ್ತಡ ಗುಂಪು ರಚಿತವಾಗುವುದಕ್ಕೆ ಇರುವ ಮುಖ್ಯ ಕಾರಣವೆಂದರೆ ಯಾವುದಾದರೂ ವರ್ಗ ಅಥವಾ ಗುಂಪು ತಮಗೆ ದೊರಕಬೇಕಾದಂತಹ ಹಿತಾಸಕ್ತಿಗಳಿಂದ ವಂಚಿತವಾದಾಗ ಆ ಹಿತಾಸಕ್ತಿಗಳನ್ನು ಪಡೆಯುವುದಕ್ಕಾಗಿ ಹಾಗೂ ತಮಗಿರುವ ಹಿತಾಸಕ್ತಿಗಳನ್ನು ರಕ್ಷಿಸಿ ಕೊಳ್ಳುವುದಕ್ಕಾಗಿ ಎಂಬುದಾಗಿ ಪರಿಗಣಿಸಬಹುದು. ಇಂತಹ ಗುಂಪುಗಳ ರಚನೆಗೆ ಮತ್ತೊಂದು ಮುಖ್ಯ ಕಾರಣ ವ್ಯಕ್ತಿಗತವಾಗಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಎಲ್ಲರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಗುಂಪಿನಿಂದ ಸಾಮೂಹಿಕವಾಗಿ ಯತ್ನಿಸಿದಾಗ ಸಾಧ್ಯವಾಗುತ್ತದೆ. ಇದರಿಂದಾಗಿ ಸರ್ಕಾರದ ಮೇಲೆ ಪ್ರಭಾವ ಬೀರಲು ಅವಕಾಶವಾಗುತ್ತದೆ. ಈ ಕಾರಣದಿಂದಲೇ ಇಂತಹ ಗುಂಪುಗಳು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿವೆ. ಅದರಲ್ಲಿಯೂ ಪ್ರಜಾಪ್ರಭುತ್ವವಾದ ರಾಷ್ಟ್ರಗಳಲ್ಲಿ ಹೆಚ್ಚು ಇದೆ.

#### ೨. ಉದ್ದೇಶ ಸಾಧನೆಗಾಗಿ ಪ್ರಭಾವ ಬೀರುವುದು

ಒತ್ತಡ ಗುಂಪುಗಳು ರಚಿತವಾಗುವುದೇ ತಮ್ಮ ಉದ್ದೇಶ ಸಾಧನೆಗಾಗಿ. ಈ ಗುಂಪುಗಳು ತಮ್ಮ ಪ್ರಭಾವವನ್ನು ಬೀರಿ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಪ್ರಯತ್ನಿಸುತ್ತವೆ. ಒತ್ತಡ ಗುಂಪುಗಳು ತಮ್ಮ ಹಿತಾಸಕ್ತಿ ಸಾಧನೆಗಾಗಿ ವಿವಿಧ ರೀತಿಯಲ್ಲಿ ಪ್ರಭಾವ ಬೀರುವುದು ಸರ್ವೇಸಾಮಾನ್ಯವಾಗಿದೆ. ಇವು ಪ್ರಮುಖವಾಗಿ ಒತ್ತಡ ತಂದು ಪ್ರಭಾವ ಬೀರಬೇಕಾಗಿರು ವುದು ಸರ್ಕಾರದ ಮೇಲೆ. ಇದಕ್ಕಾಗಿ ವಿವಿಧ ವಿಧಾನಗಳನ್ನು ಅನುಸರಿಸುತ್ತವೆ. ಅವುಗಳಲ್ಲಿ ಮುಖ್ಯವಾದುದೆಂದರೆ ಲಾಬಿ ಮಾಡುವುದು. ಇದಕ್ಕಾಗಿ ರಾಜಕೀಯ ಧುರೀಣರನ್ನು ಭೇಟಿ ಮಾಡಿ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸುವುದು. ಇದಲ್ಲದೆ ರಾಜಕಾರಣಿಗಳಿಗೆ ಹಾಗೂ ಪಕ್ಷಕ್ಕೆ ಚುನಾವಣೆಗಳಿಗೆ ಯಥೇಚ್ಛವಾಗಿ ಹಣವನ್ನು ನೀಡಿ ಪ್ರಭಾವ ಬೀರಬಹುದು.

#### ೩. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುತ್ತವೆ

ಒತ್ತಡ ಗುಂಪುಗಳು ಸರ್ಕಾರದ ಮೇಲೆ ಪ್ರಭಾವ ಬೀರುವ ಜೊತೆಗೆ ತಮ್ಮ ಪರವಾದ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವಂತೆಯೂ ನೋಡಿಕೊಳ್ಳುತ್ತವೆ. ಇದಕ್ಕಾಗಿ ಪತ್ರಿಕೆ ಗಳನ್ನು, ಕರಪತ್ರಗಳನ್ನು ಹಂಚುತ್ತವೆ, ಭಿತ್ತಿಪತ್ರಗಳನ್ನು ಅಂಟಿಸುತ್ತವೆ. ಸಂಪಾದಕರಿಗೆ ಪತ್ರ ಬರೆಯುತ್ತವೆ, ರೇಡಿಯೋ, ದೂರದರ್ಶನಗಳ ಮೂಲಕ ಪ್ರಚಾರ ನೀಡುತ್ತವೆ.

#### ೪. ವಿದ್ಯಾರ್ಥಿಗಳಿಗೆ ಸಾಹಿತ್ಯವನ್ನು ಒದಗಿಸುತ್ತವೆ

ಮುಂದಿನ ನಾಗರೀಕರಾಗುವ ಯುವಕರ ಅಭಿಪ್ರಾಯವನ್ನು ರೂಢಿಸಲು ಹಲವಾರು

ಗುಂಪುಗಳು ಪ್ರಯತ್ನಿಸುತ್ತವೆ. ಯುವಜನತೆಗೆ ಹಲವು ರೀತಿಯ ಸಾಹಿತ್ಯ ಒದಗಿಸಿ ತಮ್ಮ ಹಿತಾಸಕ್ತಿಗಳ ಪರವಾಗಿ ಅವರು ಅಭಿಪ್ರಾಯ ತಾಳುವಂತೆ ಪ್ರೇರೇಪಿಸುತ್ತವೆ.

**೫. ನ್ಯಾಯಾಲಯದ ಮೊರೆ ಹೋಗುವಿಕೆ**

ಹಿತಾಸಕ್ತಿ ಗುಂಪುಗಳು, ಸರ್ಕಾರವು ಕೆಲವೊಂದು ಸಂವಿಧಾನ ಬಾಹಿರ ಅಥವಾ ಶಾಸನ ಬದ್ಧವಲ್ಲದ ವಿಧಾನಗಳನ್ನು ಅನುಸರಿಸಿ ಇವುಗಳ ಹಿತಾಸಕ್ತಿಯನ್ನು ಕಡೆಗಣಿಸಿದಲ್ಲಿ ಇಲ್ಲವೇ ಅವಕ್ಕೆ ಮಾರಕವೆನಿಸಿದಲ್ಲಿ ತಮ್ಮ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳಲು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಬಹುದಾಗಿದೆ.

**ಒತ್ತಡ ಗುಂಪುಗಳ ಪಾತ್ರ**

ಒತ್ತಡ ಗುಂಪುಗಳು ವ್ಯಕ್ತಿಯ ಮತ್ತು ಸರ್ಕಾರದ ನಡುವಿನ ಕಂದಕವನ್ನು ಒಂದು ಗೂಡಿಸುತ್ತವೆ. ನಾಗರೀಕ ಮತದಾರನು ಹಿತಾಸಕ್ತಿ ಗುಂಪುಗಳ ಮೂಲಕ ಸರ್ಕಾರದ ಮೇಲೆ ಪ್ರಭಾವ ಬೀರಬಹುದು. ಒತ್ತಡ ಗುಂಪಿನ ಅನಧಿಕೃತ ಮಾರ್ಗದ ಮೂಲಕವೇ ಚುನಾಯಿತ ಪ್ರತಿನಿಧಿ ಪ್ರಜಾಸತ್ತೆಯ ಮತ್ತು ವಿದೇಶ ನೀತಿಯ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಪರಿಹರಿಸಬಲ್ಲ, ನೀತಿ ನಿರೂಪಿಸುವುದರಲ್ಲಿ ಭಾಗವಹಿಸುವ ಅವಕಾಶಗಳನ್ನು ಪ್ರಜೆಗಳಿಗೆ ಒದಗಿಸುವನು.

ಹಿತಾಸಕ್ತಿ ಗುಂಪಿನ ಮುಖ್ಯ ಉದ್ದೇಶ ನಿರ್ದಿಷ್ಟ ಗುಂಪುಗಳ ಹಿತಾಸಕ್ತಿಯನ್ನು ವ್ಯಕ್ತಗೊಳಿಸಿ ತಮ್ಮ ಬೇಡಿಕೆಗಳನ್ನು ಸರ್ಕಾರಕ್ಕೆ ತಿಳಿಸಿ ಅವುಗಳ ಈಡೇರಿಕೆಗಳಿಗಾಗಿ ಸರ್ಕಾರದ ಮೇಲೆ ಒತ್ತಡ ತರುವುದೇ ಆಗಿದೆ. ನೀತಿ ನಿರೂಪಣೆಯಲ್ಲಿ ಒತ್ತಡ ಗುಂಪುಗಳು ಕೆಲವು ಅಂಶಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿಯನ್ನು ಒದಗಿಸುತ್ತವೆ. ಅವು ಸರ್ಕಾರಿ ಇಲಾಖೆಗಳಿಗೆ ಆಗಾಗ್ಗೆ ಅನಿವಾರ್ಯವಾದ ಆಡಳಿತಾತ್ಮಕ ಸೇವೆಗಳನ್ನು ನೆರವೇರಿಸುತ್ತವೆ. ಸರ್ಕಾರ ನೀತಿಗೆ ಪರ್ಯಾಯ ಕ್ರಮಗಳನ್ನು ಸೂಚಿಸಿ ಕಾರ್ಯಾಂಗದ ಮೇಲೆ ತಡೆಗಳು ಮತ್ತುಸಮತೋಲನಗಳಾಗಿ ವರ್ತಿಸುತ್ತವೆ. ಲಾಭ ಮಾಡುವಿಕೆಯು ಒತ್ತಡ ಗುಂಪಿನ ಅತ್ಯಂತ ಸಾಮಾನ್ಯ ತಂತ್ರವಾಗಿದ್ದು ಸಾರ್ವಜನಿಕ ಉದ್ಯೋಗಿಗಳನ್ನು ಸಂಪರ್ಕಿಸಲು ಯಾಚಿಸುವ ವಿಧಾನವಾಗಿದೆ.

ಅಮೇರಿಕಾದಲ್ಲಿ ಒತ್ತಡಗುಂಪುಗಳು ಇತರ ದೇಶಗಳಲ್ಲಿನ ಒತ್ತಡ ಗುಂಪುಗಳಿಗಿಂತಲೂ ಹೆಚ್ಚು ಪ್ರಾಮುಖ್ಯತೆಗಳಿಸಿವೆ. ಅಮೇರಿಕಾದಲ್ಲಿ ಕೆಲವು ಒತ್ತಡಗುಂಪುಗಳು ರಾಜಕೀಯ ಪಕ್ಷಗಳಿಗಿಂತಲೂ ಹೆಚ್ಚು ಶಕ್ತಿಯುತವಾಗಿವೆ. ಆ ದೇಶದ ವೈಶಾಲ್ಯ, ಅಧಿಕಾರ ಪ್ರತ್ಯೇಕತಾ ಸಿದ್ಧಾಂತ, ಪಕ್ಷದಲ್ಲಿ ಕಠಿಣ ಶಿಸ್ತು ಇಲ್ಲದಿರುವುದು ಮತ್ತು ರಾಜಕೀಯದ ಬಗ್ಗೆ ಸಾಮಾನ್ಯ ಜನರ ನಿರ್ಲಕ್ಷ್ಯದಿಂದಾಗಿ ಅಮೇರಿಕಾದಲ್ಲಿ ಒತ್ತಡಗುಂಪುಗಳಿಗೆ ಪ್ರಾಮುಖ್ಯತೆ ಇದೆ. ಅಮೇರಿಕಾದಲ್ಲಿ ಮೂರು ಅತಿ ದೊಡ್ಡ ಹಿತಾಸಕ್ತಿ ಗುಂಪುಗಳೆಂದರೆ ಕೃಷಿ, ಕಾರ್ಮಿಕ ಮತ್ತು ವ್ಯಾಪಾರಿ ಒತ್ತಡ ಗುಂಪುಗಳು.

ಆದರೆ ಭಾರತದ ಒತ್ತಡ ಗುಂಪುಗಳು ಇದಕ್ಕೆ ಭಿನ್ನವಾಗಿವೆ. ಭಾರತದ ಒತ್ತಡ ಗುಂಪುಗಳ ಕಾರ್ಯನಿರ್ವಹಣೆಯಲ್ಲಿ ವೈಚಾರಿಕ ಅಂಶಗಳಿಗಿಂತ, ಧರ್ಮ, ಜಾತಿ ಅಥವಾ ಪ್ರಾದೇಶಿಕ

ಅಂಶಗಳು ಹೆಚ್ಚು ಪ್ರಮುಖ ಪಾತ್ರವಹಿಸುತ್ತವೆ. ಇವುಗಳಿಗೆ ವೈಚಾರಿಕ ಬದ್ಧತೆ ಇಲ್ಲದಿರುವುದರಿಂದ ಸ್ವಚ್ಛಂದ ಸಂಸ್ಥೆಗಳಂತೆ ವರ್ತಿಸುತ್ತವೆ. ಲಾಬಿ ಜೊತೆಗೆ ಇವು ಮುಷ್ಕರ, ಬಂದ್‌ಗಳು, ಘೆರಾವ್, ಪ್ರದರ್ಶನಗಳು ಮುಂತಾದ ಚಟುವಟಿಕೆಗಳಲ್ಲಿ ಹೆಚ್ಚು ತೊಡಗುತ್ತವೆ. ಹಿಂಸೆಗೆ ಪ್ರಮುಖ ಸ್ಥಾನ ನೀಡುತ್ತವೆ.

ಒಟ್ಟಿನಲ್ಲಿ ಒತ್ತಡ ಗುಂಪುಗಳು ರಾಜಕೀಯ ಪಕ್ಷಗಳಿಗಿಂತ ಭಿನ್ನವಾಗಿರುತ್ತವೆ. ಇದರಲ್ಲಿನ ಸದಸ್ಯರಿಗೆ ರಾಜ್ಯಾಧಿಕಾರ ಹೊಂದುವ ಬಯಕೆಯಿರುವುದಿಲ್ಲ. ತಮ್ಮದೇ ಆದ ರಾಜಕೀಯ ಕಾರ್ಯಕ್ರಮಗಳೂ ಇರುವುದಿಲ್ಲ.

### ೬.೪ ಒತ್ತಡ ಗುಂಪುಗಳ ವಿಧಗಳು

ಭಾರತದ ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಅನೇಕ ವಿಧದ ನೂರಾರು ಒತ್ತಡ ಗುಂಪುಗಳಿದ್ದು ಈ ಒತ್ತಡ ಗುಂಪುಗಳನ್ನು ಕಾರ್ಯಕ್ಷೇತ್ರ ಹಾಗೂ ಹಿತಾಸಕ್ತಿಗಳನ್ನು ಆಧರಿಸಿಕೊಂಡು ಹಲವು ಗುಂಪುಗಳಾಗಿ ವಿಂಗಡಿಸಬಹುದಾಗಿದೆ. ಅವುಗಳೆಂದರೆ

೧. ರೈತ ಸಂಘಟನೆಗಳು.
೨. ಕಾರ್ಮಿಕ ಸಂಘಟನೆಗಳು.
೩. ವ್ಯಾಪಾರಸ್ಥರ ಸಂಘಟನೆಗಳು.
೪. ವಿದ್ಯಾರ್ಥಿ ಸಂಘಟನೆಗಳು.
೫. ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘಟನೆಗಳು.
೬. ಜಾತಿ ಆಧಾರಿತ ಸಂಘಟನೆಗಳು.
೭. ಭಾಷಾ ಸಂಘಟನೆಗಳು.
೮. ಬುಡಕಟ್ಟು ಜನಾಂಗದ ಸಂಘಟನೆಗಳು.

ಇವುಗಳನ್ನು ಭಾರತದಲ್ಲಿರುವಂತಹ ಮುಖ್ಯವಾದ ಒತ್ತಡ ಗುಂಪುಗಳೆಂದು ಪರಿಗಣಿಸಲಾಗಿದೆ. ಇವುಗಳಲ್ಲಿ ಒಂದೊಂದರಲ್ಲಿಯೂ ಇನ್ನೂ ಅನೇಕ ಉಪ ಸಂಘಟನೆಗಳಿದ್ದು ಅವುಗಳಲ್ಲಿ ಮುಖ್ಯವಾದವುಗಳನ್ನು ಈ ಕೆಳಕಂಡಂತೆ ವಿಂಗಡಿಸಬಹುದು.

### ೧. ರೈತ ಸಂಘಟನೆಗಳು

ರೈತರ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರದ ಮೇಲೆ ಪ್ರಭಾವ ಬೀರುವ ಒತ್ತಡಗುಂಪುಗಳೇ ರೈತ ಸಂಘಟನೆಗಳು. ಇವುಗಳಲ್ಲಿ ಹಲವಾರು ಸಂಘಟನೆಗಳಿವೆ. ಅವುಗಳೆಂದರೆ:

೧. ಭಾರತೀಯ ಕಿಸಾನ್ ಯೂನಿಯನ್, ಮಹೇಂದ್ರಸಿಂಗ್ ಟಿಕಾಯಿತ್‌ರವರಿಂದ ರಚನೆ.
೨. ಭಾರತೀಯ ಕೃಷಿಕ್ ಸಮಾಜ್.
೩. ಸೇತ್ಕಾರಿ ಸಂಘಟನೆ - ಮಹಾರಾಷ್ಟ್ರ.
೪. ಅಖಿಲ ಭಾರತ ಕಿಸಾನ್ ಸಭಾ.
೫. ಅಖಿಲ ಭಾರತ ಕಿಸಾನ್ ಸಮ್ಮೇಳನ.
೬. ಯುನೈಟೆಡ್ ಕಿಸಾನ್ ಸಭಾ.

೭. ಹಿಂದ್ ಕಿಸಾನ್ ಸಭಾ.

೮. ಕ್ರಾಂತಿಕಾರಿ ಕೃಷಿಕರ ಸಭಾ.

೯. ಕರ್ನಾಟಕ ರಾಜ್ಯ ರೈತ ಸಂಘ - ಎಂ.ಡಿ. ನಂಜುಡಸ್ವಾಮಿಯವರಿಂದ ರಚನೆ.

೧೦. ಅಖಿಲ ಭಾರತ ಬೇಸಾಯಗಾರರ ಫೆಡರೇಷನ್ - ಗುಜರಾತ್.

೧೧. ಖೇದತ್ ಸಂಘ - ಗುಜರಾತ್.

೧೨. ಕಾರ್ಮಿಕರ ಹಾಗೂ ಕೃಷಿಕರ ಪಕ್ಷ - ಮಹಾರಾಷ್ಟ್ರ.

**೨. ಕಾರ್ಮಿಕ ಸಂಘಟನೆಗಳು**

ಭಾರತ ಕಾರ್ಮಿಕ ಅಥವಾ ಟ್ರೇಡ್ ಯೂನಿಯನ್‌ಗಳು ಬಹುತೇಕವಾಗಿ ರಾಜಕೀಯ ಸಂಘಟನೆಗಳೇ ಆಗಿದ್ದು ರಾಜಕೀಯ ಪಕ್ಷಗಳೊಂದಿಗೆ ನೇರ ಸಂಬಂಧ ಹೊಂದಿವೆ. ಇದರಲ್ಲಿ ಭಾರತದಾದ್ಯಂತ ಹಲವಾರು ಸಂಘಟನೆಗಳು ಅಸ್ತಿತ್ವದಲ್ಲಿರುವುದನ್ನು ಕಾಣಬಹುದಾಗಿದೆ. ಅವುಗಳೆಂದರೆ:

೧. ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ - ಕಮ್ಯೂನಿಸ್ಟ್ ಪಕ್ಷ.

೨. ಯುನೈಟೆಡ್ ಟ್ರೇಡ್ ಯೂನಿಯನ್ ಕಾಂಗ್ರೆಸ್ - ಕಮ್ಯೂನಿಸ್ಟ್ ಪಕ್ಷ.

೩. ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ - ಕಾಂಗ್ರೆಸ್ ಪಕ್ಷ.

೪. ಹಿಂದೂ ಮಜ್ದೂರ್ ಸಭಾ - ಭಾರತೀಯ ಜನತಾ ಪಕ್ಷ.

೫. ಹಿಂದೂ ಮಜ್ದೂರ್ ಪರಿಷತ್.

**೩. ವ್ಯಾಪಾರ ಸಂಘಟನೆಗಳು**

ಭಾರತವು ಸಮಾಜವಾದ ಸಿದ್ಧಾಂತವನ್ನು ಹೊಂದಿದ್ದು ಸಾರ್ವಜನಿಕ ಅರ್ಥ ವ್ಯವಸ್ಥೆಯನ್ನು ಹೊಂದಿದ್ದರೂ ಶೇ. ೬೫ರಷ್ಟು ಉತ್ಪಾದನೆ ಖಾಸಗಿ ಉದ್ಯಮಗಳಿಂದ ಬರುತ್ತಿದೆ. ಭಾರತದಲ್ಲಿ ಬಹುತೇಕ ವ್ಯಾಪಾರ ಹಾಗೂ ಕಾರ್ಖಾನೆಗಳು ಖಾಸಗಿ ವ್ಯಕ್ತಿಗಳ ಒಡೆತನದಲ್ಲಿವೆ. ಆದ್ದರಿಂದ ಇವರೆಲ್ಲಾ ಒಂದು ಕೂಡಿ ತಮ್ಮ ಹಿತಾಸಕ್ತಿಗೆ ಧಕ್ಕೆ ಬರದಂತೆ ಸರ್ಕಾರದ ಮೇಲೆ ಪ್ರಭಾವ ಬೀರುತ್ತಾರೆ. ಇಲ್ಲಿ ಬರುವ ಪ್ರಮುಖ ಸಂಘಟನೆಗಳೆಂದರೆ:

೧. ವಾಣಿಜ್ಯ ಮತ್ತು ಕೈಗಾರಿಕಾ ಭಾರತೀಯ ಮಂಡಳಿಗಳ ಫೆಡರೇಷನ್.

೨. ಅಖಿಲ ಭಾರತ ಉತ್ಪಾದಕರ ಸಂಘಟನೆ.

೩. ವಾಣಿಜ್ಯ ಸಂಯುಕ್ತಮಂಡಳಿಗಳು.

೪. ಭಾರತ ವ್ಯಾಪಾರಿ ಮಂಡಳಿ.

**೪. ವಿದ್ಯಾರ್ಥಿ ಸಂಘಟನೆಗಳು**

ಭಾರತದ ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯದ ನಂತರದಲ್ಲಿ ವಿದ್ಯಾರ್ಥಿಗಳ ಸಂಘಟನೆಯು ಬಹುಮುಖ್ಯವಾದ ಪಾತ್ರ ನಿರ್ವಹಿಸಿದೆ. ಅಂದರೆ ವಿದ್ಯಾರ್ಥಿ ಗುಂಪುಗಳು ರಾಜಕೀಯ ಪಕ್ಷಗಳ ಸಂಬಂಧವನ್ನು ಹೊಂದಿಲ್ಲವೆಂದು ಭಾವಿಸುವಂತಿಲ್ಲ. ಇವುಗಳಲ್ಲಿ

ಕೆಲವೊಂದು ಸಂಘಟನೆಗಳು ಮಾತ್ರ ಪಕ್ಷಗಳೊಂದಿಗೆ ನೇರವಾದ ಸಂಬಂಧ ಹೊಂದಿವೆ. ಇಲ್ಲಿ ಬರುವ ಪ್ರಮುಖ ಸಂಘಟನೆಗಳೆಂದರೆ:

೧. ಅಖಿಲ ಭಾರತ ವಿದ್ಯಾರ್ಥಿ ಪರಿಷತ್.
೨. ಭಾರತ ವಿದ್ಯಾರ್ಥಿ ಫೆಡರೇಷನ್.
೩. ಭಾರತ ರಾಷ್ಟ್ರೀಯ ವಿದ್ಯಾರ್ಥಿ ಯೂನಿಯನ್.
೪. ಪ್ರಗತಿಪರ ವಿದ್ಯಾರ್ಥಿಗಳ ಸಂಘ.
೫. ಸಮಾಜವಾದಿ ವಿದ್ಯಾರ್ಥಿಗಳ ಸಂಘ.
೬. ಸಮಾಜವಾದಿ ವಿದ್ಯಾರ್ಥಿಗಳ ಸಭೆ.
೭. ಜಮಾತ್ ಇ ತುಲಬ.
೮. ಅಖಿಲ ಭಾರತ ಸಿಖ್ ವಿದ್ಯಾರ್ಥಿಗಳ ಫೆಡರೇಷನ್.
೯. ಅಸ್ಸಾಂ ವಿದ್ಯಾರ್ಥಿಗಳ ಸಂಘ.

**೫. ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘಟನೆಗಳು**

ಭಾರತದಲ್ಲಿ ಧಾರ್ಮಿಕ ಗುಂಪುಗಳು ಅತ್ಯಂತ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಇವುಗಳು ಸ್ವಾತಂತ್ರ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಸ್ವಾತಂತ್ರ್ಯ ನಂತರವೂ ರಾಜಕೀಯ ಪ್ರಕ್ರಿಯೆಯಲ್ಲಿ ಅತ್ಯಂತ ಪ್ರಭಾವಯುತ ಗುಂಪುಗಳಾಗಿ ಕಾರ್ಯ ನಿರ್ವಹಿಸುತ್ತಾ ಬಂದಿವೆ. ಸ್ವಾತಂತ್ರ್ಯ ಪೂರ್ವದಲ್ಲಿ, ಮುಸ್ಲಿಂ ಲೀಗ್, ಆರ್ಯ ಸಮಾಜ, ಆಂಗ್ಲೋಇಂಡಿಯನ್ ಅಸೋಸಿಯೇಷನ್ ಇತ್ಯಾದಿ. ಪ್ರಸ್ತುತದಲ್ಲಿರುವ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘಟನೆಗಳೆಂದರೆ:

೧. ವಿಶ್ವಹಿಂದೂ ಪರಿಷತ್
೨. ರಾಷ್ಟ್ರೀಯ ಸ್ವಯಂ ಸೇವಕ ಸಂಘ
೩. ಹಿಂದು ಸುರಕ್ಷ ಸಮಿತಿ
೪. ಗೋರಕ್ಷ ಸಂಘ
೫. ಭಜರಂಗದಳ
೬. ಆರ್ಯಸಮಾಜ
೭. ಆಂಗ್ಲೋಇಂಡಿಯನ್ ಕ್ರಿಶ್ಚಿಯನ್ನರ ಸಂಘ
೮. ಕ್ಯಾಥೋಲಿಕ್ ಬಿಷಪ್ ಸಂಘ
೯. ರಾಷ್ಟ್ರೀಯ ಕ್ರಿಶ್ಚಿಯನ್ ಸಮಿತಿ
೧೦. ಅಖಿಲ ಭಾರತ ಕ್ರಿಶ್ಚಿಯನ್ ಮಂಡಳಿ
೧೧. ಜಮಾತ್-ಇ-ಇಸ್ಲಾಮಿ
೧೨. ಮಜಲಿಸ್-ಇ-ಇತ್ತೇಹಾದ್ ಉಲ್ ಮುಸ್ಲಮೀನ್

೧೩. ಭಾರತದ ಇಸ್ಲಾಮಿಕ್ ಕೌನ್ಸಿಲ್

೧೪. ಅಖಿಲ ಭಾರತ ಮುಸ್ಲಿಂ ವೇದಿಕೆ

೧೫. ಕರ್ನಾಟಕ ಮುಸ್ಲಿಂ ಸಂಘರ್ಷ ಸಮಿತಿ

೧೬. ಕರ್ನಾಟಕ ಮುಸ್ಲಿಂ ಪ್ರಗತಿ ಪರಿಷತ್

**೬. ಜಾತಿ ಆಧಾರಿತ ಸಂಘಟನೆಗಳು**

ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಅತ್ಯಂತ ಅಪಾಯಕಾರಿ ಗುಂಪುಗಳೆಂದರೆ ಜಾತಿ ಸಂಘಟನೆಗಳು. ಸರ್ಕಾರವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಾಗ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಈ ಸಂಘಟನೆಗಳು ಪ್ರಯತ್ನಿಸುತ್ತವೆ ಮತ್ತು ರಾಜಕೀಯ ಪಕ್ಷಗಳೊಂದಿಗೆ ನೇರ ಸಂಪರ್ಕ ಹೊಂದಿರುತ್ತವೆ. ಭಾರತದಲ್ಲಿರುವ ಪ್ರಮುಖ ಜಾತಿ ಗುಂಪುಗಳೆಂದರೆ:

೧. ಬ್ರಾಹ್ಮಣರ ಸಂಘ

೨. ವೀರಶೈವ ಮಹಾಸಭಾ

೩. ಬಸವದಳ

೪. ಒಕ್ಕಲಿಗರ ಸಂಘ

೫. ದಲಿತ ಸಂಘರ್ಷ ಸಮಿತಿ

೬. ಬಂಟರ ಯಾನೆ ನಾಡವರ ಸಂಘ

೭. ಪರಿಶಿಷ್ಟ ಜಾತಿಗಳ ಫೆಡರೇಷನ್

೮. ಕುರುಬರ ಸಂಘ

೯. ಕ್ಷತ್ರಿಯರ ಸಂಘ

೧೦. ಗುಜರಾತ್ ಕ್ಷತ್ರಿಯ ಸಭೆ

**೭. ಭಾಷಾ ಸಂಘಟನೆಗಳು**

ರಾಜಕೀಯ ವ್ಯವಸ್ಥೆಯಲ್ಲಿ ಭಾಷಾ ಗುಂಪುಗಳು ಒತ್ತಡ ಗುಂಪುಗಳಾಗಿ ಪ್ರಮುಖ ಪಾತ್ರವಹಿಸುತ್ತವೆ. ಅಸ್ತಿತ್ವದಲ್ಲಿರುವ ಅಂತಹ ಸಂಘಟನೆಗಳೆಂದರೆ:

೧. ಕನ್ನಡ ಶಕ್ತಿ ಕೇಂದ್ರ

೨. ಕನ್ನಡ ಚಳುವಳಿ ಪಕ್ಷ

೩. ತಮಿಳ್ ಸಂಘ

೪. ಆಂಧ್ರ ಮಹಾಸಭಾ

೫. ಅಂಜುಮನ್ ತರಕ್ಕಿ-ಇ-ಉರ್ದು

ಈ ಗುಂಪುಗಳು ರಾಜ್ಯದ ಆಡಳಿತದ ಮೇಲೆ ಹಾಗೂ ಆಡಳಿತ ಭಾಷಾ ಮಾಧ್ಯಮದ ನೀತಿಯ ಮೇಲೆ ಪ್ರಭಾವ ಬೀರುತ್ತವೆ.

೮. ಬುಡಕಟ್ಟು ಜನಾಂಗಗಳ ಸಂಘಟನೆಗಳು

ಇಂತಹ ಸಂಘಟನೆಗಳನ್ನು ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಗುರುತಿಸಬಹುದಾಗಿದೆ. ಈ ಸಂಘಟನೆಗಳು ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಸುಧಾರಣೆಗಳಿಗೆ ಒತ್ತಡ ತರುವುದರ ಜೊತೆಗೆ ಪ್ರತ್ಯೇಕ ರಾಜ್ಯಕ್ಕೂ ಒತ್ತಾಯಿಸುತ್ತಿರುವುದು ಕಂಡುಬರುತ್ತದೆ. ಅಂತಹ ಸಂಘಟನೆಗಳೆಂದರೆ:

೧. ನಾಗಾ ರಾಷ್ಟ್ರೀಯ ಸಭೆ.
೨. ತ್ರಿಪುರ ರಾಷ್ಟ್ರೀಯ ವಾಲೆಂಟಿಯರ್ಸ್.
೩. ಅಸ್ಸಾಂ ಬುಡಕಟ್ಟು ಸಂಘ.
೪. ಯುನೈಟೆಡ್ ಮಿಜೋ ಫೆಡರಲ್.
೫. ಪೂರ್ವ ಭಾರತದ ಬುಡಕಟ್ಟು ಯೂನಿಯನ್.
೬. ಝಾರ್‌ಕಂಡ್ ಮುಕ್ತಿಮೋರ್ಚಾ.

ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಒತ್ತಡದ ಗುಂಪುಗಳು ಗಣನೀಯ ಪಾತ್ರವನ್ನು ನಿರ್ವಹಿಸುತ್ತಿದ್ದು, ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ ಹಾಗೂ ಆಡಳಿತಾಂಗದ ಮೇಲೆ ತಮ್ಮದೇ ಆದ ರೀತಿಯಲ್ಲಿ ಪ್ರಭಾವವನ್ನು ಬೀರುವ ಮೂಲಕ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತವೆ. ಹಾಗೂ ತಮ್ಮ ಹಿತಾಸಕ್ತಿಗಳಿಗೆ ಬೆಂಬಲ ಪಡೆಯಲು ಸಾರ್ವಜನಿಕ ಅಭಿಪ್ರಾಯವನ್ನು ತಮ್ಮೆಡೆಗೆ ಕ್ರೋಢೀಕರಿಸಲು ಪ್ರಯತ್ನಿಸುತ್ತವೆ. ಹೀಗೆ ಈ ಒತ್ತಡ ಗುಂಪುಗಳು ಕಾನೂನು ರಚನೆ, ಸರ್ಕಾರದ ನೀತಿ ನಿರೂಪಣೆ, ಸರ್ಕಾರಿ ತೀರ್ಮಾನ, ನ್ಯಾಯಾಂಗದ ತೀರ್ಮಾನಗಳು ಸದಾ ತಮ್ಮ ಹಿತಾಸಕ್ತಿಗಳನ್ನು ರಕ್ಷಿಸುವಂತೆ ಇರಬೇಕೆಂದು ಬಯಸುತ್ತಿರುತ್ತವೆ.

೬.೫ ಸಾರಾಂಶ

ಆಧುನಿಕ ಪ್ರಜಾಪ್ರಭುತ್ವದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಒತ್ತಡ ಗುಂಪುಗಳು ಮಹತ್ವದ ಪಾತ್ರವನ್ನು ಹೊಂದಿವೆ. ಸರ್ಕಾರದ ನೀತಿ ನಿರ್ಧಾರಗಳು ಅಭಿಪ್ರಾಯದ ಫಲವಾಗಿಯೇ ವಿನಹ ಬಲದ ಪರಿಣಾಮವಾಗಿ ಮೂಡಿ ಬರಲಿಲ್ಲ. ಸಾರ್ವಜನಿಕ ಅಭಿಪ್ರಾಯದ ಪಾತ್ರ ಸರ್ಕಾರದ ನಿರ್ವಹಣೆಯಲ್ಲಿ ಪ್ರಮುಖವಾಗಿ ಮಾನ್ಯತೆ ಪಡೆಯುವಂತೆ ಆಯಿತು. ಸಾರ್ವಜನಿಕ ಅಭಿಪ್ರಾಯವು ಯಾವುದೇ ರೀತಿಯ ದಾಖಲೆಯಾಗಿರದೆ, ಅದು ಆಯಾ ಸಂದರ್ಭದಲ್ಲಿ ಸರ್ಕಾರದ ನೀತಿ ನಿರೂಪಣೆ ಮತ್ತು ಸಮಸ್ಯೆಗಳ ಬಗ್ಗೆ ತತ್‌ಕ್ಷಣದಲ್ಲಿ ಪ್ರಜೆಗಳು ನೀಡುವ ನಕಾರಾತ್ಮಕ ಅಥವಾ ಸಕಾರಾತ್ಮಕ ಅಭಿಪ್ರಾಯವೇ ಆಗಿರುತ್ತದೆ. ಸಮಾಜದಲ್ಲಿನ ಹಲವಾರು ವಿಭಿನ್ನ ಅಭಿಪ್ರಾಯಗಳು ಹೊರಹೊಮ್ಮುವುದೇ ಪ್ರಜಾಭಿಪ್ರಾಯವೆನಿಸಿಕೊಳ್ಳುತ್ತದೆ. ಪ್ರಜೆಗಳ ಸ್ವಾರ್ಥ ಅಭಿಪ್ರಾಯವು ಸಾರ್ವಜನಿಕ ಅಭಿಪ್ರಾಯವೆನಿಸಿಕೊಳ್ಳುವುದಿಲ್ಲ. ಸಾರ್ವಜನಿಕರ/ಸರ್ವರ ಕಲ್ಯಾಣಕ್ಕೋಸ್ಕರ ಸಾರ್ವಜನಿಕ ವಿಷಯಗಳ ಮೇಲೆ ಸಾರ್ವಜನಿಕರು ವ್ಯಕ್ತಪಡಿಸುವ ಅಭಿಪ್ರಾಯವೇ ಸಾರ್ವಜನಿಕ

ಅಭಿಪ್ರಾಯವಾಗಿರುತ್ತದೆ. ಆದರೆ, ಪ್ರಜೆಗಳು ಸುಶಿಕ್ಷಿತರಾಗಿದ್ದಾಗ ಮಾತ್ರ ಸಾರ್ವಜನಿಕ ಅಭಿಪ್ರಾಯ ಹೆಚ್ಚು ಬಲಯುತವಾಗಿರುತ್ತದೆ.

ಒತ್ತಡ ಗುಂಪುಗಳಿಗೂ ಭಾರತೀಯ ಪ್ರಜಾಪ್ರಭುತ್ವದಲ್ಲಿ ಸಕ್ರಿಯ ಪಾತ್ರವಿದೆ. ಸರ್ಕಾರದ ತೀರ್ಮಾನಗಳ ಮೇಲೆ ಪ್ರಭಾವ ಬೀರಲು ಪ್ರಯತ್ನಿಸುವ ಸಂಘಟಿತ ಗುಂಪೇ ಹಿತಾಸಕ್ತಿ ಒತ್ತಡ ಗುಂಪು. ಇವುಗಳಿಗೆ ಅನೇಕ ಭಾಷೆಗಳು, ಪ್ರಾಂತ್ಯಗಳು, ಧರ್ಮಗಳು, ಜಾತಿಗಳು, ಪಂಗಡಗಳು, ವರ್ಗಗಳು ಇವೇ ಮೊದಲಾದವು ಸೇರಿರುತ್ತವೆ. ಇವುಗಳೆಲ್ಲವು ಒಂದಲ್ಲ ಒಂದು ವಿಧದಲ್ಲಿ ಸಂಘಟಿತರಾಗಿ ತಮ್ಮ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಸರ್ಕಾರದ ಮೇಲೆ ವಿವಿಧ ರೀತಿಯಲ್ಲಿ ಪ್ರಭಾವ ಬೀರುತ್ತವೆ. ಇವುಗಳಲ್ಲಿ ಪ್ರಭಾವಶಾಲಿಗಳಾಗಿರುವಂತಹ ಗುಂಪುಗಳು ಸರ್ಕಾರದ ಭವಿಷ್ಯವನ್ನೇ ನಿರ್ಧರಿಸುವಂತಾಗಬಹುದು. ಅಲ್ಲದೆ ಚುನಾವಣೆ ಸಂದರ್ಭದಲ್ಲಿ ಇವು ಒಂದು ಪಕ್ಷದ ಅಳಿವು ಉಳಿವನ್ನು ನಿರ್ಧರಿಸುವಂತ ಕಾರ್ಯಕ್ರಮಗಳನ್ನು ಮಾಡಬಹುದು. ಆದರೆ, ಅಮೇರಿಕಾದ ಒತ್ತಡ ಗುಂಪುಗಳಿಗೆ ಹೋಲಿಸಿದರೆ ಭಾರತದಲ್ಲಿಯ ಒತ್ತಡ ಗುಂಪುಗಳು ಅಷ್ಟೇನೂ ಪರಿಣಾಮಕಾರಿಯಾಗಿಲ್ಲ. ಬದಲಾಗಿ ಇಲ್ಲಿರುವ ಒತ್ತಡ ಗುಂಪುಗಳು ಪ್ರಜಾಪ್ರಭುತ್ವಕ್ಕೆ ಪೂರಕವಾಗಿರುವ ಬದಲು ನಕಾರತ್ಮಕವಾದ ಗುಣವನ್ನೇ ಹೆಚ್ಚು ಹೊಂದಿರುವುದು ದುರದೃಷ್ಟಕರ.

### ೬.೬ ಪಾರಿಭಾಷಿಕ ಪದಕೋಶ

೧ Groupism - ಗುಂಪುಗಾರಿಕೆ

೨ Public Opinion - ಸಾರ್ವಜನಿಕ ಅಭಿಪ್ರಾಯ

೩ Peasant groups - ರೈತ ಸಂಘಟನೆಗಳು

೪ Impliment - ಜಾರಿಗೆ ತರುವುದು

೫ State Policy - ರಾಜ್ಯನೀತಿ

### ೬.೭ ಪ್ರಶ್ನೆಗಳು

### ಅ. ಒಂದು ಅಂಕದ ಪ್ರಶ್ನೆಗಳು

೧. ಒತ್ತಡ ಗುಂಪುಗಳು ಎಂದರೇನು?

೨. ಭಾರತದಲ್ಲಿರುವ ಎರಡು ಒತ್ತಡ ಗುಂಪುಗಳನ್ನು ಹೆಸರಿಸಿ?

೩. ಎರಡು ಕಾರ್ಮಿಕ ಸಂಘಟನೆಗಳನ್ನು ಹೆಸರಿಸಿ?

೪. ಸಾರ್ವಜನಿಕ ಅಭಿಪ್ರಾಯವೆಂದರೇನು?

೫. ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯವು ಮಹತ್ವ ಪಡೆದಿದೆಯೇ?

೬. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಂತಿಮ ಪರಮಾಧಿಕಾರವನ್ನು ಯಾರು ಹೊಂದಿರುತ್ತಾರೆ?

೭. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಎರಡು ಸಂಸ್ಥೆಗಳನ್ನು ಹೆಸರಿಸಿ?

೮. "ಪತ್ರಿಕೆಗಳು ಪ್ರಜಾಪ್ರಭುತ್ವದ ಬೈಬಲ್" ಎಂದು ವ್ಯಾಖ್ಯಾನಿಸಿದವರು ಯಾರು?

೯. ಸಾರ್ವಜನಿಕ ಅಭಿಪ್ರಾಯವು ಯಾವುದರ ಮೇಲೆ ನೇರವಾಗಿ ಪ್ರಭಾವ ಬೀರುತ್ತದೆ?

೧೦. ವಿವಿಧತೆ ಎಂದರೇನು?

**ಆ. ಎರಡು ಅಂಕದ ಪ್ರಶ್ನೆಗಳು**

೧. ಸಾರ್ವಜನಿಕ ಅಭಿಪ್ರಾಯದ ಅರ್ಥ ಹಾಗೂ ಲಾರ್ಡ್ ಬೈಸ್‌ರವರ ವ್ಯಾಖ್ಯಾನವನ್ನು ಸ್ಪಷ್ಟೀಕರಿಸಿ.

೨. ಸಾರ್ವಜನಿಕ ಅಭಿಪ್ರಾಯದ ಎರಡು ಪ್ರಮುಖ ಕಾರ್ಯಗಳನ್ನು ವಿವರಿಸಿ.

೩. ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ವಿದ್ಯಾಸಂಸ್ಥೆಗಳ ಪಾತ್ರವನ್ನು ಸಂಕ್ಷಿಪ್ತವಾಗಿ ಬರೆಯಿರಿ.

೪. ಒತ್ತಡ ಗುಂಪುಗಳ ಅರ್ಥವನ್ನು ಬರೆಯಿರಿ.

೫. ಒತ್ತಡ ಗುಂಪುಗಳ ಮೂರು ಸಾಮಾನ್ಯ ಲಕ್ಷಣಗಳನ್ನು ಬರೆಯಿರಿ.

೬. ಭಾರತದಲ್ಲಿ ಒತ್ತಡ ಗುಂಪುಗಳನ್ನು ಯಾವ ಯಾವ ಕ್ಷೇತ್ರದಲ್ಲಿ ಗುರುತಿಸಬಹುದಾಗಿದೆ.

೭. ಒತ್ತಡ ಗುಂಪುಗಳ ಕಾರ್ಯತಂತ್ರವನ್ನು ಹೆಸರಿಸಿ.

೮. ಒತ್ತಡ ಗುಂಪುಗಳು ಯಾರ ಯಾರ ನಡುವೆ ಸಂಪರ್ಕ ಸೇತುವೆಗಳಾಗಿವೆ.

೯. ಒತ್ತಡ ಗುಂಪುಗಳ ಪ್ರಮುಖ ಉದ್ದೇಶವನ್ನು ಬರೆಯಿರಿ.

೧೦. ಒತ್ತಡ ಗುಂಪುಗಳು ಕಾರ್ಯಾಂಗದ ಕಾರ್ಯದಲ್ಲಿ ಹೇಗೆ ವರ್ತಿಸುತ್ತವೆ.

**ಇ. ಐದು ಅಂಕಗಳ ಪ್ರಶ್ನೆಗಳು**

೧. ಸಾರ್ವಜನಿಕ ಅಭಿಪ್ರಾಯದ ಅರ್ಥವನ್ನು ವ್ಯಾಖ್ಯಾನಗಳ ಮೂಲಕ ವಿವರಿಸಿ.

೨. ಸಾರ್ವಜನಿಕ ಅಭಿಪ್ರಾಯದ ಪ್ರಾಮುಖ್ಯತೆಯನ್ನು ಸಂಕ್ಷಿಪ್ತವಾಗಿ ವಿವರಿಸಿ.

೩. ಸಾರ್ವಜನಿಕ ಅಭಿಪ್ರಾಯದ ಬಹುಸಂಖ್ಯಾತರ ಅಭಿಪ್ರಾಯವಾಗಿದೆಯೇ ವಿವರಿಸಿ.

೪. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವಲ್ಲಿ ಪತ್ರಿಕೆಗಳ ಪಾತ್ರವನ್ನು ವಿವರಿಸಿ.

೫. ಸಾರ್ವಜನಿಕ ಅಭಿಪ್ರಾಯ ರೂಪಿಸುವ ರಾಜಕೀಯ ಪಕ್ಷಗಳು ಮತ್ತು ಸಾರ್ವಜನಿಕ ವೇದಿಕೆಗಳ ಪಾತ್ರವನ್ನು ವಿವರಿಸಿ.

೬. ಒತ್ತಡ ಗುಂಪುಗಳ ಅರ್ಥ ಮತ್ತು ವ್ಯಾಖ್ಯಾನಗಳನ್ನು ಬರೆಯಿರಿ.

೭. ಒತ್ತಡ ಗುಂಪುಗಳ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಬರೆಯಿರಿ.

೮. ಒತ್ತಡ ಗುಂಪುಗಳ ಕಾರ್ಯಗಳನ್ನು ಸಂಕ್ಷಿಪ್ತವಾಗಿ ಬರೆಯಿರಿ.

೯. ಭಾರತದಲ್ಲಿರುವ ಪ್ರಮುಖ ರೈತಸಂಘಟನೆಗಳು ಯಾವುವು.

೧೦. ಭಾರತದಲ್ಲಿರುವ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘಟನೆಗಳು ಯಾವುವು.

**ಈ. ಹತ್ತು ಅಂಕದ ಪ್ರಶ್ನೆಗಳು**

೧. ಸಾರ್ವಜನಿಕ ಅಭಿಪ್ರಾಯದ ಅರ್ಥ ಮತ್ತು ಮಹತ್ವವನ್ನು ವಿವರಿಸಿ.

೨. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಸಂಸ್ಥೆಗಳನ್ನು ವಿವರಿಸಿ.

೩. ಒತ್ತಡ ಗುಂಪುಗಳ ಅರ್ಥ ಮತ್ತು ಪ್ರಾಮುಖ್ಯತೆಯನ್ನು ಚರ್ಚಿಸಿ.

೪. ಭಾರತದ ಒತ್ತಡ ಗುಂಪುಗಳ ಲಕ್ಷಣಗಳನ್ನು ವಿವರಿಸಿ.
೫. ಒತ್ತಡ ಗುಂಪುಗಳ ವಿಧಗಳನ್ನು ವಿವರಿಸಿ.

**ಉ. ಅಭ್ಯಾಸ ಚಟುವಟಿಕೆಗಳು**

೧. ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯದ ಸಫಲತೆ ಮತ್ತು ವಿಫಲತೆಗಳನ್ನು ಚರ್ಚಿಸಿ.
೨. ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವ ಸಂಸ್ಥೆಗಳು ತಮ್ಮ ಕಾರ್ಯಗಳಲ್ಲಿ ಸಫಲವಾಗುತ್ತಿವೆಯೇ? ಚರ್ಚಿಸಿ.
೩. ಒತ್ತಡ ಗುಂಪುಗಳ ಕಾರ್ಯಗಳು ಸರ್ಕಾರದ ಮೇಲೆ ಪ್ರಭಾವ ಬೀರುತ್ತಿವೆಯೇ? ಅಥವಾ ಸರ್ಕಾರವೇ ಒತ್ತಡ ಗುಂಪುಗಳನ್ನು ನಿಯಂತ್ರಿಸುತ್ತಿದೆಯೇ? ಚರ್ಚಿಸಿ.

## ಅಧ್ಯಾಯ ೭

# ಭಾರತದಲ್ಲಿ ಆಡಳಿತಯಂತ್ರ

### ೭.೧ ಆಡಳಿತ : ಅರ್ಥ - ಪರಿಭಾಷೆ

**ಪೀಠಿಕೆ**

ಆಧುನಿಕ ಜನರಲ್ಲಿ ರಾಜಕೀಯ ಪ್ರಜ್ಞೆಯು ಅತ್ಯಾಶ್ಚರ್ಯಕರ ರೀತಿಯಲ್ಲಿ ಬೆಳೆಯುತ್ತಿದೆ. ಉತ್ತಮ ಆಡಳಿತ ಮತ್ತು ಉತ್ತಮ ಆಡಳಿತಗಾರರು ಪ್ರತಿಯೊಂದು ಸರ್ಕಾರದ ಜೀವಾಳ. ಆಡಳಿತವೆಂಬುದು ಅನಾದಿಕಾಲದಿಂದಲೂ ರೂಢಿಯಲ್ಲಿರುವ ವ್ಯವಸ್ಥೆಯಾಗಿದ್ದರೂ ಇದು ಕ್ರಾಂತಿಯ ನಂತರ ಹೆಚ್ಚು ಪ್ರಖ್ಯಾತಿಗೆ ಬಂದ ಕಲೆಯಾಗಿದೆ. ಪ್ರಜಾಸೌಖ್ಯದ ಸಾಧನೆಯು ಉತ್ತಮ ಆಡಳಿತದ ವ್ಯವಸ್ಥೆಯಿಂದ ಮಾತ್ರವೇ ಸಾಧ್ಯ. ಆದ್ದರಿಂದ ಸಾರ್ವಜನಿಕ ಆಡಳಿತದ ಸ್ವರೂಪ ಮತ್ತು ಕಾರ್ಯವಿಧಾನಗಳ ಬಗ್ಗೆ ಹೆಚ್ಚಿನ ಆಸಕ್ತಿ ಹುಟ್ಟಿರುವುದು ಸಹಜವಾಗಿದೆ.

**ಅ. ಆಡಳಿತ**

'ನೀನು ಆಡಳಿತ ನಡೆಸುವ ಮೊದಲು ಅದನ್ನು ಅರ್ಥ ಮಾಡಿಕೋ' ಎನ್ನುವ ವಾಕ್ಯ ಅತ್ಯಂತ ಪ್ರಸ್ತುತವಾದುದ್ದು. ಆಡಳಿತ ಎಂದ ಮಾತ್ರಕ್ಕೆ ಕೇವಲ ಅಧಿಕಾರ ಚಲಾಯಿಸುವುದು ಎಂದರ್ಥವಲ್ಲ. ಪ್ರಜೆಗಳ ಸೇವೆಗಾಗಿ, ಅವರ ಸಮಸ್ಯೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಕಾನೂನು, ರೂಢಿ ಮತ್ತು ವಿಧಾನಗಳನ್ನು ವಿವೇಚನಾ ಶಕ್ತಿಯಿಂದ ಬಳಸುವ ಮೂಲಕ ಮಾನವೀಯ ಭಾವದಿಂದ ಸುಲಲಿತವಾಗಿ ಉದ್ದೇಶಗಳನ್ನು ಸಾಧಿಸುವ ಪ್ರಕ್ರಿಯೆಯಾಗಿದೆ. ಆಡಳಿತಾಂಗ ಎನ್ನುವುದು ನಮ್ಮ ದಾಸನೂ ಹೌದು, ನಮ್ಮ ಯಜಮಾನನೂ ಹೌದು, ಅದರ ಬಳಕೆ ಬುದ್ಧಿವಂತಿಕೆಯನ್ನು ಅವಲಂಬಿಸಿರುತ್ತದೆ.

**ಆ. ಅರ್ಥ ಮತ್ತು ವ್ಯಾಪ್ತಿ**

ಆಂಗ್ಲ ಭಾಷೆಯ Administration ಪದದ ಸಮಾನಾರ್ಥಪದವೇ ಆಡಳಿತ. Administration ಎಂಬುದು Administer ಎಂಬುದರ ನಾಮವಾಚಕ. Administer ಎಂಬುದು Latin ಭಾಷೆಯ Menistiare ಮೂಲದಿಂದ ರೂಪುಗೊಂಡಿದೆ. Menistiar ಎಂದರೆ ಸೇವೆ ಮಾಡು ಎಂಬುದಾಗಿದೆ. ಆದ್ದರಿಂದ ಆಡಳಿತ ಎಂಬುದು ಸೇವಾ ಮನೋಭಾವ ಮತ್ತು ಕಾರ್ಯ ತತ್ಪರತೆಯನ್ನು ಸೂಚಿಸುತ್ತದೆ. ಹಾಗಾಗಿ ಆಡಳಿತ ಎಂದರೆ ನಿರ್ದಿಷ್ಟ ಸಾಧನೆಗಾಗಿ ಕೈಗೊಳ್ಳುವ ಆಡಳಿತ ವಿನ್ಯಾಸ ಆಗಬಹುದಾಗಿದೆ. ಸಮೂಹ ಕಾರ್ಯಾಚರಣೆಯಲ್ಲಿ ತೊಡಗಿದ ವ್ಯಕ್ತಿಗಳಿಗೆ ಸೂಕ್ತ ನಿರ್ದೇಶನ ಅಥವಾ ಆಜ್ಞೆಗಳನ್ನು ನೀಡುವುದೇ ಆಡಳಿತ.

ಸಾಂಘಿಕ ಜೀವನ ನಡೆಸುವ ಮಾನವರು ಒಟ್ಟೊಟ್ಟಿಗೆ ಕಲೆತು ಅನೇಕ ಕೆಲಸಗಳನ್ನು ನಿರ್ವಹಿಸಬೇಕಾಗುತ್ತದೆ. ಅಂತಹ ಸಮಯದಲ್ಲಿ ಅವರು ನಡೆದುಕೊಳ್ಳುವ ರೀತಿ ಮತ್ತು ಕಾರ್ಯನಿರ್ವಹಣೆಯ ವಿಧಾನವು ಬಿಕ್ಕಟ್ಟು ಮತ್ತು ಘರ್ಷಣೆಯನ್ನು ಉಂಟುಮಾಡದೆ ಅಪೇಕ್ಷಿತ ಪ್ರತಿಫಲ ಪಡೆಯಬೇಕು. ಇದು ಸಾಧ್ಯವಾಗಲು ಸಂಪನ್ಮೂಲ ಮತ್ತು ಮಾನವ ಶ್ರಮವನ್ನು ಸೂಕ್ತ ರೀತಿಯಲ್ಲಿ ಬಳಸಿಕೊಂಡು ಗುರಿ ಸಾಧಿಸಬೇಕಾಗುತ್ತದೆ. ಈ ರೀತಿಯ ಕಾರ್ಯಕ್ಕೆ ನಾವು ಆಡಳಿತ ಎನ್ನುತ್ತೇವೆ. ಉದಾಹರಣೆಗೆ ದಾರಿಗೆ ಅಡ್ಡಲಾಗಿ ಬಿದ್ದಿರುವ ಮರವನ್ನು ರಸ್ತೆ ಬದಿಗೆ ತಳ್ಳಬೇಕಾದರೆ, ನಾಲ್ಕಾರು ಮಂದಿ ಒಂದು ದಿಕ್ಕಿನಿಂದ ನಿಂತುಕೊಂಡು ಮತ್ತೊಂದು ದಿಕ್ಕಿಗೆ ತಳ್ಳಬೇಕು. ಅದರ ಬದಲಾಗಿ ನಾಲ್ಕು ಮಂದಿ ಒಂದೆಡೆ, ಉಳಿದ ನಾಲ್ಕು ಮಂದಿ ಅದರ ವಿರುದ್ಧ ದಿಕ್ಕಿಗೆ ನಿಂತು ಏಕಕಾಲಕ್ಕೆ ಎರಡು ಗುಂಪುಗಳು ಮರವನ್ನು ನೂಕಲು ಯತ್ನಿಸಿದರೆ ಮರವು ರಸ್ತೆಯ ಅಡ್ಡದಲ್ಲಿಯೇ ನಿಂತಿರುತ್ತದೆ. ಆಗ ಇದು ಆಡಳಿತ ಎನ್ನಲಾಗದು. ಒಂದೇ ದಿಕ್ಕಿನಲ್ಲಿ ನಿಂತು ಮರವನ್ನು ರಸ್ತೆ ಬದಿಗೆ ನೂಕಿದಾಗ ಅಲ್ಲಿ ಆಡಳಿತ ಇದೆ ಎನ್ನುತ್ತೇವೆ.

**೧. ಆಡಳಿತ ಪರಿಭಾಷೆ**

**ಈ.ಎನ್. ಗ್ಲಾಡ್**‌ರ ಪ್ರಕಾರ "ಆಡಳಿತವೆಂಬ ಪದ ಬಹುಮಟ್ಟಿಗೆ ಠೇಂಕಾರದಿಂದ (ಗಾಂಭೀರ್ಯ) ಕೂಡಿದ ಪದವಾದರೂ ಸಹ ಅದು ವಿನೀತ ಭಾವವನ್ನು ಸೂಚಿಸುತ್ತದೆ".

**ಎಲ್.ಡಿ. ವೈಟ್**‌ರ ಅಭಿಪ್ರಾಯದಲ್ಲಿ "ಉದ್ದೇಶ ಅಥವಾ ಗುರಿಯೊಂದರ ಸಾಧನೆಗಾಗಿ ಹಲವಾರು ಜನರನ್ನು ನಿರ್ದೇಶಿಸುವ ಮತ್ತು ನಿಯಂತ್ರಿಸುವ ಕಲೆ ಆಡಳಿತ".

**ಜಾನ್ ಎ. ವೇಗ್**‌ರ ಪ್ರಕಾರ "ಪ್ರಜ್ಞಾಪೂರ್ವಕ ಉದ್ದೇಶ ಒಂದರ ಸಾಧನೆಗಾಗಿ ಕೈಗೊಳ್ಳಲಾದ ಪೂರ್ವ ನಿರ್ಧಾರಿತ ಕಾರ್ಯಾಚರಣೆಯೇ ಆಡಳಿತ".

**ಪಿಗ್ನರ್**‌ರ ಪ್ರಕಾರ "ಉದ್ದೇಶಿತ ಗುರಿಯ ಸಾಧನೆಗಾಗಿ ಮಾನವಿಕ ಮತ್ತು ವಸ್ತು ಸಂಪನ್ಮೂಲಗಳನ್ನು ಸಂಘಟಿಸಿ ನಿರ್ದೇಶಿಸುವುದೇ ಆಡಳಿತ".

ಸಾರ್ವಜನಿಕ ಆಡಳಿತ ಎಂಬ ಪದದ ಹಿಂದೆ ಸಾರ್ವಜನಿಕ ಎಂಬ ಪದವನ್ನು ಬಳಸುವುದರಿಂದ ನಮ್ಮ ಅಧ್ಯಯನ ಶಾಖೆಯ ಕ್ಷೇತ್ರವು ಸರ್ಕಾರದ ಆಡಳಿತ ಚಟುವಟಿಕೆಗಳಿಗೆ ಸೀಮಿತಗೊಳ್ಳುತ್ತದೆ. ನ್ಯಾಯಾಂಗ ಆಡಳಿತ ವ್ಯವಸ್ಥೆ ಮತ್ತು ಸೇವೆಯ ಆಡಳಿತ ಅಧ್ಯಯನವು ಸಾರ್ವಜನಿಕ ಆಡಳಿತದಿಂದ ಹೊರತಾಗಿದೆ. ಸರ್ಕಾರದ ಹೆಚ್ಚಿನ ಕಾರ್ಯಭಾರಗಳನ್ನು ಆಡಳಿತಾಂಗವು ನಿರ್ವಹಿಸುತ್ತದೆ. ಸಾರ್ವಜನಿಕ ಆಡಳಿತದ ಕರ್ತವ್ಯ ಎನ್ನುವುದು ಜನರು ಸರ್ಕಾರದಿಂದ ಏನನ್ನು ನಿರೀಕ್ಷಿಸುತ್ತಾರೆ ಎಂಬುದನ್ನು ಸೂಚಿಸುತ್ತದೆ.

**ವುಡ್ರೋ ವಿಲ್ಸನ್**‌ರ ಅಭಿಪ್ರಾಯದಲ್ಲಿ "ವಿವರ ಬದ್ಧವಾಗಿ ಮತ್ತು ಕ್ರಮಬದ್ಧವಾಗಿ ಕಾನೂನನ್ನು ಅನ್ವಯಿಸುವುದೇ ಸಾರ್ವಜನಿಕ ಆಡಳಿತ".

**ಲಿಯುಡಾಸೋ ವೈಟ್**‌ರವರ ಪ್ರಕಾರ "ಸಾರ್ವಜನಿಕ ಆಡಳಿತ ಸೂಕ್ತ ಅಧಿಕಾರಯುಕ್ತನಿಂದ ಘೋಷಿಸಲ್ಪಟ್ಟ ಸರ್ಕಾರಿ ನೀತಿಯನ್ನು ಈಡೇರಿಸುವ ಅಥವಾ ಜಾರಿಗೆ ತರುವ ಉದ್ದೇಶ ಹೊಂದಿರುವ ಎಲ್ಲಾ ಕಾರ್ಯಾಚರಣೆಗಳನ್ನು ಒಳಗೊಂಡಿರುತ್ತದೆ".

## ೨. ಪ್ರಜಾಪ್ರಭುತ್ವದಲ್ಲಿ ಆಡಳಿತದ ಪಾತ್ರ

ಪ್ರಜಾಪ್ರಭುತ್ವ ಎಂದರೆ ಪ್ರಜೆಗಳ, ಪ್ರಜೆಗಳಿಂದ ಮತ್ತು ಪ್ರಜೆಗಳಿಗಾಗಿ ಇರುವ ವ್ಯವಸ್ಥೆ. ಪ್ರಜಾಪ್ರಭುತ್ವದಲ್ಲಿ ಜನರಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳು ಸರ್ಕಾರವನ್ನು ಮುನ್ನಡೆಸುತ್ತಾರೆ. ಪ್ರಜಾಪ್ರಭುತ್ವದಲ್ಲಿ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗ ವ್ಯವಸ್ಥೆಗಳು ಒಳಗೊಂಡಿದ್ದು, ಈ ಮೂರು ಸಂವಿಧಾನದ ಅಂಗಗಳಲ್ಲಿ ಆಡಳಿತದ ವ್ಯವಸ್ಥೆ ಪ್ರಮುಖ ಪಾತ್ರವಹಿಸುತ್ತದೆ. ನಾಗರಿಕರ ಹಿತಾಸಕ್ತಿಗೆ ಅನುಗುಣವಾಗಿ ಕಾನೂನನ್ನು ರಚಿಸುವುದು, ಜಾರಿಗೆ ತರುವುದು, ಆಡಳಿತ ಎನಿಸಿಕೊಳ್ಳುತ್ತದೆ. ಈ ನಿಟ್ಟಿನಲ್ಲಿ ವ್ಯವಸ್ಥೆಯನ್ನು ಸೂಕ್ತ ರೀತಿಯಲ್ಲಿ ರಚಿಸಿಕೊಂಡು, ನಡೆಸಿಕೊಂಡು ಹೋಗುವುದು ಪ್ರಮುಖವಾದುದು, ಇಲ್ಲವಾದಲ್ಲಿ ಪ್ರಜಾಪ್ರಭುತ್ವದ ಅರ್ಥವೇ ಇಲ್ಲದಂತಾಗುತ್ತದೆ. ಪ್ರಜೆಗಳ ಹಿತವನ್ನರಿತು ಅವರ ಸರ್ವತೋಮುಖ ಪ್ರಗತಿಗಾಗಿ ಸಮರ್ಥ ಆಡಳಿತದ ಅಗತ್ಯವಿರುತ್ತದೆ. ಒಂದು ವೇಳೆ ಅದು ಸಾಧ್ಯವಾಗದೇ ಹೋದಲ್ಲಿ ಪ್ರಜಾಪ್ರಭುತ್ವ ಅರ್ಥಹೀನವಾಗಿ, ರಾಷ್ಟ್ರ ಸತ್ವಹೀನ ವಾಗುತ್ತದೆ. ಹಾಗಾಗಿ ಒಂದು ವ್ಯವಸ್ಥಿತ, ಯೋಜಿತ, ಉದ್ದೇಶಿತ ಕಾರ್ಯಕ್ರಮಗಳನ್ನು ಜಾರಿಗೆ ತರುವ ಮೂಲಕ ಸಮರ್ಪಕ ಆಡಳಿತವನ್ನು ನಡೆಸಬೇಕಾದುದು ಆಡಳಿತಗಾರರ, ಸರ್ಕಾರದ ಪ್ರಮುಖ ಜವಾಬ್ದಾರಿ.

### ೭.೨ ನಾಗರಿಕ ಸೇವೆ : ಅರ್ಥ ಮತ್ತು ಲಕ್ಷಣಗಳು

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ಕಾರವನ್ನು ಸೂಕ್ತ ರೀತಿಯಲ್ಲಿ ಮುನ್ನಡೆಸಲು ಇರುವ ಎರಡು ಪ್ರಮುಖ ಅಂಗಗಳೆಂದರೆ ೧. ಚುನಾಯಿತ ಪ್ರತಿನಿಧಿಗಳು ೨. ನಾಗರಿಕ ಸೇವಾವರ್ಗ.

ಪ್ರೊ. ರೋಬ್‌ಸನ್ ಪ್ರಕಾರ ನಾಗರಿಕ ಸೇವಾ ವರ್ಗವಿಲ್ಲದಿದ್ದರೆ ಚುನಾಯಿತ ಪ್ರತಿನಿಧಿಗಳು ಯಾವ ಆಡಳಿತಾತ್ಮಕ ಕೆಲಸಗಳನ್ನು ಮಾಡಲಾಗುವುದಿಲ್ಲ. ಹಾಗೆಯೇ ಚುನಾಯಿತ ಪ್ರತಿನಿಧಿಗಳಿಲ್ಲದೆ ನಾಗರಿಕ ಸೇವಾವರ್ಗವೂ ಕಾರ್ಯನೀತಿಗಳನ್ನು ಜಾರಿಗೆ ತರಲು ಆಗುವುದಿಲ್ಲ. ಜನರ ಪ್ರತಿನಿಧಿಗಳಿರುವ ಸಂಸತ್ತು ಅಧಿಕಾರಶಾಹಿ ವರ್ಗವಿಲ್ಲದೆ ಹೆಳವ, ಹಾಗೆಯೆ ಅಧಿಕಾರಶಾಹಿ ವರ್ಗವು ಸಂಸತ್ತಿಲ್ಲದೆ ಕಿವುಡು ಮತ್ತು ಕುರುಡು.

ನಾಗರಿಕ ಸೇವೆಗಳೆಂದರೆ ಆಧುನಿಕ ಪ್ರಜಾಪ್ರಭುತ್ವದ ಯಶಸ್ಸಿಗಿರುವ ಅಗತ್ಯ ಮತ್ತು ಸ್ಫೂರ್ತಿ. ಈ ಸೇವೆಗಳನ್ನು ನಿರ್ವಹಿಸುವವರು ಜೀವನದ ಸಾಕಷ್ಟು ಸಮಯವನ್ನು ಸಮುದಾಯದ ಸೇವೆಗಾಗಿ ಕಳೆಯುತ್ತಾರೆ.

ಆದರೆ, ನಾಗರಿಕ ಸೇವೆಗಳು ಜನರ ಸೇವೆಯಾಗಿದ್ದು, ಇದರಲ್ಲಿ ಜನರ ಇಷ್ಟಕ್ಕೆ ವಿರುದ್ಧವಾಗಿ ಏನನ್ನೂ ಮಾಡುವಂತಿರುವುದಿಲ್ಲ.

ನಾಗರಿಕ ಸೇವೆಗಳ ಅತಿಮುಖ್ಯ ಲಕ್ಷಣಗಳೆಂದರೆ, ವೃತ್ತಿಪರವಾಗಿ ಕಾರ್ಯನಿರ್ವಹಿಸುವುದು ಹಾಗೂ ರಾಜಕೀಯವಾಗಿ ತಟಸ್ಥವಾಗಿರುವುದು.

ಫಿನ್ನರ್‌ರವರ ಪ್ರಕಾರ ನಾಗರೀಕ ಸೇವೆಗಳ ಕಾರ್ಯಗಳು ಕೇವಲ ಸರ್ಕಾರದ ಬೆಳವಣಿಗೆಗೆ ಅಷ್ಟೇ ಸೀಮಿತವಾಗಿಲ್ಲ. ಇದಿಲ್ಲದೆ ಸರ್ಕಾರದ ಕೆಲಸಗಳು ಅಸಾಧ್ಯ.

ಲಾರ್ಡ್ ಸ್ಟ್ಯಾಂಪ್‌ರವರು ಮೊದಲು ಹೇಳಿದಂತೆ ಕಾರ್ಯನೀತಿಗಳನ್ನು ಜಾರಿಗೆ ತರುವುದಷ್ಟೆ ಇವರ ಕೆಲಸವಾಗಿರದೆ ಹೊಸ ಸಮಾಜದ ನಿರ್ಮಾಣದಲ್ಲಿ ಬಹುಮುಖ್ಯ ಪಾತ್ರವಹಿಸುತ್ತಾರೆ. ಪ್ರತೀ ಹಂತದಲ್ಲಿಯೂ ಸಲಹೆ, ಸೂಚನೆ ಮತ್ತು ಪ್ರೋತ್ಸಾಹ ಕೊಡುವ ಅಧಿಕಾರ ಹೊಂದಿದ್ದಾರೆ. ಇವರು ಪ್ರತಿಯೊಂದು ಕಾರ್ಯನೀತಿಗಳನ್ನು ಗುರುತಿಸುವಲ್ಲಿ ಮತ್ತು ಅವುಗಳನ್ನು ಜಾರಿಗೆ ತರುವಲ್ಲಿ ಬಹುಮುಖ್ಯ ಪಾತ್ರವಹಿಸುತ್ತಾರೆ.

**ಲಕ್ಷಣಗಳು**

**೧. ನಿಷ್ಪಕ್ಷಪಾತ ನೀತಿ**

೧. ನಾಗರಿಕ ಸೇವಾ ಸಿಬ್ಬಂದಿಗಳ ಈ ನಿಯಮ/ಕಾನೂನಿನ ಮುಂದೆ ಎಲ್ಲರೂ ಸಮಾನರು ಎನ್ನುವ ತತ್ವದ ಮೇಲೆ ನಿಂತಿದೆ. ಈ ವಿಷಯದಲ್ಲಿ ಇದು ಖಾಸಗಿ ಸಿಬ್ಬಂದಿಯವರಿಗಿಂತ ಭಿನ್ನವಾಗಿದೆ.

೨. ಇವರು ದೇಶವನ್ನು ಒಡೆಯುವಂತಹ ಯಾವುದೇ ವಿಷಯದಲ್ಲಿ ಪಾತ್ರ ತೆಗೆದು ಕೊಳ್ಳುವಂತಿಲ್ಲ/ಪಾಲ್ಗೊಳ್ಳುವಂತಿಲ್ಲ. ಈ ವಿಷಯಗಳಲ್ಲಿ ಮೇಲುನೋಟಕ್ಕಾದರೂ ಇವರು ಇವೆಲ್ಲವುಗಳಿಂದ ದೂರವಿರುವುದು ಬಹಳ ಪ್ರಮುಖವಾದುದಾಗಿದೆ.

೩. ಯಾವುದೇ ಪಕ್ಷ ಅಧಿಕಾರದಲ್ಲಿದ್ದರೂ ಕೂಡ ನಾಗರೀಕ ಸೇವಾ ಸಿಬ್ಬಂದಿ ವರ್ಗವು ಸಮಾನತೆಯ ಆಧಾರದ ಮೇಲೆ ಪ್ರಾಮಾಣಿಕವಾಗಿ ಕೆಲಸಮಾಡಲು ಮಾನಸಿಕವಾಗಿ ಸಿದ್ಧರಿರಬೇಕು, ಯಾವುದೇ ಪಕ್ಷದ ಪರವಾಗಿ ಅಥವಾ ವಿರುದ್ಧವಾಗಿ ಕೆಲಸ ಮಾಡಬಾರದು.

೪. ರಾಜಕೀಯ ನಾಯಕರೊಂದಿಗೆ ಈ ಅಧಿಕಾರಶಾಹಿ ವರ್ಗವು ಅನಾಮಧೇಯತ್ವದಿಂದ ಕೆಲಸ ಮಾಡಬೇಕು. ಪಕ್ಷದ ಒಡೆಯುವಂತಹ ವಿಷಯಗಳಲ್ಲಿ ಇವರು ಯಾವುದೇ ಪಾತ್ರವನ್ನೂ ವಹಿಸಕೂಡದು.

೫. ನಾಗರಿಕ ಸೇವೆಗಳು ಖಾಸಗಿ ಸೇವೆಗಳಂತೆ ಲಾಭಕ್ಕಾಗಿ ಇರದೆ, ಜನರ ಸೇವೆಗಾಗಿ ಇರುತ್ತವೆ.

೬. ನಾಗರಿಕ ಸೇವೆಗಳು ಸಾರ್ವಜನಿಕವಾಗಿದ್ದು, ಇವರ ಕೆಲಸ-ಕಾರ್ಯಗಳು ಪರಿಶೀಲನೆಗೆ ಒಳಪಡುತ್ತವೆ.

೭. ಖಾಸಗೀ ಸಂಸ್ಥೆಗಳು ಹೇಗೆ ತನ್ನ ಶೇರುದಾರರಿಗೆ ಜವಾಬ್ದಾರವಾಗಿರುತ್ತವೆಯೋ, ಹಾಗೆಯೇ ಇವರು ಸಂಸತ್ತಿಗೆ ಜವಾಬ್ದಾರರಾಗಿರುತ್ತಾರೆ.

೮. ನಾಗರಿಕ ಸೇವೆಗಳು ತನ್ನ ಸೇವೆಯಲ್ಲಿ ಬಹಳ ಪ್ರಮುಖ ಪಾತ್ರವಹಿಸುತ್ತವೆ. ಇದು ತನ್ನ ಸಹೋದ್ಯೋಗಿಗಳೊಂದಿಗಿನ ಬಾಂಧವ್ಯಕ್ಕೆ ವಿಶೇಷ ಮಹತ್ವವನ್ನು ಕೊಡುತ್ತದೆ. ಇವರ ಕೆಲಸ-ಕಾರ್ಯಗಳು ಹೆಚ್ಚಾಗಿ ನಡೆಯುತ್ತವೆ.

## ೭.೩ ಕೇಂದ್ರ, ರಾಜ್ಯ ಮತ್ತು ಜಿಲ್ಲಾ ಆಡಳಿತ

ಪ್ರಜಾಪ್ರಭುತ್ವ ರಾಷ್ಟ್ರವಾದ ಭಾರತದಲ್ಲಿ ಆಡಳಿತವನ್ನು ಕೇಂದ್ರೀಕರಿಸಿ ನಡೆಸಲು ಸಾಧ್ಯವಿಲ್ಲ. ವಿಕೇಂದ್ರೀಕರಣ ಪ್ರಜಾಪ್ರಭುತ್ವದ ಮೂಲ ಮಂತ್ರ. ಆದ್ದರಿಂದ ಆಡಳಿತವನ್ನು ವಿವಿಧ ಹಂತಗಳಾಗಿ ವಿಂಗಡಿಸಬೇಕಾಗುತ್ತದೆ. ಕೇಂದ್ರದಿಂದ ಮೊದಲುಗೊಂಡು ಗ್ರಾಮೀಣ ಮಟ್ಟದವರೆಗೂ ಆಡಳಿತವು ವಿಸ್ತರಿಸಿರುತ್ತದೆ. ಎಲ್ಲ ಹಂತಗಳಲ್ಲೂ ಜವಾಬ್ದಾರಿಯುತ ಆಡಳಿತವನ್ನು ತರಲು ಭಾರತದಲ್ಲಿ ಮುಖ್ಯವಾಗಿ ಕೇಂದ್ರ, ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ಆಡಳಿತವನ್ನು ಗುರುತಿಸಲಾಗಿದೆ.

### ಅ. ಕೇಂದ್ರೀಯ ಆಡಳಿತ ವ್ಯವಸ್ಥೆ

#### ರಾಷ್ಟ್ರಪತಿ

ಕೇಂದ್ರದಲ್ಲಿ ರಾಷ್ಟ್ರಪತಿಯವರು ಭಾರತ ಗಣರಾಜ್ಯದ ಮುಖ್ಯಸ್ಥರಾಗಿರುತ್ತಾರೆ. ಇದು ದೇಶದ ಅತ್ಯಂತ ಉನ್ನತ ಹುದ್ದೆಯಾಗಿರುತ್ತದೆ. ಕೇಂದ್ರ ಸರ್ಕಾರ ಇವರ ಹೆಸರಿನಲ್ಲಿ ಆಡಳಿತ ನಡೆಸುತ್ತದೆ. ಇವರು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗದ ಮುಖ್ಯಸ್ಥರಾಗಿರುತ್ತಾರೆ. ಇವರು ತಮ್ಮ ಅಧಿಕಾರವನ್ನು ಮಂತ್ರಿಮಂಡಲದ ಸಲಹೆಯ ಮೇರೆಗೆ ಚಲಾಯಿಸ ತಕ್ಕದ್ದಾಗಿರುತ್ತದೆ. ರಾಷ್ಟ್ರಪತಿಯನ್ನು ಐದು ವರ್ಷಗಳ ಅವಧಿಗಾಗಿ ಸಂಸತ್ತಿನ ಎರಡೂ ಸದನಗಳ ಹಾಗೂ ರಾಜ್ಯ ವಿಧಾನಸಭೆಗಳ ಸದಸ್ಯರು ಗುಪ್ತಮತದಾನದ ಮೂಲಕ ಆಯ್ಕೆ ಮಾಡುತ್ತಾರೆ. ಇವರು ಭೂಸೇನಾ, ವಾಯುಸೇನಾ ಮತ್ತು ಜಲಸೇನೆಯ ಮುಖ್ಯಸ್ಥರಾಗಿದ್ದು, ಯುದ್ಧ ಮತ್ತು ಶಾಂತಿಯನ್ನು ಘೋಷಿಸುವ ಅಧಿಕಾರವನ್ನು ಹೊಂದಿರುತ್ತಾರೆ. ರಾಷ್ಟ್ರಪತಿಗಳು ಪ್ರಧಾನಮಂತ್ರಿಯ ಮತ್ತು ಇನ್ನಿತರ ಮಂತ್ರಿಗಳ, ಹೈಕೋರ್ಟ್ ಮತ್ತು ಸುಪ್ರಿಂ ಕೋರ್ಟ್ ನ್ಯಾಯಾಧೀಶರನ್ನು, ಸೇನಾಪಡೆಗಳ ಸೇನಾಧಿಕಾರಿಗಳನ್ನು, ರಾಯಭಾರಿಗಳನ್ನು ಇನ್ನಿತರರನ್ನು ನೇಮಿಸುವ ಅಧಿಕಾರ ಹೊಂದಿರುತ್ತಾರೆ. ಇವರು ಕಾಲಕಾಲಕ್ಕೆ ಸಂಸತ್ತಿನ ಅಧಿವೇಶನವನ್ನು ಕರೆಯಬಹುದಾಗಿದೆ. ಎರಡು ಸದನಗಳ ಜಂಟಿ ಸಭೆಯನ್ನು ಉದ್ದೇಶಿಸಿ ಮಾತನಾಡಬಹುದಾಗಿದೆ. ಯಾವುದೇ ಮಸೂದೆ ಶಾಸನವಾಗಿ ಜಾರಿಗೆ ಬರಬೇಕಾದಲ್ಲಿ ರಾಷ್ಟ್ರಪತಿಯವರ ಅಂಕಿತ ಅಗತ್ಯವಾಗಿರುತ್ತದೆ. ಹಣಕಾಸಿನ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಲು ರಾಷ್ಟ್ರಪತಿಗಳ ಅನುಮತಿ ಪಡೆಯಬೇಕಾಗುತ್ತದೆ. ಇವರು ಸುಗ್ರೀವಾಜ್ಞೆ ಮತ್ತು ತುರ್ತುಪರಿಸ್ಥಿತಿಗಳನ್ನು ಜಾರಿಗೆ ತರುವ ವಿಶಾಲವಾದ ಅಧಿಕಾರವನ್ನು ಹೊಂದಿರುತ್ತಾರೆ. ಯಾವುದೇ ಅಪರಾಧಿಯ ಅಪರಾಧವನ್ನು ಕಡಿಮೆ/ವಜಾ/ಕಡಿತ/ಜೀವಭಿಕ್ಷೆ ನೀಡುವ ಅಧಿಕಾರ ಇವರಲ್ಲಿ ಸಹಿತಗೊಂಡಿದೆ.

#### ಉಪರಾಷ್ಟ್ರಪತಿ

ಇವರನ್ನು ಸಂಸತ್ತಿನಲ್ಲಿ ಎರಡೂ ಸದನದ ಸದಸ್ಯರುಗಳು ೫ ವರ್ಷಗಳ ಕಾಲಾವಧಿಗೆ ಆಯ್ಕೆ ಮಾಡುತ್ತಾರೆ. ರಾಷ್ಟ್ರಪತಿಗಳ ಅನುಪಸ್ಥಿತಿಯಲ್ಲಿ ಅವರ ಅಧಿಕಾರಗಳನ್ನು ಹಾಗೂ

ಕಾರ್ಯಗಳನ್ನು ಚಲಾಯಿಸಬಹುದಾಗಿರುತ್ತದೆ. ಇವರು ರಾಷ್ಟ್ರಪತಿಗಳ ಕಾರ್ಯಗಳಲ್ಲಿ ಜೊತೆಗೂಡಿ ಕಾರ್ಯನಿರ್ವಹಿಸುತ್ತಾರೆ. ಇವರು ರಾಜ್ಯಸಭೆಯ ಶಾಶ್ವತ ಸದಸ್ಯರಾಗಿರುತ್ತಾರೆ.

**ಮಂತ್ರಿಮಂಡಲ**

ಕೇಂದ್ರೀಯ ಮಂತ್ರಿಮಂಡಲವು ಪ್ರಧಾನಮಂತ್ರಿ ಹಾಗೂ ಇನ್ನಿತರ ಮಂತ್ರಿಗಳನ್ನು ಒಳಗೊಂಡಿರುತ್ತದೆ. ಸರ್ಕಾರದ ಪ್ರಮುಖ ನೀತಿಗಳನ್ನು ಈ ಮಂತ್ರಿಮಂಡಲವು ನಿರ್ಧರಿಸುತ್ತದೆ.

**ಪ್ರಧಾನಮಂತ್ರಿ**

ಪ್ರಧಾನಮಂತ್ರಿಯವರು ಸಂಸತ್ತಿನಲ್ಲಿ ಎರಡು ಸದನಗಳ ಮುಖ್ಯಸ್ಥರಾಗಿರುತ್ತಾರೆ. ಹಾಗೂ ಜವಾಬ್ದಾರರಾಗಿರುತ್ತಾರೆ. ಇವರು ಮಂತ್ರಿಮಂಡಲದ ಮುಖ್ಯಸ್ಥರಾಗಿದ್ದು, ರಾಷ್ಟ್ರಪತಿಯವರು ೫ ವರ್ಷಗಳ ಅವಧಿಯವರೆಗೆ ಇವರನ್ನು ನೇಮಕ ಮಾಡುತ್ತಾರೆ. ಎಲ್ಲಿಯವರೆಗೆ ಸಂಸತ್ತಿನಲ್ಲಿ ಬಹುಮತ ಇರುವುದೊ ಅಲ್ಲಿಯವರೆಗೆ ಅವರು ಅಧಿಕಾರದಲ್ಲಿ ಮುಂದುವರೆಯುತ್ತಾರೆ. ಪ್ರಧಾನಮಂತ್ರಿಯವರು ಅತಿ ಉನ್ನತ ಅಧಿಕಾರ ಹೊಂದಿ ಶಕ್ತಿಯ ಕೇಂದ್ರವಾಗಿರುತ್ತಾರೆ. ಪ್ರಧಾನಮಂತ್ರಿ ಯಾವುದೇ ಒಂದು ಸಂಸತ್ತಿನಲ್ಲಿ ಸದನದ ಸದಸ್ಯರು ಆಗಿರಲೇಬೇಕು. ಇವರ ಸಲಹೆಯ ಮೇರೆಗೆ ಇನ್ನಿತರ ಮಂತ್ರಿಗಳನ್ನು ನೇಮಕ ಮಾಡಲಾಗುತ್ತದೆ.

ಮಂತ್ರಿಮಂಡಲವು ಸಂಪುಟ ದರ್ಜೆ ಮಂತ್ರಿಗಳು, ರಾಜ್ಯ ದರ್ಜೆ ಮಂತ್ರಿಗಳು, ಸಹಾಯಕ ಮಂತ್ರಿಗಳನ್ನು ಒಳಗೊಂಡಿದೆ. ಸಂಪುಟ ಮಂತ್ರಿಗಳು ಕ್ಯಾಬಿನೆಟ್‌ನ ಬೇರು ಗಳಾಗಿದ್ದು, ಅವರ ಖಾತೆಗೆ ವಹಿಸಿರುವ ಇಲಾಖೆಗಳಿಗೆ ಜವಾಬ್ದಾರರಾಗಿರುತ್ತಾರೆ. ಇವರ ಖಾತೆಯ ಇಲಾಖೆಯ ನೀತಿ ನಿಯಮಗಳನ್ನು ರಚಿಸುವಲ್ಲಿ, ಜಾರಿಗೆ ತರುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ರಾಷ್ಟ್ರೀಯ ನೀತಿಗಳನ್ನು ರೂಪಿಸುವಲ್ಲಿ ಸಂಪುಟದರ್ಜೆಯ ಮಂತ್ರಿಗಳ ಪಾತ್ರ ಪ್ರಮುಖವಾದುದಾಗಿದೆ. ಇನ್ನುಳಿದಂತಹ ರಾಜ್ಯ ಮಂತ್ರಿಗಳ ಮತ್ತು ಉಪಮಂತ್ರಿಗಳು ಕ್ಯಾಬಿನೆಟ್ ದರ್ಜೆಯ ಮಂತ್ರಿಗಳ ಕಾರ್ಯದಲ್ಲಿ ಸಹವರ್ತಿಗಳಾಗಿ ವರ್ತಿಸುತ್ತಾರೆ. ಎಲ್ಲಾ ದರ್ಜೆಯ ಮಂತ್ರಿಗಳು ಸಹ ಸಂಸತ್ತಿನಲ್ಲಿ ಯಾವುದಾದರೊಂದು ಸದನದ ಸದಸ್ಯರಾಗಿರ ತಕ್ಕದ್ದು.

ಕೇಂದ್ರದಲ್ಲಿ ಕೇಂದ್ರೀಯ ಆಡಳಿತ ವ್ಯವಸ್ಥೆಯಲ್ಲಿ ಸಂಪುಟ ಸಚಿವಾಲಯ, ಆಡಳಿತಾತ್ಮಕ ಉನ್ನತ ಹಂತವನ್ನು ಹೊಂದಿದ್ದು, ಈ ಸಚಿವಾಲಯವು ಪ್ರಧಾನ ಮಂತ್ರಿಗಳ ನಿರ್ದೇಶನದಂತೆ ನಡೆಯುತ್ತದೆ. ಕೇಂದ್ರೀಯ ಆಡಳಿತದ ಕೇಂದ್ರಬಿಂದುವಾಗಿ ಪ್ರಧಾನಮಂತ್ರಿಯಿರುತ್ತಾರೆ. ಸಚಿವ ಸಂಪುಟದ ಮುಖ್ಯ ಕಾರ್ಯಗಳೆಂದರೆ:

ಸಚಿವ ಸಂಪುಟದ ಸಭೆಗೆ ಬೇಕಾದ ವಿಚಾರಗಳನ್ನು, ವಿಷಯಗಳನ್ನು ತಯಾರಿಸುವುದು, ಅಗತ್ಯ ವಿಷಯಗಳನ್ನು ಸಂಬಂಧಿಸಿದ ಕ್ಯಾಬಿನೆಟ್ ದರ್ಜೆಯ ಮಂತ್ರಿಗಳಿಗೆ ಒದಗಿಸುವುದು, ತಯಾರಿಸಿದ ಕರಡನ್ನು ಸಂಪುಟ ಸಭೆಯಲ್ಲಿಟ್ಟು ಅನುಮೋದನೆ ಪಡೆಯುವುದು, ಸಚಿವರು

ಮತ್ತು ಇಲಾಖೆಗೆ ಸಂಬಂಧಿಸಿದ ಸರ್ಕಾರದ ವ್ಯವಹಾರಗಳ ಬಗ್ಗೆ ಪ್ರಧಾನಮಂತ್ರಿಯವರಿಂದ ಮತ್ತು ರಾಷ್ಟ್ರಪತಿಯವರಿಂದ ಅನುಮೋದನೆ ಪಡೆಯುವುದು ಇತ್ಯಾದಿ.

ರಾಷ್ಟ್ರಪತಿ, ಉಪರಾಷ್ಟ್ರಪತಿ, ಕೇಂದ್ರ ಮಂತ್ರಿಮಂಡಲ ಇವುಗಳನ್ನು ಒಟ್ಟಾಗಿ ರಾಜಕೀಯ ಕಾರ್ಯಾಂಗ ಎಂದು ಕರೆಯಲಾಗುತ್ತದೆ. ನಾಗರಿಕ ಸೇವಾ ಸಿಬ್ಬಂದಿಯನ್ನು ನೈಜ ಕಾರ್ಯಾಂಗ ಎಂದು ಕರೆಯುತ್ತಾರೆ. ನಾವು ಇದುವರೆಗೂ ರಾಜಕೀಯ ಕಾರ್ಯಾಂಗವನ್ನು ಗಮನಿಸಿದ್ದೇವೆ. ಈಗ ನೈಜ ಕಾರ್ಯಾಂಗದ ಸ್ವರೂಪವನ್ನು ನೋಡೋಣ.

**ಸಚಿವ ಸಂಪುಟದ ಕಾರ್ಯದರ್ಶಿ**

ಇವರು ನಾಗರಿಕ ಸೇವೆಗಳ ಹುದ್ದೆಗಳಲ್ಲಿಯೇ ಅತ್ಯಂತ ಉನ್ನತ ಪದವಿ ಹೊಂದಿದವರಾಗಿರುತ್ತಾರೆ. ಸಚಿನ ಸಂಪುಟ ಕಾರ್ಯದರ್ಶಿಯವರು ಸಂಪುಟ ಸಚಿವಾಲಯದ ಮುಖ್ಯಸ್ಥರಾಗಿರುತ್ತಾರೆ. ಇವರು ಪ್ರಧಾನಮಂತ್ರಿಯವರ ಮತ್ತು ಮಂತ್ರಿಮಂಡಲದ ಹಾಗೂ ಸಮಿತಿಗಳ ಆಪ್ತ ಸಲಹೆಗಾರರಾಗಿತ್ತಾರೆ. ನಾಗರಿಕ ಚಟುವಟಿಕೆಗಳ ಮತ್ತು ನೀತಿಗಳನ್ನು ರೂಪಿಸುವಲ್ಲಿ ಹಾಗೂ ಜಾರಿಗೆ ತರುವಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ಇವರು ರಾಜಿಕೀಯ ಕಾರ್ಯಾಂಗ ಹಾಗೂ ನೈಜ ಕಾರ್ಯಾಂಗದ ನಡುವಿನ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಾರೆ.

ಕೇಂದ್ರೀಯ ಸಚಿವಾಲಯ ಅತ್ಯಂತ ದೊಡ್ಡ ಮತ್ತು ಸಂಕೀರ್ಣ ಸಂಸ್ಥೆಯಾಗಿ ಸಚಿವಾಲಯ ಹಾಗೂ ಇಲಾಖೆಗಳನ್ನು ಒಳಗೊಂಡಿದೆ. ಕೇಂದ್ರ ಮಂತ್ರಿಮಂಡಲ ಅತಿ ವಿಸ್ತಾರವಾದ ವಿವಿಧ ಇಲಾಖೆಯ ಮಂತ್ರಿಗಳನ್ನು ಒಳಗೊಂಡಿದ್ದು, ಪ್ರತಿಸಚಿವಾಲಯವು ಒಬ್ಬೊಬ್ಬರು ಕಾರ್ಯದರ್ಶಿಗಳನ್ನು ಒಳಗೊಂಡಿದೆ. ಈ ಕಾರ್ಯದರ್ಶಿಗೆ ಸಹಾಯಕರಾಗಿ ಜಂಟಿ ಕಾರ್ಯದರ್ಶಿಗಳು, ಉಪಕಾರ್ಯದರ್ಶಿಗಳು, ಸಹಾಯಕ ಕಾರ್ಯದರ್ಶಿಗಳು ಇರುತ್ತಾರೆ. ಸಹಾಯಕ ಕಾರ್ಯದರ್ಶಿಗಳ ಕೆಳಹಂತದಲ್ಲಿ ವಿಭಾಗೀಯ ಅಧಿಕಾರಿಗಳು, ಸಹಾಯಕರು, ಗುಮಾಸ್ತರು ಕಾರ್ಯನಿರ್ವಹಿಸುತ್ತಾರೆ.

ಈ ಮೇಲಿನವುಗಳಲ್ಲದೆ ಆಡಳಿತವು ಅತ್ಯಂತ ಸೂಕ್ತವಾಗಿಯು ವ್ಯವಸ್ಥಿತವಾಗಿಯು ಯಾವುದೇ ಒತ್ತಡವಿಲ್ಲದೆ ಜನಸಾಮಾನ್ಯರಿಗೆ ಸೇವೆ ಸಲ್ಲಿಸುವ ಉದ್ದೇಶದಿಂದ ಸರ್ಕಾರವು ಕೆಲವು ಸ್ವತಂತ್ರ ಮತ್ತು ಸಂಯುಕ್ತ ಸಂಸ್ಥೆಗಳ ಮೂಲಕ ಆಡಳಿತವನ್ನು ನಡೆಸುತ್ತಿದೆ. ಈ ಸಂಯುಕ್ತ ಸಂಸ್ಥೆಗಳು ಯಾವುದೇ ಬಾಹ್ಯ ಒತ್ತಡವಿಲ್ಲದೆ ಕಾರ್ಯನಿರ್ವಹಿಸಲು ಅನುಕೂಲಕರವಾಗಿದೆ. ಇಂತಹ ಸಂಯುಕ್ತ ಸಂಸ್ಥೆಗಳು ಮತ್ತು ಮಂಡಳಿಗಳು ಮತ್ತು ಆಯೋಗಗಳಲ್ಲಿ ಪ್ರಮುಖವಾಗಿ ಹಣಕಾಸು ಆಯೋಗ, ಯೋಜನಾ ಆಯೋಗ, ಚುನಾವಣಾ ಆಯೋಗ, ನಾಗರಿಕಸೇವಾ ಆಯೋಗಗಳು ಹಾಗೂ ರೈಲ್ವೆ ಮಂಡಳಿಗಳು, ಪ್ರಮುಖವಾದವು.

**ಆ. ರಾಜ್ಯ ಆಡಳಿತ ವ್ಯವಸ್ಥೆ**

ರಾಜ್ಯದ ಆಡಳಿತ ವ್ಯವಸ್ಥೆಯು ಹೆಚ್ಚು ಕಡಿಮೆ ಕೇಂದ್ರದ ಆಡಳಿತದ ಮಾದರಿಯಲ್ಲೆ ಇರುತ್ತದೆ. ರಾಜ್ಯಪಾಲರು ರಾಜ್ಯದ ಮೊದಲ ಪ್ರಜೆಯಾಗಿದ್ದು, ಇವರನ್ನು ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ. ಇವರು ಕೇಂದ್ರ ಮತ್ತು ರಾಜ್ಯದ ನಡುವಿನ ಕೇಂದ್ರ ಸೇತುವೆಯಾಗಿ

ಕಾರ್ಯನಿರ್ವಹಿಸುತ್ತಾರೆ. ಇವರ ಅಧಿಕಾರವಧಿ ೫ ವರ್ಷಗಳದ್ದಾಗಿರುತ್ತದೆ. ಇವರನ್ನು ಕೆಲವು ನಿರ್ದಿಷ್ಟ ಕಾರಣಗಳಿಗೆ ಪದಚ್ಯುತಗೊಳಿಸಬಹುದು. ಇವರು ರಾಜ್ಯ ಶಾಸನಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕರನ್ನು ಮುಖ್ಯಮಂತ್ರಿಯವರನ್ನಾಗಿ ನೇಮಕ ಮಾಡುತ್ತಾರೆ. ರಾಜ್ಯಪಾಲರು ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಮುಖ್ಯಮಂತ್ರಿ ಮತ್ತು ರಾಜ್ಯಮಂತ್ರಿ ಮಂಡಲಗಳಿಗೆ ಸಲಹೆ ಸೂಚನೆಗಳನ್ನು ನೀಡುತ್ತಾರೆ. ರಾಜ್ಯ ಸರ್ಕಾರವು ಇವರ ಹೆಸರಿನಲ್ಲಿ ನಡೆಸಲ್ಪಡುತ್ತದೆ. ರಾಜ್ಯ ಸರ್ಕಾರವು ರಾಜ್ಯ ಪಟ್ಟಿಯಲ್ಲಿ ಬರುವ ವಿಷಯಗಳನ್ನು ಮಾತ್ರ ಕಾನೂನನ್ನು ಮಾಡಬಹುದು. ನಮ್ಮ ಸಂವಿಧಾನದಲ್ಲಿ ಆಡಳಿತ ವಿಭಜನೆಗೋಸ್ಕರ ಮೂರು ಪಟ್ಟಿಯನ್ನು ಮಾಡಲಾಗಿದೆ (ಕೇಂದ್ರ, ರಾಜ್ಯ ಹಾಗೂ ಸಮವರ್ತಿ ಪಟ್ಟಿಗಳು). ಸದನದಲ್ಲಿ ಮಂಡಿಸಿದ ಮಸೂದೆಯು ಕಾನೂನು ರೂಪು ಪಡೆಯಲು ರಾಜ್ಯಪಾಲರ ಅಂಕಿತ ಅಗತ್ಯ. ಇವರು ಸುಗ್ರೀವಾಜ್ಞೆಗಳನ್ನು ಹೊರಡಿಸುವ ವಿಶಾಲವಾದ ಅಧಿಕಾರ ವ್ಯಾಪ್ತಿಯನ್ನು ಹೊಂದಿದ್ದಾರೆ. ಇವರು ರಾಜ್ಯದ ವಿಶ್ವವಿದ್ಯಾಲಯಗಳ ಕುಲಾಧಿಪತಿಗಳಾಗಿದ್ದು, ವಿಶ್ವ ವಿದ್ಯಾಲಯಗಳ ಕುಲಪತಿಗಳನ್ನು ನೇಮಿಸುವ ಅಧಿಕಾರ ಹೊಂದಿರುತ್ತಾರೆ. ಆದರೆ, ಈ ಎಲ್ಲಾ ನೇಮಕಾತಿಗಳು ಮಂತ್ರಿ ಮಂಡಲದ ಸಲಹೆ ಮೇರೆಗೆ ನಡೆಯುತ್ತವೆ.

## ಮುಖ್ಯಮಂತ್ರಿ

ರಾಜ್ಯ ಶಾಸನಸಭೆಯಲ್ಲಿ ಬಹುಮತ ಪಡೆದ ಪಕ್ಷದ ನಾಯಕರನ್ನು ಮುಖ್ಯಮಂತ್ರಿಗಳನ್ನಾಗಿ ರಾಜ್ಯಪಾಲರು ನೇಮಕ ಮಾಡುತ್ತಾರೆ. ರಾಜ್ಯಪಾಲರ ಸಲಹೆಯ ಮೇರೆಗೆ ಇನ್ನುಳಿದ ಮಂತ್ರಿಗಳನ್ನು ನೇಮಿಸುತ್ತಾರೆ. ಮುಖ್ಯಮಂತ್ರಿ ಯಾವುದಾದರೊಂದು ಸದನದ ಸದಸ್ಯರಾಗಿರತಕ್ಕದ್ದು, ಇಲ್ಲವೆ ನೇಮಕಗೊಂಡ ೬ ತಿಂಗಳಲ್ಲಿ ಸದಸ್ಯರಾಗಿ ಆಯ್ಕೆ ಯಾಗಬೇಕು.

ಮುಖ್ಯಮಂತ್ರಿ ವಿಧಾನಸಭೆ ಮತ್ತು ವಿಧಾನಪರಿಷತ್ತಿನ ಸಭಾನಾಯಕರಾಗಿದ್ದು, ಎರಡೂ ಸದನಗಳಿಗೆ ಜವಾಬ್ದಾರರಾಗಿರುತ್ತಾರೆ. ಹಾಗೂ ಮಂತ್ರಿಮಂಡಲದ ನಾಯಕರೂ ಇವರೇ ಆಗಿರುತ್ತಾರೆ. ಮುಖ್ಯಮಂತ್ರಿ ರಾಜ್ಯದ ಆಡಳಿತದ ನಾಯಕರಾಗಿ ಕಾರ್ಯ ನಿರ್ವಹಿಸುತ್ತಾರೆ. ಇವರ ಅಧಿಕಾರವಧಿ ಐದು ವರ್ಷಗಳಾಗಿದ್ದು, ಸದನದಲ್ಲಿ ಎಲ್ಲಿಯವರೆಗೆ ಬಹುಮತ ವಿರುವುದೊ ಅಲ್ಲಿಯವರೆಗೆ ಅಧಿಕಾರದಲ್ಲಿ ಮುಂದುವರಿಯುತ್ತಾರೆ. ಇವರ ಮುಖ್ಯ ಕರ್ತವ್ಯಗಳೆಂದರೆ, ರಾಜ್ಯದ ಆಡಳಿತದಲ್ಲಿ ಮಂತ್ರಿಮಂಡಲ ತೆಗೆದುಕೊಳ್ಳುವ ನಿರ್ಧಾರಗಳನ್ನು ರಾಜ್ಯಪಾಲರೊಂದಿಗೆ ಸಮಾಲೋಚಿಸುವುದು, ರಾಜ್ಯಪಾಲರು ಆಡಳಿತಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಕೋರಿದಾಗ ಅದನ್ನು ಒದಗಿಸುವುದು.

## ರಾಜ್ಯಮಂತ್ರಿಮಂಡಲ

ಇದು ಮುಖ್ಯಮಂತ್ರಿ ಮತ್ತು ಮಂತ್ರಿಗಳನ್ನೊಳಗೊಂಡಿದೆ. ಮಂತ್ರಿಮಂಡಲಕ್ಕೆ ಮಂತ್ರಿಗಳನ್ನು ತೆಗೆದುಕೊಳ್ಳುವ ಸಂಪೂರ್ಣ ಅಧಿಕಾರ ಮುಖ್ಯಮಂತ್ರಿಗಳಿಗೆ ಸೇರಿದ್ದಾಗಿದೆ. ಮಂತ್ರಿಮಂಡಲವು ಕಾಲಕಾಲಕ್ಕೆ ಸಭೆ ನಡೆಸಿ ರಾಜ್ಯದ ನೀತಿಗಳನ್ನು ಜಾರಿಗೆ ತರುತ್ತದೆ. ಮಂತ್ರಿಗಳು ಯಾವುದಾದರೊಂದು ಸದನದ ಸದಸ್ಯರಾಗಿರಲೇಬೇಕು. ಇಲ್ಲವೇ

ನೇಮಕಗೊಂಡ ಆರು ತಿಂಗುಳಗಳಲ್ಲಿ ಸದಸ್ಯರಾಗಿ ಆಯ್ಕೆಗೊಳ್ಳತಕ್ಕದ್ದು. ವಿಧಾನಸಭೆಗೆ ಮಂತ್ರಿಗಳು ವೈಯಕ್ತಿಕವಾಗಿ ಹಾಗೂ ಜಂಟಿಯಾಗಿ ಜವಾಬ್ದಾರರಾಗಿರುತ್ತಾರೆ. ಯಾವುದೇ ಮಂತ್ರಿಯು ತನ್ನ ಸರ್ಕಾರವು ಜಾರಿಗೆ ತಂದ ನೀತಿಯನ್ನು ಟೀಕಿಸುವಂತಿಲ್ಲ. ಪ್ರತಿ ಮಂತ್ರಿಯೂ ಸಹ ಒಟ್ಟಿಗೆ ತೆಗೆದುಕೊಂಡ ಮಂತ್ರಿಮಂಡಲದ ತೀರ್ಮಾನಕ್ಕೆ ಬದ್ಧರಾಗಿರತಕ್ಕದ್ದು ಇದಕ್ಕೆ ವ್ಯತಿರಿಕ್ತವಾಗಿ ಯಾವ ಮಂತ್ರಿಯು ನಡೆದುಕೊಳ್ಳುವಂತಿಲ್ಲ. ಇದನ್ನು ಸಾಂಘಿಕ ಜವಾಬ್ದಾರಿ (Collective Responsibility) ಎಂದು ಕರೆಯಲಾಗುತ್ತದೆ. ಶಾಸನಸಭೆಯಲ್ಲಿ ಎಲ್ಲಿಯ ವರೆಗೆ ಸರ್ಕಾರಕ್ಕೆ ಬಹುಮತವಿರುತ್ತದೆಯೋ ಅಲ್ಲಿಯವರೆಗೆ ಮಂತ್ರಿಮಂಡಲವು ಅಧಿಕಾರ ದಲ್ಲಿರುತ್ತದೆ. ಮಂತ್ರಿಮಂಡಲವು ರಾಜ್ಯದ ಜನತೆಯ ಹಿತಾಸಕ್ತಿಗಳಿಗನುಗುಣವಾಗಿ ಕಾರ್ಯ ನಿರ್ವಹಿಸುತ್ತದೆ.

### ಮುಖ್ಯಕಾರ್ಯದರ್ಶಿ

ರಾಜ್ಯದ ಆಡಳಿತದಲ್ಲಿ ಮುಖ್ಯ ಕಾರ್ಯದರ್ಶಿ ಪ್ರಮುಖರಾಗಿರುತ್ತಾರೆ. ರಾಜ್ಯದ ನಾಗರಿಕ ಸೇವಾ ಹುದ್ದೆಗಳಲ್ಲಿ ಅತ್ಯಂತ ಉನ್ನತ ಹುದ್ದೆ ಇದಾಗಿರುತ್ತದೆ. ಇವರು ಮಂತ್ರಿಮಂಡಲದ ವಿವಿಧ ಇಲಾಖೆಗಳ ನೀತಿ-ನಿಯಮಗಳನ್ನು ರೂಪಿಸುವಲ್ಲಿ, ಜಾರಿಗೆ ತರುವಲ್ಲಿ ಪ್ರಮುಖ ಪಾತ್ರವಹಿಸುತ್ತಾರಲ್ಲದೆ, ಮುಖ್ಯಮಂತ್ರಿಗಳ ಹಾಗೂ ವಿವಿಧ ಇಲಾಖಾ ಸಚಿವರುಗಳ ಮತ್ತು ಇಲಾಖೆಗಳ ನಡುವಿನ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಾರೆ. ರಾಜ್ಯದ ಎಲ್ಲಾ ಇಲಾಖೆಗಳು ಇವರ ವ್ಯಾಪ್ತಿಯೊಳಗೆ ಬರುತ್ತವೆ.

ಮುಖ್ಯ ಕಾರ್ಯದರ್ಶಿಗೆ ಸಹಾಯಕರಾಗಿ, ಕಾರ್ಯದರ್ಶಿಗಳು, ಆಪ್ತಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಸಹಾಯಕ ಕಾರ್ಯದರ್ಶಿಗಳು ಕಾರ್ಯನಿರ್ವಹಿಸುತ್ತಾರೆ.

ಪ್ರತಿ ಸಚಿವಾಲಯಕ್ಕೂ ಸಹ ಕಾರ್ಯದರ್ಶಿಗಳು, ಸಹಾಯಕ ಕಾರ್ಯದರ್ಶಿಗಳ ಮಂತ್ರಿಗಳ ಸಹಾಯಕ್ಕಾಗಿ ಇರುತ್ತಾರೆ. ಇವರು ಆಡಳಿತ ಯಂತ್ರವು ಸುಗಮವಾಗಿ ನಡೆಯಲು ಹಾಗೂ ನೀತಿ ರೂಪಿಸಲು ಮಸೂದೆ ತರುವಲ್ಲಿ, ಕಾನೂನು ರೂಪಿಸುವಲ್ಲಿ ಸಹಾಯ ಮಾಡುತ್ತಾರೆ.

ಸರ್ಕಾರದ ಆಡಳಿತವು ವ್ಯವಸ್ಥಿತವಾಗಿ ನಡೆಯಲು ಇವರ ಸಹಾಯ-ಸಹಕಾರ ಅಗತ್ಯವಾಗಿರುತ್ತದೆ.

### ಇ. ಜಿಲ್ಲಾಡಳಿತ ವ್ಯವಸ್ಥೆ

ಭಾರತದಲ್ಲಿ ಜಿಲ್ಲಾಡಳಿತ ಕಲ್ಪನೆ ಇಂದಿನದಲ್ಲ. ಇದು ಪ್ರಾಚೀನ ಕಾಲದಿಂದಲೂ ಇರುವ ವ್ಯವಸ್ಥೆಯಾಗಿದೆ. ಮನುವಿನ ಕಾಲದಲ್ಲೂ ಕೂಡಾ ಅಸ್ತಿತ್ವದಲ್ಲಿತ್ತು. ಆಗ ಸಾವಿರ ಹಳ್ಳಿಯ ಸಮುಚ್ಛಯವನ್ನು ಜಿಲ್ಲೆ ಎಂದು ಗುರುತಿಸಲಾಗುತ್ತಿತ್ತು. ಅದೇ ರೀತಿ ಇಂದು ಕೂಡಾ ಜಿಲ್ಲೆಯ ಆಡಳಿತದ ಒಳಗೆ ಸಾವಿರ ಹಳ್ಳಿಗಳು ಬರುತ್ತವೆ. ಪ್ರಸ್ತುತದಲ್ಲಿ ಜಿಲ್ಲೆಯ ಆಡಳಿತ ವ್ಯವಸ್ಥೆಯು ಮೌರ್ಯರ ಯುಗದಲ್ಲಿದ್ದ ವ್ಯವಸ್ಥೆಯ ಸಾಮಾನ್ಯ ಲಕ್ಷಣವನ್ನು ಹೊಂದಿದೆ. ಈಸ್ಟ್ ಇಂಡಿಯಾ ಕಂಪನಿಯು ೧೭೭೨ರಲ್ಲಿ ಕಲೆಕ್ಟರ್ ಕಛೇರಿಯನ್ನು

ಸೃಷ್ಟಿಸಿತ್ತು. ಅದಕ್ಕೆ ಹೆಚ್ಚಿನ ಅಧಿಕಾರ ಕೊಡುವ ಮೂಲಕ ಮುಘಲ್ ಆಡಳಿತಕ್ಕೆ ಮುಖಾಮುಖಿಯಾಗಿ ನಿಲ್ಲಿಸಿತು. ಈ ಕಲೆಕ್ಟರ್ ಕಂದಾಯ ವಸೂಲಿ ಮಾಡುವ ಮತ್ತು ನ್ಯಾಯ ತೀರ್ಮಾನ ಮಾಡುವ ಅಧಿಕಾರ ಹೊಂದಿದ್ದರು. ಈ ರೀತಿಯಾಗಿ ಭಾರತದಲ್ಲಿ ಜಿಲ್ಲಾಡಳಿತ ಬೆಳೆದು ಬಂದ ದಾರಿಯಾಗಿದೆ. .

**ಜಿಲ್ಲಾಡಳಿತದ ಬಗ್ಗೆ ವ್ಯಾಖ್ಯಾನಗಳು**

**ಪ್ರೊ. ಪಾಟರ್** ಅವರ ಪ್ರಕಾರ ಸರ್ಕಾರ ತನ್ನ ಕಾರ್ಯ ಚಟುವಟಿಕೆಯನ್ನು, ರಾಜ್ಯ ಸರ್ಕಾರದ ನಿರ್ದಿಷ್ಟ ಕ್ಷೇತ್ರವಾಗಿ ಗುರುತಿಸಿದ ಜಿಲ್ಲೆಗಳ ಮೂಲಕ ನಿರ್ವಹಿಸುವುದು.

**ಖೇರ್** ಅವರ ಅಭಿಪ್ರಾಯದಂತೆ ಸರ್ಕಾರದ ಎಲ್ಲಾ ಕಾರ್ಯಗಳನ್ನು ಜಿಲ್ಲೆಯ ಮೂಲಕ ಜಿಲ್ಲಾಡಳಿತ ಸಂಪೂರ್ಣವಾಗಿ ನಿಭಾಯಿಸುವುದು.

**ಸರ್ ವಿಲಿಯಂ ಹಂಟರ್** ಅವರ ಅಭಿಪ್ರಾಯದಂತೆ ಜಿಲ್ಲಾಡಳಿತವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿದ್ದಾರೆ.

* ಕಲೆಕ್ಟರ್ ಮತ್ತು
* ಮ್ಯಾಜಿಸ್ಟ್ರೇಟ್

ಕಲೆಕ್ಟರ್ ಆಗಿ, ಕ್ಷೇತ್ರ ಅಧಿಕಾರಿಯಾಗಿ, ಕಂದಾಯ ವಸೂಲಿ ಮಾಡುವುದು ಮತ್ತು ಇತರ ಮೂಲದ ಹಣ ಸಂಗ್ರಹಿಸುವ ಕಾರ್ಯನಿರ್ವಹಿಸಿದರೆ ಮತ್ತು ಮ್ಯಾಜಿಸ್ಟ್ರೇಟ್ ಆಗಿ ಕಂದಾಯ ಮತ್ತು ಕ್ರಿಮಿನಲ್ ನ್ಯಾಯವಾದಿಯಾಗಿ ಕೂಡಾ ಕಾರ್ಯ ನಿರ್ವಹಿಸಬೇಕಾಗುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ಜಿಲ್ಲಾಧಿಕಾರಿಯು ವಕೀಲರಾಗಿ, ಲೆಕ್ಕ-ಪತ್ರ ನೋಡಿ ಕೊಳ್ಳುವವರಾಗಿ, ಹಣಕಾಸುದಾರರಾಗಿ, ಇದರ ಜೊತೆಗೆ ಕೃಷಿ ಅರ್ಥಶಾಸ್ತ್ರ, ರಾಜಕೀಯ ಜ್ಞಾನ ಕೂಡ ಹೊಂದಿರಬೇಕಾಗುತ್ತದೆ.

ಭಾರತದಲ್ಲಿ ಜಿಲ್ಲೆಯು ಅಡಳಿತದ ಅವಿಭಾಜ್ಯ ಅಂಗವಾಗಿದೆ. ಡೆಪ್ಯೂಟಿ ಕಮಿಷನರ್ ಜಿಲ್ಲೆಯ ಕಣ್ಣಾಗಿದ್ದಾರೆ. ಜಿಲ್ಲಾ ಆಡಳಿತವು ತುಂಬಾ ವಿಶಾಲವಾಗಿ ಹಬ್ಬಿದೆ ಮತ್ತು ಲಕ್ಷಾಂತರ ಜನರನ್ನು ವಿವಿಧ ಹಂತಗಳಲ್ಲಿ ತಲುಪುತ್ತದೆ. ಇದರ ದಕ್ಷತೆ, ಒಗ್ಗಟ್ಟು ತುಂಬಾ ಮುಖ್ಯವಾದ ಅಂಶವಾಗಿದೆ. ಸಮುದಾಯ ಅಭಿವೃದ್ಧಿ ಚಳುವಳಿಗಳ ಪರಿಚಯ ಮಾಡಿಕೊಡುವ ಮೂಲಕ ಮಹತ್ತರವಾದ ಬದಲಾವಣೆಯನ್ನು ಮೂಲಭೂತ ಗುರಿಗಳನ್ನು ಜಿಲ್ಲಾ ಆಡಳಿತದಲ್ಲಿ ತಂದು ರಾಜ್ಯವು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಕಾರಣವಾಗುತ್ತದೆ.

ಐದನೇ ಯೋಜನಾ ಅವಧಿಯಲ್ಲಿ ವಿಕೇಂದ್ರೀಕರಣಕ್ಕೆ ಸಂಬಂಧಿಸಿದ ಕೆಲವು ಬೇಡಿಕೆ ಗಳನ್ನು ತರಲಾಯಿತು. ಇದರಿಂದಾಗಿ ಅಭಿವೃದ್ಧಿ ಕಾರ್ಯಕ್ರಮ ಕಾರ್ಯಗತಗೊಳಿಸಲು, ಯಶಸ್ವಿ ಗೊಳಿಸಲು ಜನರ ಸಹಕಾರವು ಅತ್ಯಂತ ಅವಶ್ಯವಾಗಿರುತ್ತದೆ.

**ಜಿಲ್ಲಾಡಳಿತ ಮಹತ್ವ**

- ಸಾಮಾನ್ಯ ಆಡಳಿತದ ಚಟುವಟಿಕೆಯನ್ನು ಉತ್ತಮ ಪಡಿಸುವುದು ಮತ್ತು ಬಲ ಪಡಿಸುವುದು.

• ವಿವಿಧ ಅಭಿವೃದ್ಧಿ ಇಲಾಖೆಗಳ ಮಧ್ಯೆ ಒಗ್ಗಟ್ಟು ಸಾಧಿಸಲು ಜಿಲ್ಲಾಡಳಿತ ಶ್ರಮಿಸುವುದು.
• ಅಭಿವೃದ್ಧಿ ಕಾರ್ಯಕ್ರಮ ಕಾರ್ಯಗತಗೊಳಿಸಲು ಸ್ಥಳೀಯ ಸ್ವಯಂ-ಸರ್ಕಾರಗಳ ಮಧ್ಯೆ ಉತ್ತಮ ಬಾಂಧವ್ಯ ವೃದ್ಧಿಸಲು ಅವುಗಳ ಮಧ್ಯೆ ಸೇತುವೆಯಾಗುವುದು.

ಜಿಲ್ಲೆಯನ್ನು ಉಪ ವಿಭಾಗಗಳಾಗಿ ವಿಂಗಡಿಸಲಾಗಿರುತ್ತದೆ. ಈ ಉಪ ವಿಭಾಗಗಳು ಐ.ಎ.ಎಸ್. ಅಧಿಕಾರಿ ಅಥವಾ ರಾಜ್ಯ ನಾಗರಿಕ ಸೇವೆಯ ಪ್ರಥಮ ಶ್ರೇಣೀಯ ಅಧಿಕಾರಿ ನೋಡಿಕೊಳ್ಳುತ್ತಾರೆ. ಈ ಅಧಿಕಾರಿಗಳು ಉಪ ವಿಭಾಗ ಮ್ಯಾಜಿಸ್ಟ್ರೇಟ್ ಎಸ್.ಡಿ.ಎಮ್ ಅಥವಾ ಉಪ ವಿಭಾಗ ಅಧಿಕಾರಿ ಎಂದು ಕರೆಯಲ್ಪಡುತ್ತಾರೆ.

ಉಪವಿಭಾಗಗಳನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ.

* ಕಛೇರಿಯ ಮಾದರಿಯ ಉಪ ವಿಭಾಗಗಳು
* ಕ್ಷೇತ್ರಕಾರ್ಯ ಮಾದರಿಯ ಉಪ ವಿಭಾಗಗಳು

**ಕ್ಷೇತ್ರಕಾರ್ಯ ಮಾದರಿಯ ಎಸ್.ಡಿ.ಎಂ.**

ಇದು ಕಛೇರಿಯನ್ನು ನೋಡಿಕೊಳ್ಳುವುದಿಲ್ಲ. ಪ್ರವಾಸ ಕೈಗೊಳ್ಳುವ ಮೂಲಕ ಕಾರ್ಯ ನಿರ್ವಹಿಸುತ್ತದೆ. ಇದರ ಕಾರ್ಯವೆಂದರೆ, ಜನರನ್ನು ಸಂಪರ್ಕಿಸುವುದು. ಅಧೀನ ಅಧಿಕಾರಿಗಳ ಮೇಲ್ವಿಚಾರಣೆ ಮಾಡುವುದು. ಉಪವಿಭಾಗಗಳಲ್ಲಿ ಸರ್ಕಾರದ ಚಟುವಟಿಕೆಯ ಆಗು-ಹೋಗುಗಳನ್ನು ನೋಡಿಕೊಳ್ಳುವುದು.

ಈ ಎಸ್.ಡಿ.ಎಮ್. ಪ್ರಾಥಮಿಕವಾಗಿ ಮಾಡುವ ಕಾರ್ಯಗಳೆಂದರೆ

* ಪರೀಕ್ಷೆ
* ವೀಕ್ಷಣೆ
* ಅಧಿಕಾರಿಗಳ ಮೇಲ್ವಿಚಾರಣೆ
* ಮನವಿ ಆಲಿಸುವುದು ಮತ್ತು ಪರಿಹಾರ ನೀಡುವುದು
* ಗ್ರಾಮಗಳಲ್ಲಿ ಕಾರ್ಯನಿರ್ವಹಿಸುವ ಮೂಲಕ ಅನುಭವ ಪಡೆಯುವುದು.

**ಉಪ ವಿಭಾಗ ಕಛೇರಿ**

ಇದು ಜಿಲ್ಲಾಡಳಿತದ ಅವಿಭಾಜ್ಯ ಅಂಗವಾಗಿದೆ. ಇದು ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವುದರೊಂದಿಗೆ ಇನ್ನೂ ಅನೇಕ ಜವಾಬ್ದಾರಿಗಳನ್ನು ಹೊಂದಿದೆ.

೧. ತಮ್ಮ ಉಪ ವಿಭಾಗಗಳಲ್ಲಿ ಬರುವ ನಕ್ಷೆ ಮತ್ತು ದಾಖಲೆಗಳನ್ನು ರಕ್ಷಿಸಿಕೊಳ್ಳುವುದು.
೨. ಭೂ ಕಂದಾಯ ಸಂಗ್ರಹಣೆ
೩. ಲೆಕ್ಕಪಾಲರ ನೇಮಕಾತಿ ಮತ್ತು ವರ್ಗಾವಣೆ ಮಾಡುವುದು.

**ಜಿಲ್ಲಾಧಿಕಾರಿ**

ಜಿಲ್ಲಾಧಿಕಾರಿ ಅವರು ಜಿಲ್ಲೆಯ ಮುಖ್ಯಸ್ಥರಾಗಿದ್ದಾರೆ. ಆಡಳಿತ ಯಾವುದೇ ಕಾರ್ಯಕ್ರಮ ಗಳು ಅಂತಿಮ ರೂಪ ಪಡೆಯಬೇಕಾದರೆ ಇವರ ಅಂಕಿತ ಅಗತ್ಯ. ಹೊಸ ಯೋಜನೆಗಳು ಜಿಲ್ಲೆಯಲ್ಲಿ ಅನುಷ್ಠಾನಗೊಳ್ಳಬೇಕಾದರೆ ಇವರ ಪಾತ್ರ ಬಹಳ ಮುಖ್ಯ.

### ಜಿಲ್ಲಾಧಿಕಾರಿಯ ಕಾರ್ಯಗಳು

* ಆಡಳಿತದ ಮುಖ್ಯ ವ್ಯಕ್ತಿಯಾಗಿ ಕಾರ್ಯನಿರ್ವಹಿಸುತ್ತಾರೆ.
* ಸರ್ಕಾರದ ಸ್ಥಳೀಯ ಪ್ರತಿನಿಧಿಯಾಗಿರುತ್ತಾರೆ.
* ಜಿಲ್ಲೆಯ ಕಂದಾಯ ಇಲಾಖೆಯ ಮುಖ್ಯ ಅಧಿಕಾರಿಯಾಗಿರುತ್ತಾರೆ.
* ಜಿಲ್ಲೆಯ ಮುಖ್ಯ ನ್ಯಾಯಾಧೀಶರಾಗಿರುತ್ತಾರೆ.
* ಜಿಲ್ಲೆಯ ಎಲ್ಲಾ ಆಡಳಿತ ಇಲಾಖೆಗಳ ಜೊತೆ ಸಂಪರ್ಕ ಇಟ್ಟುಕೊಂಡಿರುತ್ತಾರೆ.
* ಅಭಿವೃದ್ಧಿ ಚಟುವಟಿಕೆಯನ್ನು ಅಭಿವೃದ್ಧಿ ಪಡಿಸುವಲ್ಲಿ, ಮುಖ್ಯ ಪಾತ್ರವಹಿಸುತ್ತಾರೆ.
* ಎಲ್ಲರ ಮಧ್ಯೆ ಸಹಕಾರ ಮತ್ತು ಮಾರ್ಗದರ್ಶನ ನೀಡಲು ವೈಯಕ್ತಿಕವಾಗಿ ಜವಾಬ್ದಾರರಾಗಿರುತ್ತಾರೆ.

### ಜಿಲ್ಲಾಧಿಕಾರಿಯಾಗಿ

- ವಾರ್ಷಿಕ ಆದಾಯ ವೆಚ್ಚದ ನಿರ್ವಹಣೆ.
- ತನ್ನ ಅಧೀನ ನೌಕರರ ನೇಮಕ ಮತ್ತು ದಂಡನೆ ನೀಡುವ ಅಧಿಕಾರ.
- ತಹಶೀಲ್ದಾರರ ನೇಮಕ ಮತ್ತು ವರ್ಗಾವಣೆ ಮಾಡುವುದು.

### ಕಲೆಕ್ಟರ್ ಆಗಿ

- ಭೂಕಂದಾಯ ಸಂಗ್ರಹಣೆ
- ತಕ್ಕಾವಿ ಲೋನ್ ಪಡೆದವರಿಂದ ಸಾಲ ಮರುಪಾವತಿ ಮಾಡಿಸಿಕೊಳ್ಳುವುದು
- ರಾಷ್ಟ್ರೀಯ ದುರಂತ ಘಟಿಸಿದಾಗ ಪರಿಹಾರಕ್ಕೆ ಶಿಫಾರಸು ಮಾಡುವುದು.
- ಬೆಂಕಿ ದುರಂತದಲ್ಲಿ ಈಡಾದವರಿಗೆ ಪರಿಹಾರ ನೀಡುವುದು.

### ನ್ಯಾಯಾಧಿಕಾರಿಯಾಗಿ

- ಸಹ ನ್ಯಾಯಾಧೀಶರ ಮೇಲೆ ಹತೋಟಿ ಹೊಂದುವುದು.
- ಸಾರ್ವಜನಿಕ ಶಾಂತಿ ಕದಡಲು ಕಾರಣವಾದ ಅಂಶಗಳ ಮೇಲೆ ನಿರ್ದಾಕ್ಷಿಣ್ಯ ಕ್ರಮ ಕೈಗೊಳ್ಳುವುದು.
- ಕಾರ್ಮಿಕ ಸಮಸ್ಯೆ, ಮುಷ್ಕರ ಬಗೆಹರಿಸುವುದು.
- ಶಾಂತಿ ಪೂರ್ವಕ ಚುನಾವಣೆ ನಡೆಯುವಂತೆ ನೋಡಿಕೊಳ್ಳುವುದು.
- ಜನಗಣತಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.
- ಜಿಲ್ಲಾ ಅಭಿವೃದ್ಧಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

### ತಹಶೀಲ್ದಾರ

ಇವರ ಆಡಳಿತ ವ್ಯಾಪ್ತಿಯಲ್ಲಿ ೨೦೦-೬೦೦ ಗ್ರಾಮಗಳು ಒಳಗೊಂಡಿರುತ್ತವೆ. ಜನಸಂಖ್ಯೆ ಪ್ರಮಾಣವು ರಾಜ್ಯದಿಂದ ರಾಜ್ಯಕ್ಕೆ ಬೇರೆಯಾಗಿರುತ್ತದೆ.

**ಇವರ ಮುಖ್ಯ ಕಾರ್ಯಗಳೆಂದರೆ**

- ಸಾಮಾನ್ಯ ಆಡಳಿತ
- ಖಜಾನೆ
- ಭೂ ಕಂದಾಯ
- ಭೂ ದಾಖಲೆ

ತಹಶೀಲನ ಮುಖ್ಯ ನಿರ್ವಾಹಕ ಎಂದರೆ ತಹಶೀಲ್ದಾರ. ಇವರು ಅಸಿಸ್ಟೆಂಟ್ ಕಲೆಕ್ಟರ್ ಆಗಿ ಕಾರ್ಯನಿರ್ವಹಿಸುತ್ತಾರೆ, ಮತ್ತು ಭೂಕಂದಾಯ ವಸೂಲಿಯ ಜವಾಬ್ದಾರಿ ಕೂಡಾ ಹೊಂದಿದ್ದಾರೆ.

  - ಕಲೆಕ್ಟರ್
  - ತಹಶೀಲ್
  - ನಯಿ ತಹಶೀಲ್
  - ಲೇಖ ಪಾಲ್

**ಪತವಾರಿ**

ಇವರು ಕಂದಾಯ ಆಡಳಿತದ ಕೊನೆಯ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತಾರೆ. ಇವರು ಸರ್ಕಾರದ ಶಕ್ತಿಶಾಲಿ ಪ್ರತಿನಿಧಿಯಾಗಿದ್ದು, ಗ್ರಾಮ ಮಟ್ಟದ ಭೂಕಂದಾಯದ ದಾಖಲೆಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಇವರದಾಗಿರುತ್ತದೆ. ಇವರು ಒಂದು ಅಥವಾ ಒಂದಕ್ಕಿಂತ ಹೆಚ್ಚು ಗ್ರಾಮಗಳ ಕಾರ್ಯನೋಡಿಕೊಳ್ಳುತ್ತಾರೆ.

**ಇವರ ಮುಖ್ಯ ಕಾರ್ಯಗಳೆಂದರೆ**

- ಭೂ ಕಂದಾಯ ದಾಖಲೆ ನಿರ್ವಹಣೆ
- ಅಂಕಿ ಸಂಖ್ಯೆ ಸಂಗ್ರಹಣೆ
- ಭೂ ಅಳತೆ
- ಇತರ ಇಲಾಖೆಗಳಿಗೆ ಸಹಕಾರ ನೀಡುವುದು.

ಪತವಾರಿ ಜಿಲ್ಲೆಯ ಭೂ ಕಂದಾಯದ ಮುಖ್ಯಕೊಂಡಿಯಾಗಿ ಕಾರ್ಯನಿರ್ವಹಿಸುತ್ತಾರೆ.

**೭.೪ ಅಖಿಲ ಭಾರತೀಯ ಸೇವೆಗಳು**

ಸಂಯುಕ್ತ ವ್ಯವಸ್ಥೆಹೊಂದಿರುವ ಭಾರತದಂಥಹ ವಿಶಾಲವಾದ ರಾಷ್ಟ್ರದಲ್ಲಿ ಆಡಳಿತ ನಡೆಸುವುದು ಒಂದು ಕಷ್ಟಕರ ಸಂಗತಿ. ಆದ್ದರಿಂದ ಆಡಳಿತ ನಡೆಸಬೇಕಾದರೆ, ದೇಶವನ್ನು ಕೇಂದ್ರ ಮತ್ತು ರಾಜ್ಯಗಳಾಗಿ ವಿಂಗಡಿಸಿ ಆಡಳಿತ ನಡೆಸಲಾಗುತ್ತಿದೆ. ಕೇಂದ್ರ ರಾಜ್ಯಗಳಿಗೆ ಪ್ರತ್ಯೇಕವಾದ ಸೇವೆಗಳನ್ನು ನೀಡುವ ಮೂಲಕ ಕಾರ್ಯನಿರ್ವಹಿಸಲು ಸರ್ಕಾರವು ಅನುವು ಮಾಡಿಕೊಟ್ಟಿದೆ. ಒಟ್ಟಾರೆಯಾಗಿ ಭಾರತದಲ್ಲಿ ಮೂರು ವಿಧದ ಸೇವೆಗಳಿವೆ. ಅವುಗಳೆಂದರೆ, ಅಖಿಲ ಭಾರತ ಸೇವೆಗಳು, ಕೇಂದ್ರೀಯ ಸೇವೆಗಳು ಮತ್ತು ರಾಜ್ಯ ಸೇವೆಗಳು.

## ಅಖಿಲ ಭಾರತ ಸೇವೆಗಳು

ಈ ಆಡಳಿತ ವ್ಯವಸ್ಥೆಯು ಭಾರತೀಯ ಆಡಳಿತ ಸೇವೆ (ಐ.ಎ.ಎಸ್) ಮತ್ತು ಭಾರತೀಯ ಪೋಲೀಸ್ ಸೇವೆ (ಐ.ಪಿ.ಎಸ್)ಗಳನ್ನು ಒಳಗೊಂಡಿರುತ್ತವೆ. ಇದು ಕೇಂದ್ರ ಮತ್ತು ರಾಜ್ಯಗಳಿಗೆ ಸಾಮಾನ್ಯವಾಗಿರುತ್ತವೆ. ಸಂವಿಧಾನ ಕರಡು ಸಮಿತಿಯ ಅಧ್ಯಕ್ಷರಾಗಿದ್ದ ಡಾ.ಬಿ.ಆರ್.ಅಂಬೇಡ್ಕರ್‌ರವರು ಅಖಿಲ ಭಾರತೀಯ ಸೇವೆಗಳ ಅವಶ್ಯಕತೆಗಳನ್ನು ಗುರುತಿಸಿ, ಅವುಗಳನ್ನು ಪ್ರಾರಂಭಿಸಬೇಕೆಂದು ತಿಳಿಸಿದ್ದರು. ಇದನ್ನು ಸಂಯುಕ್ತ ಪದ್ಧತಿ ಸರ್ಕಾರಕ್ಕೆ ಸೂಕ್ತ/ಅವಶ್ಯಕ ಎಂದಿದ್ದಾರೆ. ಏಕೆಂದರೆ ಯಾವುದೇ ಸಮಸ್ಯೆಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮಧ್ಯೆ ಉದ್ಭವಿಸಿದಾಗ ಈ ಸೇವೆಯ ನೌಕರರು ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಕೊಡುವ ಅಧಿಕಾರ ಹೊಂದಿರುತ್ತಾರೆ. ಜೊತೆಗೆ ರಾಷ್ಟ್ರದ ಏಕತೆಯಲ್ಲಿ ಯಾವುದೇ ಸಮಸ್ಯೆಗಳು ಉದ್ಭವಿಸಿದರೂ ಅದಕ್ಕೆ ಪರಿಹಾರ ಸೂಚಿಸುತ್ತಾರೆ. ಇಲ್ಲಿ ಕಾರ್ಯ ನಿರ್ವಹಿಸುವವರು ಸಾಕಷ್ಟು ಅನುಭವವನ್ನು ಹೊಂದಿದವರಾಗಿದ್ದು, ದಕ್ಷ, ಜವಾಬ್ದಾರಿಯುತ ಮತ್ತು ನಿಷ್ಪಕ್ಷವಾಗಿರುತ್ತಾರೆ. ಆದ್ದರಿಂದ ಈ ಸೇವೆಗಳನ್ನು ಬಹಳ ಅವಶ್ಯಕ ಸೇವೆಗಳೆಂದು ನಿರ್ಧರಿಸಲಾಗಿದೆ.

## ಪ್ರಯೋಜನಗಳು

೧. ಈ ಸೇವೆಗಳು ರಾಷ್ಟ್ರದ ಎಲ್ಲಾ ಕಡೆಗಳಲ್ಲಿಯೂ ಕನಿಷ್ಟಮಟ್ಟವನ್ನು ತಲುಪುವಲ್ಲಿ ಸಹಾಯ ಮಾಡುತ್ತವೆ.

೨. ಎಲ್ಲಾ ಮೇಧಾಶಕ್ತಿ, ಕೌಶಲ್ಯ, ಬುದ್ಧಿವಂತರನ್ನು ಅವರ ಮೂಲವನ್ನು ಪರಿಶೋಧಿಸಿ ಉಪಯೋಗಿಸಲಾಗುತ್ತದೆ.

೩. ಈ ಸೇವೆಗಳು ಏಕತೆಯನ್ನು ಕಾಪಾಡುವಲ್ಲಿ ಸಹಾಯ ಮಾಡುತ್ತವೆ. ರಾಜ್ಯಗಳಲ್ಲಿರುವ ಭಿನ್ನತೆಗಳನ್ನು ಹೋಗಲಾಡಿಸಿ ರಾಷ್ಟ್ರದ ಐಕ್ಯತೆಯನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಈ ಹುದ್ದೆಗಳಿಗೆ ಸಾಮಾನ್ಯವಾಗಿ ಹೊರ ರಾಜ್ಯಗಳಿಂದ ನೇಮಕ ಮಾಡುವುದರಿಂದ ಸ್ಥಳೀಯ ಒತ್ತಡಗಳಿಂದ ದೂರವಿದ್ದು, ದಕ್ಷವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತದೆ.

೪. ಇದು ತನ್ನ ವೇತನ ಮತ್ತು ಸೌಲಭ್ಯಗಳಿಂದ ಘನತೆ, ಗೌರವಗಳಿಂದ ಬುದ್ಧಿವಂತ ಮತ್ತು ಯೋಗ್ಯ/ಪರಿಗಣಿತ ಅಭ್ಯರ್ಥಿಗಳನ್ನು ಆಕರ್ಷಿಸುತ್ತದೆ.

೫. ಈ ಸೇವೆಯ, ಸಿಬ್ಬಂದಿಗಳು, ರಾಜ್ಯದ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದು, ಇವರುಗಳು ಮಂತ್ರಿಗಳಿಗೆ ಸ್ವತಂತ್ರವಾಗಿ ಮಾರ್ಗದರ್ಶನ ಕೊಡುವಷ್ಟು ದಕ್ಷರಾಗಿರುತ್ತಾರೆ. ಈ ರೀತಿ ಮಾರ್ಗದರ್ಶನ ಮಾಡಲು ರಾಜ್ಯ ಸೇವೆಗಳ ಸಿಬ್ಬಂದಿಗಳು ಹಿಂಜರಿಯುತ್ತಾರೆ.

೬. ತುರ್ತು ಪರಿಸ್ಥಿತಿಯ ಸಮಯದಲ್ಲಿ, ಕೇಂದ್ರಕ್ಕೆ ಹತ್ತಿರವಾಗಿರುವ ಇವರುಗಳು, ರಾಷ್ಟ್ರಪತಿಯವರ ನೀತಿಗಳನ್ನು ಹೆಚ್ಚು ದಕ್ಷವಾಗಿ ನಿರ್ವಹಿಸುತ್ತಾರೆ.

### ಕೇಂದ್ರೀಯ ಸೇವೆಗಳು

ಈ ಸೇವೆಗಳು ಕೇಂದ್ರ ಸರ್ಕಾರದ ನೇರ ನಿಯಂತ್ರಣಕ್ಕೆ ಒಳಪಟ್ಟಿವೆ. ಈ ಸೇವೆಗಳು ವರ್ಗ ೦೧ ಮತ್ತು ೦೨ ಶ್ರೇಯಾಂಕದ್ದಾಗಿರುತ್ತವೆ. ೩೩ ಸೇವೆಗಳು ವರ್ಗ ೦೧ರಲ್ಲಿಯೂ, ೨೫ ಸೇವೆಗಳು ವರ್ಗ ೦೨ರಲ್ಲಿಯೂ ಬರುತ್ತವೆ. ಇವುಗಳಲ್ಲದೆ ವರ್ಗ ೦೩ ಮತ್ತು ೦೪ ಸೇವೆಗಳನ್ನು ಕೇಂದ್ರೀಯ ಸೇವೆಗಳು ಒಳಗೊಂಡಿರುತ್ತವೆ.

ವರ್ಗ ೦೧ ಮತ್ತು ೦೨ ಸೇವೆಗಳಿಗೆ ಕೇಂದ್ರೀಯ ಲೋಕ ಸೇವಾ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡಿಕೊಳ್ಳುತ್ತದೆ ಹಾಗೆಯೇ ವರ್ಗ ೦೩ನ್ನು ಸಿಬ್ಬಂದಿಗಳ ಆಯ್ಕೆ ಆಯೋಗವು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಭರ್ತಿ ಮಾಡಿಕೊಳ್ಳುತ್ತದೆ.

ಸಿಬ್ಬಂದಿಗಳ ಆಯ್ಕೆ ಆಯೋಗವು ಗುಮಾಸ್ತರು, ಶೀಘ್ರಲಿಪಿಗಾರರು ಮುಂತಾದ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಈ ಆಯೋಗವು ನಡೆಸುತ್ತದೆ ಮತ್ತು ಈ ಪರೀಕ್ಷೆಗಳಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಪಟ್ಟಿಯನ್ನು ಮಂತ್ರಾಲಯಕ್ಕೆ ನೇಮಕಾತಿಗಾಗಿ ರವಾನಿಸುತ್ತದೆ.

### ರಾಜ್ಯ ಸೇವೆಗಳು

ರಾಜ್ಯ ಸೇವೆಗಳು ರಾಜ್ಯ ಪಟ್ಟಿಯಲ್ಲಿ ಬರುವಂತಹ ಇಲಾಖೆಗಳಿಗೆ ಸಂಬಂಧಿಸಿದ ಸೇವೆ ಮತ್ತು ಹುದ್ದೆಗಳನ್ನು ಒಳಗೊಂಡಿರುತ್ತದೆ. ಉದಾಹರಣೆಗೆ ಶಿಕ್ಷಣ, ಆರೋಗ್ಯ, ಯೋಜನೆ, ಪೊಲೀಸ್ ಇತ್ಯಾದಿ. ಈ ಸೇವೆಗಳಿಗೆ ನೇಮಕಾತಿಯನ್ನು ರಾಜ್ಯ ಶಾಸಕಾಂಗದಲ್ಲಿರುವ ನಿಯಮಗಳಿಗನುಸಾರವಾಗಿ ಮಾಡಲಾಗುತ್ತದೆ. ಶಾಸಕಾಂಗದ ಗೈರುಹಾಜರಿಯಲ್ಲಿ ರಾಜ್ಯಪಾಲರಿಗೆ ಈ ಸಂಬಂಧಿತ ನೀತಿ ಮತ್ತು ನಿಯಮಗಳನ್ನು ಹೊರಡಿಸುವ ಅಧಿಕಾರವಿರುತ್ತದೆ.

ಅಖಿಲ ಭಾರತ ಸೇವೆಗಳು ಮತ್ತು ಭಾರತ ಪೊಲೀಸ್ ಸೇವೆಯ ಜೊತೆಗೆ ರಾಜ್ಯ ಸೇವೆಗಳು ರಾಜ್ಯ ಆಡಳಿತದಲ್ಲಿ ಉನ್ನತಸ್ಥಾನಗಳನ್ನು ಹೊಂದಿರುತ್ತವೆ. ಆದರೆ ಜಿಲ್ಲಾಧಿಕಾರಿಗಳು, ಆಯೋಗಗಳು, ಕಾರ್ಯದರ್ಶಿಗಳು, ಮುಖ್ಯ ಕಾರ್ಯದರ್ಶಿಗಳು, ಇವರುಗಳು ಅಖಿಲ ಭಾರತ ಸೇವಾ ಅಧಿಕಾರಿಗಳ ಅಧೀನಕ್ಕೊಳಪಟ್ಟಿರುತ್ತಾರೆ.

ಭಾರತ ಆಡಳಿತ ಸೇವೆ ಮತ್ತು ಭಾರತ ಪೊಲೀಸ್ ಸೇವೆಯ ಅಧಿಕಾರಿಗಳನ್ನು ಕೇಂದ್ರೀಯ ಲೋಕಸೇವಾ ಆಯೋಗವು ನೇಮಿಸುತ್ತದೆ. ಅಧಿಕಾರಿಗಳು ಯಾವ ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿರುತ್ತಾರೆಯೋ ಆ ರಾಜ್ಯದ ಆಡಳಿತ ನಿಯಂತ್ರಣಕ್ಕೆ ಅವರು ಒಳಪಟ್ಟಿರುತ್ತಾರೆ.

ರಾಜ್ಯ ಸೇವೆಗಳಲ್ಲಿ ವರ್ಗ ೦೧ ರಿಂದ ೦೪ರವರೆಗಿನ ವಿಭಾಗಗಳು ಇರುತ್ತವೆ. ಅವುಗಳ ಕೆಲಸ ಮತ್ತು ಅರ್ಹತೆಯ ಮೇಲೆ ಶ್ರೇಣೀಕರಿಸಲಾಗುತ್ತಿದೆ. ವರ್ಗ ೦೧ ಮತ್ತು ೦೨ರಲ್ಲಿ ಪತ್ರಾಕಿಂತ ಅಧಿಕಾರಿಗಳು ಬರುತ್ತಾರೆ. ವರ್ಗ ೦೩ರಲ್ಲಿ ಪ್ರಥಮ ದರ್ಜೆ ಸಹಾಯಕರು ಮತ್ತು ವರ್ಗ ೦೪ರಲ್ಲಿ ಜವಾನರು, ಕಸಗುಡಿಸುವವರು ಮುಂತಾದವರು ಬರುತ್ತಾರೆ.

ಪತ್ರಾಂಕಿತ ಅಧಿಕಾರಿಗಳ ನೇಮಕ, ರಜೆ, ವರ್ಗಾವಣೆ ಇತ್ಯಾದಿಗಳ ಬಗ್ಗೆ ಗೆಜೆಟ್‌ನಲ್ಲಿ ನಮೂದಿಸಲಾಗುತ್ತದೆ.

## ೭.೫ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗ ರಚನೆ ಮತ್ತು ಕಾರ್ಯಗಳು

ಆಡಳಿತದಲ್ಲಿ ದಕ್ಷತೆ ಇರಬೇಕು, ಆಗ ಮಾತ್ರ ಕಲ್ಯಾಣ ರಾಜ್ಯದ ಕನಸು ನನಸಾಗುತ್ತದೆ. ದಕ್ಷತೆಯಿರಬೇಕಾದಲ್ಲಿ ಅರ್ಹರನ್ನು ಆರಿಸಿರಬೇಕು. ಆಯ್ಕೆ ವಿಧಾನವು ಸರಿಯಿರಬೇಕು. ನೇಮಿಸುವ ವ್ಯಕ್ತಿಯು ಅಭ್ಯರ್ಥಿಯ ಅರ್ಹತೆಯನ್ನಲ್ಲದೇ ಮತ್ತಾವುದೇ ಅಂಶವನ್ನು ಗಮನಿಸ ಕೂಡದು. ಜಾತಿ, ಮತ, ಭಾಷೆ, ಹಣ, ಸ್ನೇಹ, ಪ್ರಾಂತೀಯ ಇತ್ಯಾದಿ ಅಂಶಗಳು ಆಯ್ಕೆಯ ಮೇಲೆ ಪ್ರಭಾವ ಬೀರಬಾರದು. ಆಯ್ಕೆಮಾಡುವ ಅಧಿಕಾರಿಯು ನಿಷ್ಪಕ್ಷಪಾತಿಯಾಗಿರಬೇಕು. ಆದ್ದರಿಂದ ಆ ಕೆಲಸವನ್ನು ಲೋಕಸೇವಾ ಆಯೋಗಗಳಿಗೆ ವಹಿಸಲಾಗಿದೆ. ಲೋಕಸೇವಾ ಆಯೋಗಗಳು ಸ್ವತಂತ್ರವಾಗಿ ಯಾವ ಪ್ರಭಾವಕ್ಕೂ ಒಳಗಾಗದೆ ಕೆಲಸ ಮಾಡುತ್ತವೆ.

### ನಾಗರಿಕಸೇವಾ ಆಯೋಗ

ಈ ಆಯೋಗವು ಕೇಂದ್ರದ ನಾಗರಿಕಸೇವಾ ಆಯೋಗ ಮತ್ತು ಪ್ರತೀ ರಾಜ್ಯಕ್ಕೂ, ನಾಗರಿಕಸೇವಾ ಆಯೋಗ ಅಥವಾ ಜಂಟಿ ನಾಗರಿಕಸೇವಾ ಆಯೋಗಗಳನ್ನು ಒಳಗೊಂಡಿದೆ. ಕೇಂದ್ರೀಯ ಶಾಸನಸಭೆ ಕೇಂದ್ರದಲ್ಲಿ ರಾಷ್ಟ್ರಪತಿಯವರ ಅಂಕಿತದೊಂದಿಗೆ, ರಾಜ್ಯಗಳಲ್ಲಿ ರಾಜ್ಯಪಾಲರ ಅಂಕಿತದೊಂದಿಗೆ ನಾಗರಿಕಸೇವಾ ಆಯೋಗಗಳನ್ನು ರಚಿಸುವ ಅಧಿಕಾರವನ್ನು ಒಳಗೊಂಡಿದೆ. ಈ ಆಯೋಗಗಳಿಗೆ ಸದಸ್ಯರನ್ನು ನೇಮಕ ಮಾಡುವ ಬಗ್ಗೆ ಹಾಗೂ ಅದರ ಸಂಖ್ಯಾಬಲವನ್ನು ನಿರ್ಧರಿಸುವ ಬಗ್ಗೆ ಕೇಂದ್ರದಲ್ಲಿ ರಾಷ್ಟ್ರಪತಿಗೂ, ರಾಜ್ಯದಲ್ಲಿ ರಾಜ್ಯಪಾಲರಿಗೂ ಅಧಿಕಾರವನ್ನು ನೀಡಲಾಗಿದೆ. ಕೇಂದ್ರೀಯ ನಾಗರಿಕ ಸೇವಾ ಆಯೋಗವು (Union Public Service Commission) ಕೇಂದ್ರೀಯ ನಾಗರಿಕಸೇವಾ ಆಯೋಗಗಳ ಹುದ್ದೆಗಾಗಿ ನೇಮಕಾತಿ ಮಾಡಲು ಪರೀಕ್ಷೆಗಳನ್ನು ನಡೆಸುವ ಸಲುವಾಗಿ ಕೇಂದ್ರ ಸರ್ಕಾರದಿಂದ ರಚಿಸಲ್ಪಟ್ಟ ಸ್ವತಂತ್ರ ಮತ್ತು ಸ್ವಾಯತ್ತ ಸಂಸ್ಥೆ/ಆಯೋಗ ಇದಾಗಿದೆ. ಈ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರನ್ನು ರಾಷ್ಟ್ರಪತಿಯವರು ನೇಮಕ ಮಾಡುತ್ತಾರೆ. ಈ ಆಯೋಗದ ಒಟ್ಟು ಸದಸ್ಯರಲ್ಲಿ ಶೇ.೫೦ರಷ್ಟು ಸದಸ್ಯರನ್ನು ಕೇಂದ್ರ ಅಥವಾ ರಾಜ್ಯ ಸರ್ಕಾರದ ಹುದ್ದೆಗಳಲ್ಲಿ ೧೦ ವರ್ಷಗಳ ಸೇವಾ ಅನುಭವ ಇರುವವರನ್ನೇ ನೇಮಕ ಮಾಡಿಕೊಳ್ಳಲಾಗುತ್ತದೆ. ಇವರ ಸೇವಾ ಅವಧಿ ೬ ವರ್ಷಗಳಾಗಿದ್ದು, ಇವರ ಅಧಿಕಾರವು ಈ ಕೆಳಕಂಡಂತೆ ಅವಧಿ ಪೂರ್ಣ ಗೊಳ್ಳುದಕ್ಕಿಂತ ಮುಂಚೆಯೇ ಕೊನೆಗೊಳ್ಳಬಹುದಾಗಿರುತ್ತದೆ.

- ರಾಷ್ಟ್ರಪತಿಯವರಿಗೆ ಲಿಖಿತವಾಗಿ ರಾಜನಾಮೆ ಪತ್ರ ಸಲ್ಲಿಸಿದಾಗ.
- ರಾಷ್ಟ್ರಪತಿಯವರು ಪದಚ್ಯುತ ಗೊಳಿಸಿದಾಗ.
- ಸದಸ್ಯರು ಈ ಹುದ್ದೆಯನ್ನಲ್ಲದೆ ಬೇರೆ ಲಾಭದಾಯಕ ಹುದ್ದೆಗಳನ್ನು ಅಲಂಕರಿಸಿದ್ದಲ್ಲಿ.
- ಸರ್ವೋಚ್ಚ ನ್ಯಾಯಾಲಯವು ರಾಷ್ಟ್ರಪತಿಯವರ ಮನವಿಯ ಮೇರೆಗೆ ಪರಿಶೀಲಿಸಿ ಸದಸ್ಯರ ದುರ್ನಡತೆಯ ಬಗ್ಗೆ ವರದಿ ಸಲ್ಲಿಸಿದಾಗ

(ಕರ್ನಾಟಕ ಲೋಕಸೇವಾ ಆಯೋಗದಲ್ಲಿ ರಾಜ್ಯಪಾಲರು ಕೇವಲ ಮಧ್ಯಂತರ ಆದೇಶದ ಮೂಲಕ ಪದಚ್ಯುತ ಗೊಳಿಸಬಹುದು. ಆದರೆ ರಾಷ್ಟ್ರಪತಿಯವರ ಆದೇಶವೇ ಅಂತಿಮವಾದುದು)

- ಯಾವುದಾದರೂ ಲಾಭದಾಯಕವಾದ ವ್ಯವಹಾರಗಳಲ್ಲಿ ಒಪ್ಪಂದ ಕರಾರುಗಳನ್ನು ಮಾಡಿಕೊಂಡಲ್ಲಿ.

ಈ ಮೇಲ್ಕಂಡ ಸಂದರ್ಭಗಳಲ್ಲಿ ಆಯೋಗದ ಸದಸ್ಯರನ್ನು ಪದಚ್ಯುತಗೊಳಿಸಲಾಗುತ್ತದೆ.

**ಲೋಕಸೇವಾ ಆಯೋಗದ ಕಾರ್ಯಗಳು**

೧. ಸರ್ಕಾರಿ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾದ್ದು ಲೋಕಸೇವಾ ಆಯೋಗದ ಅದ್ಯ ಕರ್ತವ್ಯ. ಪರಿಪಕ್ವ ಪರೀಕ್ಷೆಗಳ ಮೂಲಕ ಅಭ್ಯರ್ಥಿಗಳ ಯೋಗ್ಯತೆ ಯನ್ನು ನಿರ್ಧರಿಸಿ, ಆಯ್ಕೆಯಾದವರ ಪಟ್ಟಿಯನ್ನು ತಯಾರಿಸಬೇಕು.

೨. ಕೆಳಗೆ ತಿಳಿಸಿರುವ ವಿಷಯಗಳ ಬಗ್ಗೆ ನಿರ್ಧಾರ ಕೈಗೊಳ್ಳುವ ಮೊದಲು ಸರ್ಕಾರವು ಲೋಕಸೇವಾ ಆಯೋಗದೊಡನೆ ಸಮಾಲೋಚಿಸಬೇಕು.
   - ನೇಮಕ, ಭರ್ತಿ ಮತ್ತು ವರ್ಗಾವಣೆಗೆ ಸಂಬಂಧಪಟ್ಟಂತೆ ಅನುಸರಿಸಬೇಕಾದ ಸೂತ್ರಗಳ ಬಗ್ಗೆ.
   - ನೇಮಕದ ವಿಧಾನಗಳಿಗೆ ಸಂಬಂಧಪಟ್ಟಂತೆ.
   - ಶಿಸ್ತು ಪರಿಪಾಲನೆಗೆ ಸಂಬಂಧಿಸಿದ ವಿಷಯಗಳ ಬಗ್ಗೆ, ವಿಧಿಸಿರುವ ಶಿಕ್ಷೆಯ ಬಗ್ಗೆ, ಪುನರ್ಪರಿಶೀಲಿಸುವಂತೆ ಕೋರುವ ಅರ್ಜಿಗಳ ಬಗ್ಗೆ.
   - ಸರ್ಕಾರಿ ಕೆಲಸದ ನಿರ್ವಹಣೆಯಲ್ಲಿ ಆಗಿರುವ ನ್ಯಾಯಾಲಯದ ಖರ್ಚನ್ನು ಪೂರೈಸುವಂತೆ ಕೋರಿಕೆಯ ಬಗ್ಗೆ.
   - ಸರ್ಕಾರಿ ಕೆಲಸ ನಿರ್ವಹಿಸುತ್ತಿರುವಾಗ ಸಂಭವಿಸುವ ಆಕಸ್ಮಿಕದಿಂದ ಉಂಟಾಗುವ ಅಂಗಹಾನಿಗೆ ಸಂಬಂಧಿಸಿದ ನಿವೃತ್ತಿ ವೇತನಗಳ ಬಗ್ಗೆ.
   - ಮತ್ತು ರಾಷ್ಟ್ರಪತಿ ಅಥವಾ ರಾಜ್ಯಪಾಲರು ಕೋರುವ ವಿಷಯಗಳ ಬಗ್ಗೆ.

೩. ಶಾಸನಸಭೆಯು ಕಾನೂನಿನ ಮೂಲಕ ಹೆಚ್ಚಿನ ಕಾರ್ಯಗಳನ್ನು ಲೋಕಸೇವಾ ಆಯೋಗಕ್ಕೆ ವಹಿಸಬಹುದು. ಅದೇ ರೀತಿ ಹಲವಾರು ಸ್ಥಾನಗಳನ್ನು ಲೋಕಸೇವಾ ಆಯೋಗದ ವ್ಯಾಪ್ತಿಯಿಂದ ಹೊರಗಿಡಬಹುದು.

೪. ಆಯೋಗವು ವಾರ್ಷಿಕ ವರದಿಯನ್ನು ಸಲ್ಲಿಸಬೇಕು, ಕೇಂದ್ರ ಆಯೋಗವು ರಾಷ್ಟ್ರಾಧ್ಯಕ್ಷ ರಿಗೂ, ರಾಜ್ಯ ಆಯೋಗವು ರಾಜ್ಯಪಾಲರಿಗೂ ವಾರ್ಷಿಕ ವರದಿ ಸಲ್ಲಿಸಬೇಕು.

೫. ಭಾರತದ ಯಾವ ರಾಜ್ಯವಾದರೂ, ಕೇಂದ್ರ ಲೋಕಸೇವಾ ಆಯೋಗವನ್ನು ತನ್ನ ಉದ್ಯೋಗಿ ಮಂಡಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಬೇಕೆಂದು ಕೋರಿಕೊಂಡರೆ ಕೇಂದ್ರ ಆಯೋಗವು ಆ ಜವಾಬ್ದಾರಿಯನ್ನು ಕೈಗೊಳ್ಳಬಹುದು.

ಲೋಕಸೇವಾ ಆಯೋಗದ ಶಿಫಾರಸುಗಳು ಸಲಹೆಯ ರೂಪದಲ್ಲಿರುತ್ತವೆ. ಅದರ ಶಿಫಾರಸುಗಳನ್ನು ಒಪ್ಪಿಕೊಳ್ಳಬೇಕೆಂಬ ಕಡ್ಡಾಯವಾದ ನಿಯಮವೇನಿಲ್ಲ. ಆದರೆ ಸರ್ಕಾರವು

ಉತ್ತಮ ಸಂಪ್ರದಾಯವನ್ನು ಬೆಳೆಸಬೇಕು. ಅದಕ್ಕಾಗಿ ಲೋಕಸೇವಾ ಆಯೋಗದ ಶಿಫಾರಸುಗಳಿಗೆ ಸಮ್ಮತಿಸಬೇಕು. ಆದರೆ ಲೋಕಸೇವಾ ಆಯೋಗವು ತಪ್ಪು ಸಲಹೆ ನೀಡಿದಾಗ, ಆಯ್ಕೆಯ ವೇಳೆಯಲ್ಲಿ ದಾರಿ ತಪ್ಪಿದಾಗ ಅಥವಾ ಭ್ರಷ್ಟಾಚಾರದಲ್ಲಿ ತೊಡಗಿದಾಗ ಅದರ ಸಲಹೆಯನ್ನು ತಳ್ಳಿಹಾಕಬಹುದು. ಆಯೋಗದ ಸಲಹೆಯನ್ನು ತಿರಸ್ಕರಿಸಿದರೆ, ಸಚಿವ ಸಂಪುಟವು ಆಯೋಗದ ವಾರ್ಷಿಕ ವರದಿಯನ್ನು ಸಭೆಯ ಮುಂದೆ ಮಂಡಿಸುವಾಗ ವಿವರಣಾ ಪತ್ರವನ್ನು ಸಹ ಮಂಡಿಸಬೇಕು. ಆಯೋಗದ ವರದಿ ಮತ್ತು ವಿವರಣಾ ಪತ್ರಗಳೆರಡನ್ನೂ ಶಾಸಕಾಂಗವು ಸೂಕ್ಷ್ಮವಾಗಿ ವಿವೇಚಿಸಬೇಕು. ವಿನಾಕಾರಣ ಆಯೋಗದ ಸಲಹೆಯು ತಿರಸ್ಕೃತವಾಗಿದ್ದಲ್ಲಿ ಕಾರ್ಯಾಂಗವನ್ನು ಶಾಸಕಾಂಗವು ತರಾಟೆಗೆ ತೆಗೆದುಕೊಳ್ಳಬೇಕು. ಆಯೋಗವೇ ತಪ್ಪುಮಾಡಿದ್ದಲ್ಲಿ ಅದಕ್ಕೆ ಎಚ್ಚರಿಕೆಯನ್ನು ನೀಡಬೇಕು.

**ಲೋಕಸೇವಾ ಆಯೋಗಗಳ ಸ್ವಾತಂತ್ರ್ಯ**

ಬಹುಮತ ಪಕ್ಷವು ಆಡಳಿತಾಧಿಕಾರವನ್ನು ಹೊಂದಿರುವ ಪ್ರಜಾಪ್ರಭುತ್ವದಲ್ಲಿ ಸ್ವತಂತ್ರ ಮತ್ತು ಸ್ವಾಯತ್ತ ಲೋಕಸೇವಾ ಆಯೋಗವು ಅತ್ಯಗತ್ಯ. ಅದು ಉದ್ಯೋಗಗಳಲ್ಲಿ ನಿಷ್ಪಕ್ಷಪಾತ ಮನೋಭಾವ ಮತ್ತು ಮನೋಸ್ಥೈರ್ಯವನ್ನು ಬೆಳೆಸುತ್ತದೆ. ಆದ್ದರಿಂದ ಅವುಗಳ ಸ್ವತಂತ್ರ ಸಂಸ್ಥೆಗಳಾಗಿರಬೇಕು. ಭಾರತದ ಸಂವಿಧಾನವು ಕೆಳಗಿನ ನಿಯಮಗಳ ಮೂಲಕ ಅವುಗಳ ಸ್ವಾತಂತ್ರವನ್ನು ರಕ್ಷಿಸಿದೆ.

೧. ಭಾರತದ ಲೋಕಸೇವಾ ಆಯೋಗಗಳು ಸಂವಿಧಾನಾತ್ಮಕ ಸಂಸ್ಥೆಗಳು. ಸಂವಿಧಾನದ ೩೧೫ನೇಯ ವಿಧಿಯು ಕೇಂದ್ರ, ರಾಜ್ಯ ಮತ್ತು ಜಂಟಿ ಲೋಕಸೇವಾ ಆಯೋಗಗಳಿಗೆ ಅವಕಾಶ ಮಾಡಿಕೊಟ್ಟಿದೆ.

೨. ಭಾರತದ ಲೋಕಸೇವಾ ಆಯೋಗಗಳು ಏಕಸದಸ್ಯ ಆಯೋಗಗಳಲ್ಲ, ಬಹುಸದಸ್ಯ ಆಯೋಗಗಳು, ಅಧಿಕಾರಾವಧಿಯನ್ನು ಸಂವಿಧಾನವು ನಿರ್ಧರಿಸಿರುವ ವಿಧಾನಗಳಿಂದಾಗಿ ಎಲ್ಲಾ ಸದಸ್ಯರನ್ನು ಒಂದೇ ಸರ್ಕಾರವು ನೇಮಿಸುವ ಅವಕಾಶ ಸಿಗುವುದು ಅಪರೂಪವಾಗುತ್ತಿದೆ.

೩. ಕೇಂದ್ರ ಲೋಕಸೇವಾ ಆಯೋಗದ ಸದಸ್ಯರನ್ನು ರಾಷ್ಟ್ರಪತಿಯವರು ಮತ್ತು ರಾಜ್ಯ ಲೋಕಸೇವಾ ಆಯೋಗಗಳ ಸದಸ್ಯರನ್ನು ರಾಜ್ಯಪಾಲರು ನೇಮಿಸುತ್ತಾರೆ. ಆ ರೀತಿ ನೇಮಕಗೊಂಡ ಸದಸ್ಯರ ಪೈಕಿ ಆದಷ್ಟು ಅರ್ಧಷ್ಟು ಮಂದಿ ಕನಿಷ್ಟ ಪಕ್ಷ ಹತ್ತು ವರ್ಷಗಳ ವರೆಗೆ ಸರ್ಕಾರಿ ಸೇವೆಯಲ್ಲಿದ್ದವರಾಗಿರಬೇಕು.

೪. ಸಂವಿಧಾನವೇ ಸದಸ್ಯರ ಅಧಿಕಾರಾವಧಿಯನ್ನು ನಿರ್ಧರಿಸಿದೆ. ಸೇವಾ ಅವಧಿಯು ಆರು ವರ್ಷಗಳ ಕಾಲ. ಅದಕ್ಕೆ ಮೊದಲೂ ಕೇಂದ್ರ ಲೋಕಸೇವಾ ಆಯೋಗದ ಸದಸ್ಯನೊಬ್ಬನಿಗೆ ೬೫ ವರ್ಷವಾದರೆ, ರಾಜ್ಯ ಲೋಕಸೇವಾ ಆಯೋಗದ ಸದಸ್ಯನೊಬ್ಬನಿಗೆ ೬೫ ವರ್ಷವಾದರೆ, ಆತ ನಿವೃತ್ತನಾಗುತ್ತಾನೆ.

೫. ಸದಸ್ಯರನ್ನು ತೆಗೆದುಹಾಕುವ ವಿಧಾನವು ಸುಲಭವಾಗಿಲ್ಲ. ರಾಷ್ಟ್ರಾಧ್ಯಕ್ಷರ ವಿನಾ ಮತ್ತಾರೂ ಅವರನ್ನು ತೆಗೆಯುವಂತಿಲ್ಲ. ಆತನ ನಡವಳಿಕೆ ಅಕ್ಷಮ್ಯವಾಗಿದೆ ಎಂಬ ಕಾರಣದಿಂದ ಮಾತ್ರ ತೆಗೆಯಬಹುದು. ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ರೊಬ್ಬರು ಅಂತಹ ದೋಷಾರೋಪಣೆಯ ಬಗ್ಗೆ ತನಿಖೆ ನಡೆಸಿ, ಅಂತಹುದೇ ತೀರ್ಮಾನಕ್ಕೆ ಬರಬೇಕು. ಇಲ್ಲದೆ ಹೋದರೆ ರಾಷ್ಟ್ರಾಧ್ಯಕ್ಷರು ಸಹ ಲೋಕಸೇವಾ ಆಯೋಗದ ಸದಸ್ಯ ನೊಬ್ಬನನ್ನು ತೆಗೆಯುವಂತಿಲ್ಲ. ಆದರೆ ಲೋಕಸೇವಾ ಆಯೋಗದ ಸದಸ್ಯನೊಬ್ಬನು....

- ದಿವಾಳಿಯಾದರೆ
- ಬೇರೊಂದು ಕೆಲಸವನ್ನು ಒಪ್ಪಿಕೊಂಡರೆ
- ಮಾನಸಿಕ ಸ್ಥಿಮಿತತೆ ಕಳೆದುಕೊಂಡರೆ (ಹುಚ್ಚನಾದರೆ), ರಾಷ್ಟ್ರಪತಿಯವರು ಆತನನ್ನು ತೆಗೆಯಬಹುದು. ಜೊತೆಗೆ ಸದಸ್ಯರು ರಾಜಿನಾಮೆ ನೀಡಬಹುದು.

೬. ಸೇವೆ ಸಲ್ಲಿಸುತ್ತಿರುವ ಸದಸ್ಯರೊಬ್ಬರ ಸಂಬಳ ಸೌಲಭ್ಯಗಳನ್ನು ಆ ಸದಸ್ಯರಿಗೆ ಅನಾನುಕೂಲವಾಗುವಂತೆ ಮಾರ್ಪಾಟು ಮಾಡುವಂತಿಲ್ಲ.

೭. ಸದಸ್ಯತ್ವದಿಂದ ನಿವೃತ್ತಿಹೊಂದಿದ ಮೇಲೆ ಆ ರಾಜ್ಯದಲ್ಲಿ ಮತ್ತೆ ಯಾವ ಸರ್ಕಾರಿ ಪದವಿಗೂ ಅರ್ಹರಲ್ಲ, ಅದೇ ರೀತಿ ಕೇಂದ್ರ ಲೋಕಸೇವಾ ಆಯೋಗದ ನಿವೃತ್ತ ಸದಸ್ಯನನ್ನು ಕೇಂದ್ರ ಸರ್ಕಾರದ ಸ್ಥಾನಗಳಿಗೆ ನೇಮಿಸುವಂತಿಲ್ಲ.

೮. ಲೋಕಸೇವಾ ಆಯೋಗದ ವೆಚ್ಚವನ್ನು ಆಯಾ ರಾಜ್ಯದ ಸಂಚಿತ ನಿಧಿಯಿಂದ ಪೂರೈಸಲಾಗುತ್ತದೆ. ಅಂದರೆ ಶಾಸನಸಭೆಯ ಅಭಿಮತವು ಅವಶ್ಯಕವಲ್ಲ.

೯. ಕೇಂದ್ರ ಲೋಕಸೇವಾ ಆಯೋಗ ತನ್ನ ವಾರ್ಷಿಕ ವರದಿಯನ್ನು ರಾಷ್ಟ್ರಪತಿಯವರಿಗೆ ಸಲ್ಲಿಸಬೇಕು. ರಾಜ್ಯ ಲೋಕಸೇವಾ ಆಯೋಗವು ತನ್ನ ವಾರ್ಷಿಕ ವರದಿಯನ್ನು ರಾಜ್ಯಪಾಲರಿಗೆ ಸಲ್ಲಿಸಬೇಕು. ಆ ವರಿದಿಯು ಶಾಸನಸಭೆಯ ಮುಂದೆ ಮಂಡಿಸಲ್ಪಡಬೇಕು. ಸಚಿವ ಸಂಪುಟವು ಆಯೋಗದ ಸಲಹೆಯೊಂದನ್ನು ಅಂಗೀಕರಿಸಿಲ್ಲದಿದ್ದರೆ, ವರದಿಯನ್ನು ಮಂಡಿಸುವಾಗ ಅದರ ಜೊತೆಯಲ್ಲಿಯೇ ವಿವರಣಾ ಪತ್ರವೊಂದನ್ನು ಮಂಡಿಸಬೇಕು. ಶಾಸನಸಭೆಯು ಕರಡನ್ನು ಕುರಿತು ಚರ್ಚಿಸಿ, ತಪ್ಪುಮಾಡಿದವರನ್ನು ಟೀಕಿಸುತ್ತದೆ. ಸಂವಿಧಾನದ ಈ ಮೇಲ್ಕಂಡ ವಿಧಿಗಳು ಭಾರತದ ಲೋಕಸೇವಾ ಆಯೋಗಗಳಿಗೆ ಸ್ವತಂತ್ರ ಸ್ಥಾನಮಾನವನ್ನು ನೀಡಿವೆ.

### ೭.೬ ಪಾರಿಭಾಷಿಕ ಪದಕೋಶ

| | |
|---|---|
| Administration | - ಆಡಳಿತ |
| Ministiare | - ಸೇವೆ |
| Cabinet | - ಮಂತ್ರಿಮಂಡಲ, ಸಚಿವ ಸಂಪುಟ |
| Collector | - ಜಿಲ್ಲಾಧಿಕಾರಿ |
| Magistrate | - ನ್ಯಾಯಾಧೀಶ |

Deputy Commissioner - ಜಿಲ್ಲಾಧಿಕಾರಿ
Union Public service Commission - ಕೇಂದ್ರೀಯ ಲೋಕ ಸೇವಾ ಆಯೋಗ
Collective Responsibility - ಸಾಮುದಾಯಿಕ ಜವಾಬ್ದಾರಿ

### ೭.೭ ಪ್ರಶ್ನೆಗಳು

### ಒಂದು ಅಂಕದ ಪ್ರಶ್ನೆಗಳು

೧. ಆಡಳಿತ ಎಂದರೇನು?
೨. ಇ.ಎನ್. ಗ್ಲಾಡನ್ ಪ್ರಕಾರ ಆಡಳಿತ ಎಂದರೇನು?
೩. ನಾಗರಿಕ ಸೇವೆ ಎಂದರೇನು?
೪. ಉಪರಾಷ್ಟ್ರಪತಿಯನ್ನು ಆಯ್ಕೆ ಮಾಡುವವರು ಯಾರು?
೫. ರಾಜ್ಯಸಭೆಯ ಅಧ್ಯಕ್ಷರು ಯಾರು?
೬. ಆಡಳಿತ ಎಂಬುದು ಯಾವ ಭಾಷೆಯ ಪದದಿಂದ ಬಂದಿದೆ?
೭. ರಾಷ್ಟ್ರಪತಿಯವರ ಅಧಿಕಾರಾವಧಿ ಎಷ್ಟು?
೮. ರಾಜ್ಯಪಾಲರನ್ನು ನೇಮಿಸುವವರು ಯಾರು?
೯. ಪ್ರಧಾನಮಂತ್ರಿಯನ್ನು ಯಾರು ನೇಮಕ ಮಾಡುತ್ತಾರೆ?
೧೦. ರಾಜ್ಯದ ಮೊದಲ ಪ್ರಜೆ ಯಾರು?
೧೧. ಕೇಂದ್ರ ಆಯೋಗವು ಯಾರಿಗೆ ವರದಿಯನ್ನು ಸಲ್ಲಿಸಬೇಕು?

### ಎರಡು ಅಂಕಗಳ ಪ್ರಶ್ನೆಗಳು

೧. ಪ್ರಜಾಪ್ರಭುತ್ವದ ಪ್ರಮುಖ ವ್ಯವಸ್ಥೆಗಳು ಯಾವುವು?
೨. ಯಾವ ಕಾರಣದಿಂದ ಲೋಕ ಸೇವಾ ಆಯೋಗದ ಸದಸ್ಯನನ್ನು ತೆಗೆಯಬಹುದು?
೩. ಕೇಂದ್ರೀಯ ಸೇವೆಯ ಆಯ್ಕೆ ನಡೆಯುವ ವಿಧಾನ?
೪. ಪ್ರಧಾನಮಂತ್ರಿಯವರ ಅಧಿಕಾರವಧಿ ಎಷ್ಟು? ಇವರನ್ನು ಪದಚ್ಯುತಗೊಳಿಸಬಹುದೆ?
೫. ನಾಗರಿಕ ಸೇವೆಯನ್ನು ಕುರಿತು ಲ್ಯಾರ್ಡ್ ಸ್ಟ್ಯಾಂಪ್‌ರವರು ನೀಡಿರುವ ವ್ಯಾಖ್ಯೆ ಏನು?

### ಐದು ಅಂಕದ ಪ್ರಶ್ನೆಗಳು

೧. ಆಡಳಿತದ ಅರ್ಥ ಮತ್ತು ವ್ಯಾಪ್ತಿಯನ್ನು ತಿಳಿಸಿ.
೨. ಪ್ರಜಾಪ್ರಭುತ್ವದಲ್ಲಿ ಆಡಳಿತದ ಪಾತ್ರವನ್ನು ವಿವರಿಸಿ.
೩. ನಾಗರಿಕ ಸೇವೆಗಳ ಅರ್ಥ ಮತ್ತು ಲಕ್ಷಣಗಳನ್ನು ಚರ್ಚಿಸಿ.
೪. ಕೇಂದ್ರೀಯ ಆಡಳಿತ ವ್ಯವಸ್ಥೆಯ ವಿವಿಧ ಹಂತಗಳನ್ನು ವಿಶ್ಲೇಷಿಸಿ.
೫. ರಾಜ್ಯದ ಆಡಳಿತ ವ್ಯವಸ್ಥೆಯ ಹಂತಗಳನ್ನು ಬರೆಯಿರಿ.
೬. ಜಿಲ್ಲಾಡಳಿತದ ಮಹತ್ವವನ್ನು ವಿವರಿಸಿ.

೭. ಜಿಲ್ಲಾಧಿಕಾರಿಯ ಪ್ರಮುಖ ಕಾರ್ಯಗಳನ್ನು ಚರ್ಚಿಸಿ.

೮. ಅಖಿಲ ಭಾರತೀಯ ಸೇವೆಗಳನ್ನು ವಿವರಿಸಿ.

೯. ಕೇಂದ್ರೀಯ ಲೋಕಸೇವಾ ಆಯೋಗದ ರಚನೆ ಹಾಗೂ ಕಾರ್ಯಗಳನ್ನು ತಿಳಿಸಿ.

೧೦. ರಾಜ್ಯ ಲೋಕಸೇವಾ ಆಯೋಗದ ಮಹತ್ವವನ್ನು ತಿಳಿಸಿ.

ಅಧ್ಯಾಯ ೮

# ಭಾರತದ ಪ್ರಜಾಪ್ರಭುತ್ವದ ಮುಂದಿರುವ ಸವಾಲುಗಳು

## ೮.೧ ಅಸಮಾನತೆ

ಮನುಷ್ಯನು ಹುಟ್ಟಿನಿಂದಲೇ ಸಮಾನವಾಗಿರುವುದಿಲ್ಲ ಮತ್ತು ಸಂಪೂರ್ಣ ಸಮಾನತೆಯನ್ನು ಎಂದಿಗೂ ಕೈಗೂಡಿಸಿಕೊಳ್ಳಲಾಗುವುದಿಲ್ಲ. ವಾಸ್ತವವಾಗಿ ನಿಸರ್ಗವೇ ಮನುಷ್ಯರನ್ನು ಅಸಮಾನರನ್ನಾಗಿ ಮಾಡಿರುತ್ತದೆ, ಕೆಲವು ಜನರು ಭಾರಿ ಬುದ್ಧಿಶಕ್ತಿಯನ್ನು ಪಡೆದಿರುತ್ತಾರೆ., ಕೆಲವರಲ್ಲಿ ಭಾರಿ ದೈಹಿಕ ಶಕ್ತಿ ಇರುತ್ತದೆ. ಕೆಲವರಂತೂ ಹುಟ್ಟಿನಿಂದಲೇ ಅಪೂರ್ವ ದೈವದತ್ತಗುಣಶಕ್ತಿಗಳನ್ನು ಪಡೆದಿರುತ್ತಾರೆ. ಇದನ್ನು ನಿಸರ್ಗದತ್ತ ಅಸಮಾನತೆ ಎಂದು ಗುರುತಿಸುತ್ತೇವೆ. ಆದರೆ ಮತ್ತೊಂದು ರೀತಿಯ ಅಸಮಾನತೆ ಮಾನವ ನಿರ್ಮಿತ ವಾದದ್ದು. ಸಾಮಾಜಿಕ ಆರ್ಥಿಕ ರಚನೆ ಕೆಲವರಿಗೆ ಮಾತ್ರ ಅವಕಾಶಗಳನ್ನು ನೀಡಿ ಹಲವರನ್ನು ಅದರಿಂದ ವಂಚಿತರನ್ನಾಗಿ ಮಾಡುತ್ತದೆ. ಪ್ರಜಾಪ್ರಭುತ್ವದಲ್ಲಿ ಈ ರೀತಿಯ ಮಾನವ ನಿರ್ಮಿತ ಅಸಮಾನತೆಯ ವಿರುದ್ಧ ನಿರಂತರ ಹೋರಾಟ ನಡೆಯುತ್ತಿದೆ. ಗ್ಲೋವನ್ನಿ ಸಾರ್ತೋರಿ ಅವರು ತಮ್ಮ 'ಪ್ರಜಾಸತ್ತಾತ್ಮಕ ಸಿದ್ಧಾಂತ' ಎಂಬ ಗ್ರಂಥದಲ್ಲಿ ಇದನ್ನು ಉಲ್ಲೇಖಿಸಿದ್ದಾರೆ. ಜಗತ್ತಿನ ಎಲ್ಲೆಡೆಗಳಲ್ಲಿ ಸಾಮಾಜಿಕ ನ್ಯಾಯವನ್ನೇ ಗುರಿಯಾಗಿಟ್ಟುಕೊಂಡ ಚಳುವಳಿಗಳು ನಡೆಯುತ್ತವೆ ಮತ್ತು ಇವುಗಳು ಸಮಾನತೆಯನ್ನು ಸಾಧಿಸಲು ವಿಶೇಷ ಗಮನವನ್ನು ನೀಡಿರುತ್ತವೆ.

### ಅ. ಜಾತಿ ಮತ್ತು ಲಿಂಗ

ಭಾರತದ ಸಂವಿಧಾನದ ೩೩೦ನೇ ವಿಧಿ ಅನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಕ್ರಮವಾಗಿ ೭೯ ಮತ್ತು ೩೮ ಸ್ಥಾನಗಳನ್ನು ಲೋಕಸಭೆಯಲ್ಲಿ ಮೀಸಲಾಗಿವೆ. ಸಂವಿಧಾನ ಜಾರಿಗೆ ಬಂದಾಗ ಕೇವಲ ಮೊದಲ ೧೦ ವರ್ಷಗಳ ವರೆಗೆ ಮೀಸಲು ಕ್ಷೇತ್ರಗಳು ಇರಬೇಕೆಂದಿದ್ದರೂ ಪ್ರತಿ ಹತ್ತು ವರ್ಷಕ್ಕೊಮ್ಮೆ ಅದನ್ನು ವಿಸ್ತರಿಸಲಾಗಿದೆ. ಪ್ರಸ್ತುತವಾಗಿ ಅದು ೨೦೧೦ನೇ ಇಸವಿಯವರೆಗೆ ಮುಂದುವರೆದಿದೆ. ರಾಜ್ಯ ವಿಧಾನ ಸಭೆಗಳಲ್ಲೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸ್ಥಾನಗಳನ್ನು ಮೀಸಲಿಡಲಾಗಿದೆ. ಕರ್ನಾಟಕದಲ್ಲಿ ೩೩ ವಿಧಾನಸಭಾ ಕ್ಷೇತ್ರಗಳನ್ನು ಪರಿಶಿಷ್ಟ ಜಾತಿಯವರಿಗೆ ಮತ್ತು ೨ ಕ್ಷೇತ್ರಗಳನ್ನು ಪರಿಶಿಷ್ಟ ಬುಡಕಟ್ಟು ಜನಾಂಗದವರಿಗೆ ಮೀಸಲಿಡಲಾಗಿದೆ.

ಸ್ಥಳೀಯ ಸರ್ಕಾರಗಳಲ್ಲೂ ಪರಿಶಿಷ್ಟ ಜಾತಿ, ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಮೀಸಲಾತಿಯನ್ನು ವಿಸ್ತರಿಸಲಾಗಿದೆ. ಗ್ರಾಮ ಪಂಚಾಯಿತಿಯಲ್ಲಿ ಶೇ. ೧೫

ಕ್ಕಿಂತ ಕಡಿಮೆ ಇಲ್ಲದಂತೆ ಪರಿಶಿಷ್ಟ ಜಾತಿಗೆ ಮತ್ತು ಪರಿಶಿಷ್ಟ ಪಂಗಡಕ್ಕೆ ಶೇ. ೩ ಕ್ಕಿಂತ ಕಡಿಮೆ ಇಲ್ಲದಂತೆ ಮೀಸಲಾತಿ ಇರಬೇಕು. ಹಿಂದುಳಿದ ವರ್ಗದವರಿಗೆ ಗ್ರಾಮ ಪಂಚಾಯಿತಿಯ ಒಟ್ಟು ಸ್ಥಾನಗಳ ೧/೩ ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಕ್ಕೆ ಹಾಗೂ ಎಲ್ಲಾ ಮೀಸಲಿಟ್ಟ ವರ್ಗಗಳಲ್ಲಿ ಹಾಗೂ ಮೀಸಲಿಡದ ವರ್ಗದಲ್ಲಿ ೧/೩ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕು. ತಾಲೂಕು ಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ತಾಲೂಕಿನಲ್ಲಿರುವ ಜನಸಂಖ್ಯೆಗೆ ತಕ್ಕಂತೆ ಮೀಸಲಾತಿ ಇರಬೇಕು. ಒಟ್ಟು ಸ್ಥಾನಗಳ ೧/೩ ಭಾಗ ಹಿಂದುಳಿದ ವರ್ಗ ಹಾಗೂ ಎಲ್ಲಾ ವರ್ಗಗಳ ಸ್ಥಾನಗಳಲ್ಲಿ ೧/೩ ಭಾಗಕ್ಕೆ ಕಡಿಮೆ ಇಲ್ಲದಷ್ಟು ಮಹಿಳಾ ಮೀಸಲಾತಿ ಇರಬೇಕು. ಜಿಲ್ಲಾ ಪಂಚಾಯತ್‌ಗೆ ಚುನಾಯಿತರಾಗುವ ಸದಸ್ಯರಲ್ಲಿ ಮೀಸಲಾತಿ ನಿಯಮ ಅನುಸರಿಸಲಾಗಿದ್ದು ಪರಿಶಿಷ್ಟ ಜಾತಿಗೆ ಶೇ ೧೫ ಕ್ಕಿಂತ ಕಡಿಮೆ ಇಲ್ಲದಂತೆ ಹಿಂದುಳಿದ ಜಾತಿಗಳಿಗೆ ೧/೩ ಭಾಗ ಮತ್ತು ಈ ಎಲ್ಲಾ ಭಾಗಗಳಲ್ಲೂ ೧/೩ ಭಾಗ ಮಹಿಳೆಯರಿಗೆ ಮೀಸಲಿಡಲಾಗಿದೆ. ಹೀಗೆ ರಚಿತವಾದ ಜಿಲ್ಲಾ ಪಂಚಾಯತ್‌ನಲ್ಲಿ ಚುನಾಯಿತ ಅಧ್ಯಕ್ಷ, ಉಪಾಧ್ಯಕ್ಷರ ಸ್ಥಾನಗಳನ್ನು ಸರ್ಕಾರ ನಿರ್ವಹಿಸುವ ರೀತಿಯಲ್ಲಿ ಮೀಸಲಾತಿಯನ್ನು ನೀಡಲಾಗಿದೆ. ಪ್ರತಿಯೊಂದು ಮುನಿಸಿಪಾಲಿಟಿಯಲ್ಲೂ ಪರಿಶಿಷ್ಟ ಜಾತಿ, ಪರಿಶಿಷ್ಟ ಬುಡಕಟ್ಟು, ಮಹಿಳೆಯರಿಗೆ ೧/೩ ಸ್ಥಾನ ಮತ್ತು ಹಿಂದುಳಿದವರಿಗೆ ಸದಸ್ಯ ಸ್ಥಾನಗಳನ್ನು ಮತ್ತು ಅಧ್ಯಕ್ಷ ಸ್ಥಾನಗಳನ್ನು ಮೀಸಲಿಡಲು ರಾಜ್ಯಕ್ಕೆ ಅಧಿಕಾರವಿದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರಿಯಲ್ಲೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಮಹಿಳಾ ಮೀಸಲಾತಿಯನ್ನು ನೀಡಲಾಗಿದೆ.

**ಆ. ಮೀಸಲಾತಿ ನ್ಯಾಯಯುತವಾದುದೇ?**

ಭಾರತದಲ್ಲಿ ಅನಿಷ್ಟ ಪದ್ಧತಿಯಾಗಿರುವ ಅಸ್ಪೃಶ್ಯತೆ ಸಂಪೂರ್ಣವಾಗಿ ಮಾಯವಾಗಿಲ್ಲ. ಪುರುಷ ಪ್ರಧಾನ ಸಮಾಜವಾದ ಭಾರತದಲ್ಲಿ ಮಹಿಳೆಯರನ್ನು ಎರಡನೇ ದರ್ಜೆಯ ಪ್ರಜೆಗಳಾಗಿ ನೋಡುವ ದೃಷ್ಟಿಕೋನ ಬದಲಾಗಿಲ್ಲ. ಸಮಾಜದ ಎಲ್ಲ ವರ್ಗಗಳಲ್ಲೂ ಅನೇಕರು ಶೈಕ್ಷಣಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವುದರಿಂದ ಕಂದಾಚಾರ ಮತ್ತು ಅಜ್ಞಾನ ತಾಂಡವವಾಡುತ್ತಿರುವ ಈ ದೇಶದಲ್ಲಿ 'ಸಾಮಾಜಿಕ ಸಮಾನತೆ' ಪೂರ್ಣವಾಗಿ ಆಚರಣೆಯಲ್ಲಿ ಇಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಅಸ್ಪೃಶ್ಯತೆ ವಿರುದ್ಧ ಅನೇಕರು ಚಳುವಳಿಯನ್ನು ನಡೆಸಿದರು. ಸ್ವತಂತ್ರ ಭಾರತದ ಸಂವಿಧಾನವು ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಅಳವಡಿಸಿರುವ ನಿಯಮ ಪರಿಣಾಮಕಾರಿಯಾಗಿದೆ. ಮತ್ತು ಮಾನವನ ಗೌರವವನ್ನು ಎತ್ತಿ ಹಿಡಿಯುತ್ತದೆ. ಅಸ್ಪೃಶ್ಯತೆಯನ್ನು ಅಳಿಸಿ ಹಾಕಲು ಮೀಸಲಾತಿ ಅಗತ್ಯವಾಗಿದ್ದರೂ, ವಿದ್ಯೆ ಹಾಗೂ ವೈಜ್ಞಾನಿಕ ಪ್ರಗತಿ ಮೂಲಕ ಪ್ರಜೆಗಳಲ್ಲಿ ಅರಿವನ್ನು ಮೂಡಿಸಿ ಅದರ ವಿರುದ್ಧ ತಿಳುವಳಿಕೆಯನ್ನುಂಟುಮಾಡಬೇಕು. ಮೀಸಲಾತಿ ಬಗ್ಗೆ ಪ್ರಜಾಪ್ರಭುತ್ವದಲ್ಲಿ ಟೀಕೆಗಳಿರುವುದು ಸಹಜ. ಸಮಾಜದಲ್ಲಿ ಅತ್ಯಂತ ಕಡುಬಡತನದಿಂದ ನರಳುತ್ತಿದ್ದ ನೊಂದ ಜೀವಿಗಳು ಸಮಾನತೆ ಮತ್ತು ಸ್ವಾಭಿಮಾನ ಪಡೆಯುವವರೆಗೆ (ಪ್ರಸ್ತುತವಾಗಿ ೨೦೧೦ನೇ ಇಸವಿಯವರೆಗೆ ಪರಿಶಿಷ್ಟ

ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಮೀಸಲಾತಿಯನ್ನು ವಿಸ್ತರಿಸಲಾಗಿದೆ) ಮೀಸಲು ನಿಯಮ ಮುಂದುವರೆಯಬೇಕು. ಗ್ರಾಮೀಣ ಪ್ರದೇಶಗಳ ಬಡ ರೈತರ ಮಕ್ಕಳ ಶೈಕ್ಷಣಿಕ ಮತ್ತು ಆರ್ಥಿಕ ಪ್ರಗತಿಗೆ ಆದ್ಯತೆ ನೀಡಬೇಕು. ಮೀಸಲು ನಿಯಮ ಸಲ್ಲುವವರಿಗೆ, ಅಂದರೆ ಒಮ್ಮೆ ಮೀಸಲಾತಿಯನ್ನು ಪಡೆದು ಮಂತ್ರಿಗಳಾಗಿರುವವರು, ವೈದ್ಯರಾಗಿರುವವರು, ಇಂಜಿನಿಯರ್ ಗಳಾಗಿರುವವರು, ಐ.ಎ.ಎಸ್, ಐ.ಎಫ್.ಎಸ್, ಐ.ಪಿ.ಎಸ್. ಅಧಿಕಾರಿಗಳಾಗಿ ರುವವರು, ಉಪನ್ಯಾಸಕರಾಗಿರುವವರು ಮತ್ತು ಇನ್ನೂ ಮುಂತಾದ ಉನ್ನತ ಸ್ಥಾನಮಾನ ಗಳನ್ನು ಅನುಭವಿಸುತ್ತಿರುವವರ ಮಕ್ಕಳಿಗೆ ಮೀಸಲಾತಿಯನ್ನು ತಡೆದು, ಇದುವರೆಗೆ ಆ ಮೀಸಲಾತಿ ಸೌಲಭ್ಯವನ್ನು ಪಡೆಯದೇ ಇರುವ ಕುಟುಂಬದ ಮಕ್ಕಳಿಗೆ ಅನ್ವಯವಾದಾಗ ಮಾತ್ರ ಮೀಸಲಾತಿ ನೀತಿ ಸಾರ್ಥಕವಾಗುತ್ತದೆ ಮತ್ತು ಸಮಾಜದಲ್ಲಿ ಸಮಾನತೆ ಉಂಟಾಗುತ್ತದೆ.

### ೮.೨ ಅನಕ್ಷರತೆ

### ಅ. ಪ್ರಜಾಪ್ರಭುತ್ವಕ್ಕೆ ತೊಡಕು

ಪ್ರಜಾಪ್ರಭುತ್ವದ ವೈರಿಯೆಂದರೆ ಅಲ್ಲಿನ ಪ್ರಜೆಗಳ ಅನಕ್ಷರತೆಯೇ ಆಗಿದೆ. ಪ್ರಜೆಗಳು ಅನಕ್ಷರಸ್ಥರಾದರೆ ಉತ್ತಮ ಸರಕಾರವನ್ನು ಸ್ಥಾಪಿಸಲು ಅಸಾಧ್ಯವಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳಾಗಿರುವುದರಿಂದ ಉತ್ತಮ ನಾಗರಿಕರೆನಿಸಿಕೊಳ್ಳಲು ಹಾಗೂ ರಾಜ್ಯ ಮತ್ತು ಸರಕಾರದ ಎಲ್ಲ ಚಟುವಟಿಕೆಗಳಲ್ಲಿ ಅರ್ಥಪೂರ್ಣವಾಗಿ ಭಾಗವಹಿಸಲು ಸಾಕ್ಷರತೆ ಅವಶ್ಯಕವಾಗಿದೆ. ಪ್ರಜಾಪ್ರಭುತ್ವವು ತಾತ್ವಿಕವಾಗಿ ಶ್ರೇಷ್ಠ ಸರಕಾರ ವೆನಿಸಿದರೂ ಹಲವಾರು ರಾಷ್ಟ್ರಗಳಲ್ಲಿ ಅದು ಸಫಲವಾಗಿಲ್ಲ ಎಂಬುದಕ್ಕೆ ಅದರಲ್ಲಿರುವ ದೋಷಗಳಲ್ಲಿ ಬಹಳ ಪ್ರಮುಖವಾದುದೆಂದರೆ ಅನಕ್ಷರತೆಯೇ ಆಗಿದೆ.

### ಆ. ಕಡ್ಡಾಯ ಶಿಕ್ಷಣ

ಭಾರತ ಸಂವಿಧಾನದಲ್ಲಿ ಕಡ್ಡಾಯ ಶಿಕ್ಷಣಕ್ಕೆ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಸಂವಿಧಾನದ ೩ನೇ ಅಧ್ಯಾಯದಲ್ಲಿ ೫ನೇ ಮೂಲಭೂತ ಹಕ್ಕನ್ನಾಗಿ ನೀಡಲಾಗಿದೆ. ೩೦ನೇ ವಿಧಿಯ ಪ್ರಕಾರ, ಎಲ್ಲಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರು ಅವರದೇ ಆದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು, ನಡೆಸಿಕೊಂಡು ಹೋಗುವ ಹಕ್ಕನ್ನು ಹೊಂದಿದ್ದಾರೆ. ಶಿಕ್ಷಣ ಸಂಸ್ಥೆಗಳಿಗೆ ರಾಜ್ಯವು ಧನ ಸಹಾಯ ನೀಡುವಾಗ ಅಲ್ಪ ಸಂಖ್ಯಾತರಿಂದ ನಡೆಸುತ್ತಿದೆ ಅಥವಾ ಒಂದು ಧರ್ಮ, ಭಾಷೆಗೆ ಸೇರಿದೆ ಎಂಬ ಕಾರಣಕ್ಕಾಗಿ ಭಿನ್ನ ಭೇದ ಎಣಿಸಬಾರದು.

ಭಾರತ ಸಂವಿಧಾನದ ೪ನೇ ಅಧ್ಯಾಯವಾದ ರಾಜ್ಯ ನಿರ್ದೇಶಕ ತತ್ವಗಳಲ್ಲಿ, ೪೫ನೇ ವಿಧಿಯ ಅನುಗುಣವಾಗಿ ೧೪ ವರ್ಷಗಳವರೆಗಿನ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ದೊರೆಯುವಂತೆ ರಾಜ್ಯ ಕ್ರಮ ತೆಗೆದುಕೊಳ್ಳಬೇಕು. ಆ ವಿಧಿ ಅನ್ವಯ, ಕಡ್ಡಾಯ ಶಿಕ್ಷಣವನ್ನು ಜಾರಿಗೆ ತರಲು ಕೇಂದ್ರ ಸರ್ಕಾರವು ೧೯೮೬ರಲ್ಲಿ ರೂಪಿಸಿದ ಹೊಸ ಶಿಕ್ಷಣ ನಿಯಮ ಸಾಕ್ಷರತೆ ಮತ್ತು ರಾಷ್ಟ್ರೀಯ ಸಮಗ್ರತೆಯನ್ನು ಒತ್ತಿ ಹೇಳುತ್ತದೆ. ಪ್ರೌಢ

ಶಾಲೆಯವರೆಗೆ ಉಚಿತ ಶಿಕ್ಷಣವನ್ನು ೧೬ ರಾಜ್ಯಗಳಲ್ಲಿ ಹಾಗೂ ೫ ಕೇಂದ್ರಾಡಳಿತಗಳಲ್ಲಿ ಕೊಡಲಾಗುತ್ತಿದೆ. ಇತ್ತೀಚಿನ ಸರ್ವಶಿಕ್ಷಣ ಅಭಿಯಾನ ಕಾರ್ಯಕ್ರದ ಮೂಲಕವೂ ಕಡ್ಡಾಯ ಶಿಕ್ಷಣಕ್ಕೆ ಒತ್ತನ್ನು ನೀಡಲಾಗಿದೆ. ಅದಕ್ಕೆ ಪೂರಕವಾಗಿ ಕರ್ನಾಟಕ ಸರ್ಕಾರ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಮಾಡಿದೆ.

**ಕಡ್ಡಾಯ ಶಿಕ್ಷಣಕ್ಕೆ ಪೂರಕವಾದ ೯೩ನೇ ಸಂವಿಧಾನ ತಿದ್ದುಪಡಿ ಮಸೂದೆ**

೨೦೦೧ರ ನವೆಂಬರ್ ೨೮ ರಂದು ಸಂವಿಧಾನದ ೯೩ನೇ ತಿದ್ದುಪಡಿ ಮಸೂದೆ ಪಾಸಾಯಿತು. ೧೮ ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೆ ಶಿಕ್ಷಣವನ್ನು ಮೂಲಭೂತ ಹಕ್ಕಾಗಿಸ ಬೇಕೆಂಬ ಒತ್ತಾಯದ ನಡುವೆ ೬ ರಿಂದ ೧೪ ವರ್ಷ ವಯಸ್ಸಿನ ಮಕ್ಕಳಿಗೆ ಶಿಕ್ಷಣ ಕಡ್ಡಾಯ ಇದು ಈ ತಿದ್ದುಪಡಿಯ ಉದ್ದೇಶ. ಹುಟ್ಟಿನಿಂದ ಆರು ವರ್ಷದವರೆಗಿನ ಶಿಕ್ಷಣದ ಹಕ್ಕಿನ ಬಗೆಗಿನ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರವನ್ನು ಮಸೂದೆ ರಾಜ್ಯಗಳಿಗೆ ಬಿಟ್ಟಿದೆ. ಆದರೆ ರಾಜ್ಯದ ಒಪ್ಪಿಗೆಯ ಬಗೆಗೆ ಪ್ರಸ್ತಾಪಿಸಿಲ್ಲ. ಏಕ ರೀತಿಯ ಪ್ರಾಥಮಿಕ ಶಿಕ್ಷಣ ಎಂಬುದನ್ನೂ ಮಸೂದೆ ಮುರಿದಿದೆ. ಮಕ್ಕಳ ಈ ಕಡ್ಡಾಯ ಶಿಕ್ಷಣದ ಜವಾಬ್ದಾರಿ ಪೋಷಕ ರಿಗೂ ಇರುವುದನ್ನು ಈ ಮಸೂದೆ ಒತ್ತಿ ಹೇಳಿದೆ.

ಈ ಮಸೂದೆ ಪಾಸಾದ ೧೦ ವರ್ಷಗಳಲ್ಲಿ ರಾಜ್ಯ ಸರ್ಕಾರವೇ ಕಡ್ಡಾಯ ಶಿಕ್ಷಣದ ಜವಾಬ್ದಾರಿಯನ್ನು ಹೊರಲು ತಯಾರಾಗಬೇಕು ಮತ್ತು ೧೪ ವಯಸ್ಸಿನೊಳಗಿನ ಮಕ್ಕಳಿಗೆ ಕಡ್ಡಾಯ ಶಿಕ್ಷಣ ದೊರಕುವಂತೆ ನೋಡಿಕೊಳ್ಳುವ ಜವಾಬ್ದಾರಿಯೂ ಅದರದೇ ಆಗಿದೆ, ಎಂದು ಮಸೂದೆ ಸೂಚಿಸಿದೆ.

ವಿಧಿ 51 A(K) ಯು ಹೆತ್ತವರು, ಪೋಷಕರು ೧೪ ವರ್ಷದೊಳಗಿನ ಮಗುವಿಗೆ ಶಿಕ್ಷಣಾವಕಾಶ ಮಾಡಿ ಕೊಡುವುದು ಕರ್ತವ್ಯ ಎಂದಿದೆ, ಅದನ್ನೇ ಈ ಮಸೂದೆ ಮತ್ತೊಮ್ಮೆ ಸ್ಪಷ್ಟಪಡಿಸಿದೆ.

ಸೂಕ್ತ ಶಾಲೆ, ಸಾಕಷ್ಟು ಶಿಕ್ಷಕರು ಜೊತೆಗೆ ಮಕ್ಕಳಿಗೆ ಆರ್ಥಿಕ ಸಹಾಯ ಇಲ್ಲದೇ ಹೆತ್ತವರ ಆರ್ಥಿಕಾಭಿವೃದ್ಧಿಯಾದರೆ ಮಾತ್ರ ಈ ಮಸೂದೆಯ ಆಶಯ ಈಡೇರಬಹುದು.

**೮.೩ ಕೋಮುವಾದ**

**ಅ. ಪ್ರಜಾಪ್ರಭುತ್ವಕ್ಕೆ ತೊಡಕು**

"ರಾಷ್ಟ್ರದ ಸಾಮೂಹಿಕ ವಿಚಾರಗಳಿಗಿಂತ ಯಾವುದೇ ಒಂದು ನಿರ್ದಿಷ್ಟ ಧಾರ್ಮಿಕ ಹಕ್ಕುಗಳಿಗೆ ಹೆಚ್ಚು ಒತ್ತನ್ನು ನೀಡಿ ಅವುಗಳೇ ರಾಷ್ಟ್ರದ ವಿಚಾರಕ್ಕಿಂತ ಭಿನ್ನವಾದವುಗಳು ಮತ್ತು ಪ್ರಮುಖವಾದವುಗಳು ಎಂದು ಪ್ರತಿವಾದಿಸುವುದೇ ಕೋಮುವಾದ". ಕೆ.ಎಸ್. ಪಣಿಕ್ಕರ್‌ರವರು ಕೋಮುವಾದವನ್ನು ಹೀಗೆ ಅರ್ಥೈಸಿದ್ದಾರೆ. ಶೈಕ್ಷಣಿಕ ಕಾರ್ಖಾನೆ ಹಲವಾರು ವ್ಯಾಖ್ಯಾನಗಳನ್ನು ಕೋಮುವಾದ ಎಂಬ ಪದಕ್ಕೆ ನೀಡಿದೆ. ಆ ವ್ಯಾಖ್ಯಾನಗಳ ಅರ್ಥದಲ್ಲಿ ಕೋಮುವಾದ ಎಂದರೆ

'ಎಲ್ಲಾ ವಿಚಾರಗಳಿಗಿಂತ ಮಿಗಿಲಾದ ಒಂದು ವಿಚಾರ', 'ಒಂದು ತಪ್ಪು ಅರಿವು', 'ಅಲಭ್ಯವಾದ ಸಂಪನ್ಮೂಲವನ್ನು ಪಡೆಯುವುದಕ್ಕಾಗಿ ನಡೆಯುವ ಒಂದು ಹೋರಾಟ', 'ಹುದ್ದೆಗಳಿಗಾಗಿ ನಡೆಯುವ ಹೋರಾಟ'. ಕೋಮುವಾದ ಹಲವಾರು ಹಂತಗಳಲ್ಲಿ ತನ್ನ ಪ್ರಯೋಗವನ್ನು ನಡೆಸುತ್ತದೆ. ಅವುಗಳೆಂದರೆ, ವ್ಯಕ್ತಿ ಸಂಬಂಧಗಳು ಮತ್ತು ಆಸಕ್ತಿಗಳಿಂದ ಹಿಡಿದು ಸ್ಥಳೀಯ ಮಟ್ಟದವರೆಗೆ, ಸಂಸ್ಥೆಗಳು ಮತ್ತು ರಾಷ್ಟ್ರ ರಾಜಕಾರಣದಿಂದ ಹಿಡಿದು ಕೋಮು ಗಲಭೆಯವರೆಗೆ. ಇಂದು ಕೋಮುವಾದವು ಸಾಮಾಜಿಕ ಸಂಬಂಧಗಳನ್ನು ಮತ್ತು ರಾಜಕೀಯ ವ್ಯವಸ್ಥೆಯನ್ನು ಸಂಪೂರ್ಣವಾಗಿ ಆವರಿಸಿಕೊಂಡಿದೆ. ಹೀಗೆ ವಿಸ್ತರಿಸಿಕೊಂಡ ಕೋಮುವಾದವು ಆಂತರಿಕವಾಗಿ ಸಂಬಂಧವಿರುವ ಎರಡು ಪ್ರಮುಖ ವಿಷಯಗಳನ್ನು ಒಳಗೊಂಡಿರುತ್ತದೆ. ಮೊದಲನೆಯದಾಗಿ, ಸಮಾಜದಲ್ಲಿರುವ ಅರಿವಿನ ಸ್ಥಿತಿ, ಎರಡನೆಯ ದಾಗಿ, ಕೋಮುವಾದವನ್ನು ಅಧಿಕಾರದ ಒಂದು ಸಾಧನವನ್ನಾಗಿ ಬಳಸುವುದು ನೈಜವಾಗಿ ರಾಜಕೀಯ ಅಧಿಕಾರವನ್ನು ಪಡೆಯುವುದಕ್ಕಾಗಿಯೇ, ಅಲ್ಲದೇ ಅದು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ತರಗಳಲ್ಲಿ ಮತ್ತು ಹೆಚ್ಚು ಕಡಿಮೆ ಸಾಮಾಜಿಕ ಸಂಘಟನೆಯ ಎಲ್ಲಾ ಹಂತಗಳಲ್ಲಿ ಪ್ರಯೋಗವನ್ನು ನಡೆಸುತ್ತದೆ.

ನಮ್ಮ ಸಮಾಜದಲ್ಲಿ ಪ್ರಸ್ತುತವಾಗಿ ಅಸ್ತಿತ್ವದಲ್ಲಿರುವ ಸಾಮಾಜಿಕ ಅರಿವಿನ ಸ್ಥಿತಿಯ ಅವಿಭಾಜ್ಯ ವಿಚಾರವೆಂದರೆ ಧರ್ಮ. ಯಾರ್‍ಯಾರಿಗೆ ಒಂದು ಧರ್ಮದಲ್ಲಿ ನಂಬಿಕೆ ಇರುತ್ತದೋ ಅವರೆಲ್ಲ ಆ ಧರ್ಮದ ಆಧಾರದ ಮೇಲೆ ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಒಂದೇ ಧರ್ಮಕ್ಕೆ ಸೇರಿದವರಿಗೆ ಕೆಲವು ಸಾಮಾನ್ಯ ಲಕ್ಷಣಗಳಿರುತ್ತವೆ ಎಂದು ಭಾವಿಸಲಾಗಿದೆ ಮತ್ತು ನಂಬ ಲಾಗಿದೆ. ಈ ಒಂದು ಸಾಮಾನ್ಯ ಲಕ್ಷಣದ ಭಾವನೆಯನ್ನು ಧಾರ್ಮಿಕವಾಗಿ ಒಂದು ಗೂಡಿಸುವಿಕೆಗೆ ಬಳಸಿಕೊಳ್ಳುವುದು ಅಥವಾ ಕೋಮುವಾದಿ ಕ್ರೋಢೀಕರಣಕ್ಕೆ ಅನುಗುಣ ಸ್ಥಿತಿಯನ್ನು ನಿರ್ಮಾಣ ಮಾಡುವುದು. ಧಾರ್ಮಿಕ ನಂಬಿಕೆಗಳ ಆಧಾರದ ಮೇಲೆ ಸಮಾಜದ ಗುಂಪುಗಳನ್ನು ಒಂದುಗೂಡಿಸಿ ಆ ಮೂಲಕ ಅಧಿಕಾರ ಪಡೆಯುವುದು ಇಂದಿನ ಕೋಮು ವಾದದ ಗುರಿಯಾಗಿದೆ.

ಸಮಾಜದಲ್ಲಿ ಜಾತಿ ಮತ್ತು ಕೋಮುಭಾವನೆಯ ವಿಷಯವು ವ್ಯಾಪಕವಾಗಿ ಹರಡಿ ಶಾಂತಿ ಹಾಗೂ ಸೌಹಾರ್ದಯುತ ವಾತಾವರಣವನ್ನು ಕಲುಷಿತಗೊಳಿಸುತ್ತದೆ. ಈ ಅಂಶಗಳೇ ವಿಘಟನೆಗೆ ಅವಕಾಶ ಕಲ್ಪಿಸಿ ಪ್ರಜಾಪ್ರಭುತ್ವದ ಯಶಸ್ವಿ ಕಾರ್ಯಾಚರಣೆಗೆ ಅಡ್ಡಿಯನ್ನುಂಟು ಮಾಡಿವೆ.

### ಆ. ಜಾತ್ಯತೀತತೆ ಮತ್ತು ರಾಷ್ಟ್ರೀಯ ಏಕತೆಗಳಿಗೆ ಪ್ರೋತ್ಸಾಹ

ಭಾರತದ ಸಂವಿಧಾನಕ್ಕೆ ೧೯೭೬ರಲ್ಲಿ ೪೨ನೇ ತಿದ್ದುಪಡಿ ಮೂಲಕ "ಜಾತ್ಯತೀತ" (Secular) ಎಂಬ ಪದವನ್ನು ಸರ್ಕಾರ ಪ್ರಸ್ತಾವನೆಗೆ ಅಳವಡಿಸಿತು. 'ಜಾತ್ಯತೀತ' ಎಂಬ ಪದಕ್ಕೆ ವಿವಿಧ ಅರ್ಥಗಳಿವೆ. ಧಾರ್ಮಿಕವಾಗಿ ತಟಸ್ಥವಾಗಿರುವುದು ಜಾತ್ಯತೀತ ತತ್ವ ಎಂದು ಕೆಲವರು ಹೇಳಿದ್ದಾರೆ. ಎನ್‌ಸೈಕ್ಲೊಪಿಡಿಯಾ ಆಫ್ ಬ್ರಿಟಾನಿಕಾದ ಪ್ರಕಾರ, ಆಧ್ಯಾತ್ಮಿಕ

ವಿಷಯಗಳಿಗೆ ಗಮನ ಕೊಡದೆ ಇರುವುದು ಜಾತ್ಯತೀತವಾದ ಎಂದಿದೆ. ಜವಹರ್‌ಲಾಲ್ ನೆಹರು ತಮ್ಮ ಅಭಿಪ್ರಾಯಯನ್ನು ಮಂಡಿಸಿ, "ಜಾತ್ಯತೀತವಾದವೆಂದರೆ ಕೇವಲ ಲೌಕಿಕವಾದ ಅಲ್ಲ, ಅದರಲ್ಲಿ ಆಧ್ಯಾತ್ಮಿಕ ಅಂಶಗಳೂ ಇರುತ್ತವೆ" ಎಂದರು. ಅವರ ಪ್ರಕಾರ ಜಾತ್ಯತೀತ ವಾದ ನಾಲ್ಕು ಮುಖ್ಯ ತತ್ವಗಳನ್ನು ಒಳಗೊಂಡಿರಬೇಕು

ಅ. ಎಲ್ಲಾ ಧರ್ಮಗಳಿಗೂ ಸಮಾನ ಸ್ಥಾನಮಾನ ಇರಬೇಕು.

ಆ. ಧರ್ಮದ ವಿಷಯದಲ್ಲಿ ರಾಜ್ಯ ತಟಸ್ಥ ನೀತಿಯನ್ನು ಅನುಸರಿಸಬೇಕು.

ಇ. ಬಹು ಸಂಖ್ಯಾತರು ಮತ್ತು ಅಲ್ಪ ಸಂಖ್ಯಾತರು ಸಹಕಾರದಿಂದ ಜೀವನ ನಡೆಸಬೇಕು.

ಈ. ಸಾಮಾಜಿಕ ಜೀವನವನ್ನು ಜಾತ್ಯತೀಕರಣಗೊಳಿಸಬೇಕು.

ಭಾರತ ಸಂವಿಧಾನದಲ್ಲಿ ಜಾತ್ಯತೀತ ತತ್ವವನ್ನು ಅಳವಡಿಸಿಕೊಂಡಿರುವುದರಿಂದ, ಸರ್ಕಾರ ಯಾವ ರಾಷ್ಟ್ರಧರ್ಮವನ್ನು ಅಂಗೀಕರಿಸಿಲ್ಲ. ಎಲ್ಲ ಧರ್ಮವನ್ನು ಸಮಾನತೆಯಿಂದ ಕಂಡು, ಸಮಾನವಾಗಿ ಗೌರವಿಸುವುದು ರಾಷ್ಟ್ರದ ಗುರಿಯಾಗಿದೆ. ಮುಸ್ಲಿಮರು, ಕ್ರೈಸ್ತರು ಹಾಗೂ ಇತರ ಅಲ್ಪಸಂಖ್ಯಾತರು ಸರ್ಕಾರದಲ್ಲಿ ಸಚಿವರಾಗಿ, ಅಧಿಕಾರಿಗಳಾಗಿ ಮತ್ತು ನ್ಯಾಯಾಧೀಶ ರಾಗಿ ಸೇವೆ ಸಲ್ಲಿಸಿದ್ದಾರೆ ಮತ್ತು ಸಲ್ಲಿಸುತ್ತಿದ್ದಾರೆ. ಹೀಗೆ ಜಾತ್ಯತೀತವಾದ ಭಾರತ ಸಂವಿಧಾನದ ಪ್ರಧಾನ ಲಕ್ಷಣಗಳಲ್ಲಿ ಒಂದಾಗಿದೆ.

ಆದರೆ, ಅದರ ಕಾರ್ಯಾಚರಣೆಯಲ್ಲಿ ಇತಿ ಮಿತಿಗಳು ಕಂಡು ಬರುತ್ತವೆ. ಇತ್ತೀಚಿನ ದಿನಗಳಲ್ಲಿ ಪ್ರಾಂತೀಯ ಭಾವನೆ, ಜಾತೀಯತೆ ಮತ್ತು ಧರ್ಮಗಳು ರಾಜಕೀಯದ ಮೇಲೆ ಪ್ರಭಾವ ಬೀರಿ ದೇಶದ ವಿವಿಧ ಭಾಗಗಳಲ್ಲಿ ನಡೆದ ಮತೀಯ ಗಲಭೆಗಳು, ೧೯೯೨ರಲ್ಲಿ ಬಾಬರಿ ಮಸೀದಿ ಧ್ವಂಸ, ೨೦೦೩ ಮತ್ತು ೨೦೦೪ ರಲ್ಲಿ ನಡೆದ ಗುಜರಾತ್ ಕೋಮು ಗಲಭೆಗಳು ದೇಶದ ಏಕತೆಗೆ ಬೆದರಿಕೆಯನ್ನುಂಟು ಮಾಡಿದವು. ಆದ್ದರಿಂದ ಭಾರತದಲ್ಲಿ ಜಾತ್ಯತೀತ ಭಾವನೆ ಎಲ್ಲರಲ್ಲೂ ಬೆಳೆಯಲು, ರಾಷ್ಟ್ರದ ಏಕತೆಯನ್ನು ಸಾಧಿಸಲು ಕೆಲವು ನಿಯಮಗಳನ್ನು ಪಾಲಿಸುವುದು ಸೂಕ್ತವಾಗಿದೆ.

ಅ. ಸರ್ವಧರ್ಮ ಸಮಭಾವ ತತ್ವವನ್ನು ಕಟ್ಟುನಿಟ್ಟಾಗಿ ಅನುಸರಿಸುವುದು.

ಆ. ಮತೀಯ ಪಕ್ಷಗಳನ್ನು ಮತ್ತು ಸಂಘಗಳನ್ನು ರದ್ದು ಪಡಿಸುವುದು.

ಇ. ಪ್ರಜೆಗಳಲ್ಲಿ ಜಾತ್ಯಾತೀತ ಭಾವನೆ ಸಮರ್ಪಕವಾಗಿ ಬೆಳೆಯಲು ಅಗತ್ಯವಾದ ಮಾರ್ಗೋಪಾಯಗಳನ್ನು ಕಂಡುಹಿಡಿದು, ಜಾರಿಗೆ ತರುವುದು ಮತ್ತು

ಈ. ರಾಷ್ಟ್ರೀಯ ಭಾವನೆಯನ್ನು ರಚನಾತ್ಮಕವಾಗಿ ಬೆಳೆಸಿ, "ನಾವೆಲ್ಲರೂ ಭಾರತೀಯರು" ಎಂಬ ಭಾವನೆ ಉಂಟಾಗುವಂತೆ ಮಾಡುವುದು.

ಭಾರತದಂತಹ ಭೌಗೋಳಿಕತೆಯಲ್ಲಿ ವಿಶಾಲವಾದ, ಹಲವಾರು ಭಾಷೆಗಳನ್ನು, ವೈವಿಧ್ಯ ಮಯ ಸಂಸ್ಕೃತಿಯನ್ನು, ವಿಭಿನ್ನವಾದ ಉಡುಗೆ ತೊಡುಗೆಗಳನ್ನು ಹೊಂದಿರುವ ರಾಷ್ಟ್ರದಲ್ಲಿ ವೈವಿಧ್ಯತೆಯಲ್ಲಿ ಏಕತೆಯನ್ನು ಸಾಧಿಸುವುದು ಸುಲಭಸಾಧ್ಯವಾದ ಕಾರ್ಯವೇನಲ್ಲ. ಆದರೂ ಭಾರತ ಇತರೆ ರಾಷ್ಟ್ರಗಳಿಗೆ ಹೋಲಿಸಿದಾಗ ಆ ನಿಟ್ಟಿನಲ್ಲಿ ಸಾಕಷ್ಟನ್ನು ಸಾಧಿಸಿದೆ.

ಕೇಂದ್ರ ಸರ್ಕಾರವು ೧೯೬೧ರಲ್ಲಿ ರಾಷ್ಟ್ರೀಯ ಏಕತಾ ಸಮ್ಮೇಳನವನ್ನು ನವದೆಹಲಿಯಲ್ಲಿ ಕರೆದು, ಅದರ ಶಿಫಾರಸಿಗೆ ಅನುಗುಣವಾಗಿ ಅದೇ ವರ್ಷದ ಸೆಪ್ಟೆಂಬರ್ ತಿಂಗಳಲ್ಲಿ ರಾಷ್ಟ್ರೀಯ ಏಕತಾ ಮಂಡಳಿಯನ್ನು ರಚಿಸಿತು. ಇದರಲ್ಲಿ ಪ್ರಧಾನಮಂತ್ರಿ, ಕೇಂದ್ರ ಗೃಹಮಂತ್ರಿ, ಮುಖ್ಯಮಂತ್ರಿಗಳು, ರಾಜಕೀಯ ಪಕ್ಷಗಳ ಮುಖಂಡರು ಮುಂತಾದವರಿದ್ದರು. ಈ ಮಂಡಳಿಯು ರಾಜಕೀಯ ಪಕ್ಷಗಳಿಗೆ, ಪತ್ರಿಕೆಗಳಿಗೆ ಮತ್ತು ವಿದ್ಯಾರ್ಥಿಗಳಿಗೆ ನಡತೆ ಸಂಹಿತೆಯನ್ನು ರೂಪಿಸಿತು. ೧೯೬೨ರಲ್ಲಿ ಚೀನಾ ದೇಶ ಭಾರತದ ಮೇಲೆ ಆಕ್ರಮಣ ಮಾಡಿದಾಗ ರಾಷ್ಟ್ರೀಯ ಏಕತಾ ಮಂಡಳಿಯ ಕಾರ್ಯ ಸ್ಥಗಿತಗೊಂಡಿತು. ೧೯೬೬ - ೬೮ರ ಅವಧಿಯಲ್ಲಿ ಕೋಮು ಗಲಭೆಗಳು ಕೆಲವು ರಾಜ್ಯಗಳಲ್ಲಿ ಉಂಟಾದಾಗ, ರಾಷ್ಟ್ರೀಯ ಏಕತಾ ಮಂಡಲಿ ೧೯೬೮ರಲ್ಲಿ ಮತ್ತೆ ತನ್ನ ಕಾರ್ಯವನ್ನು ಪ್ರಾರಂಭಿಸಿದರೂ, ಬಹಳ ಕಾಲ ಕೆಲಸ ಮಾಡಲಿಲ್ಲ. ೧೯೮೦ ರಲ್ಲಿ ಮತ್ತೆ ಈ ಮಂಡಳಿ ಅಸ್ತಿತ್ವಕ್ಕೆ ಬಂದಿತು. ಪ್ರಧಾನಮಂತ್ರಿ ಇಂದಿರಾ ಗಾಂಧಿಯವರು ಅಧ್ಯಕ್ಷರಾಗಿದ್ದ ಈ ಮಂಡಳಿಯಲ್ಲಿ ೫೩ ಸದಸ್ಯರಿದ್ದರು. ೧೯೮೬ರಲ್ಲಿ ಪ್ರಧಾನಮಂತ್ರಿ ರಾಜೀವ್ ಗಾಂಧಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಕೇಂದ್ರ ಸರ್ಕಾರದ ಸಚಿವರು, ಮುಖ್ಯಮಂತ್ರಿಗಳು, ರಾಜಕೀಯ ಪಕ್ಷಗಳ ನಾಯಕರು ಮತ್ತು ಇತರ ಧುರೀಣರು ರಾಷ್ಟ್ರದ ಸಮಗ್ರತೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದರು. ಪ್ರಧಾನ ಮಂತ್ರಿಯವರು ಕೆಳಕಂಡ ವಿಷಯಗಳನ್ನು ಪರಿಶೀಲಿಸಲು ಒಪ್ಪಿದರು.

ಅ. ರಾಷ್ಟ್ರದ ಸಮಗ್ರತೆಗೆ ಅಪಾಯವನ್ನುಂಟುಮಾಡುವ ಮೂಲಭೂತವಾದವನ್ನು ಆಳವಾಗಿ ಅಧ್ಯಯನ ಮಾಡುವುದು.

ಆ. ಸರ್ಕಾರಿ ಸಮಾರಂಭಗಳಲ್ಲಿ ಧಾರ್ಮಿಕ ಸೇವೆಗಳ ನಿಷೇಧದ ಅಗತ್ಯ.

ಇ. ಗಲಭೆಗೊಳಗಾಗುವ ಪ್ರದೇಶಗಳ ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನ.

ಈ. ಜಾತ್ಯಾತೀತವಾದದ ವ್ಯಾಖ್ಯಾನ.

ಏಪ್ರಿಲ್ ೪, ೧೯೯೦ ರಂದು ಏಕತಾ ಮಂಡಳಿಯ ಸಭೆ ನಡೆದು ಪಂಜಾಬ್, ಕಾಶ್ಮೀರ್, ಅಯೋಧ್ಯೆ ಹಾಗೂ ಕೋಮು ಗಲಭೆಗಳ ಸಮಸ್ಯೆಗಳನ್ನು ಚರ್ಚಿಸಿತು.

ಸೆಪ್ಟೆಂಬರ್ ೨೨, ೧೯೯೦ ರಂದು ಮದ್ರಾಸಿನಲ್ಲಿ ನಡೆದ ಮತ್ತೊಂದು ಸಭೆಯಲ್ಲಿ ರಾಷ್ಟ್ರದ ಏಕತೆ ಬಗ್ಗೆ ಚರ್ಚೆಗಳು ನಡೆದು, ಶಾಂತಿ ರಕ್ಷಣೆಗಾಗಿ ರಾಜಕೀಯ ಪಕ್ಷಗಳಿಗೆ ಮತ್ತು ಧಾರ್ಮಿಕ ಮುಖಂಡರಿಗೆ ಏಕತಾ ಮಂಡಳಿ ಕರೆ ನೀಡಿತು. ಪುನರ್‌ರಚಿತ ೧೪೧ ಸದಸ್ಯರ ಮಂಡಳಿ ನವೆಂಬರ್, ೨, ೧೯೯೧ ರಂದು ನವದೆಹಲಿಯಲ್ಲಿ ಸಭೆ ಸೇರಿ, ಪ್ರಧಾನವಾಗಿ ಅಯೋಧ್ಯೆ ಸಮಸ್ಯೆಯನ್ನು ಚರ್ಚಿಸಿತು. ಆದರೆ ೧೯೯೨ ರಲ್ಲಿ ಬಾಬರಿ ಮಸೀದಿ ಧ್ವಂಸವಾಯಿತು. ಈ ಏಕತಾ ಮಂಡಳಿಯನ್ನು ರಾಜಕೀಯ ಪಕ್ಷಗಳ ನಾಯಕರು ಮತ್ತು ವಿವಿಧ ಕ್ಷೇತ್ರಗಳ ಪ್ರತಿಭಾವಂತ ವ್ಯಕ್ತಿಗಳು ಸದಸ್ಯರಾಗಿ ಇರುವುದು ಇದರ ಸಮರ್ಪಕ ಕಾರ್ಯ ನಿರ್ವಹಣೆಗೆ ಸಹಾಯಕವಾಗಿದೆ.

ಭಾರತದಾದ್ಯಂತ ಎಲ್ಲಾ ಜಿಲ್ಲಾಧಿಕಾರಿಗಳಿಗೂ ಕೋಮು ಸೌಹಾರ್ದ ವೇದಿಕೆಯನ್ನು ಅಸ್ತಿತ್ವಕ್ಕೆ ತರಲು ಸೂಚಿಸಲಾಗಿದೆ. ಪ್ರತಿ ಜಿಲ್ಲೆಯ ಜಿಲ್ಲಾಧಿಕಾರಿಗಳು ಎಲ್ಲ ಧಾರ್ಮಿಕ ಮುಖಂಡರನ್ನು ಎಲ್ಲಾ ರಾಜಕೀಯ ಪಕ್ಷಗಳ ಮುಖಂಡರನ್ನು ಮತ್ತು ಇತರೆಲ್ಲ ಕ್ಷೇತ್ರದ ಸಾಧಕರನ್ನು ಸೇರ್ಪಡೆ ಮಾಡಿಕೊಂಡು ಶಾಂತಿ ಸಮಿತಿಗಳನ್ನು ರಚಿಸಬೇಕು. ಏಕೆಂದರೆ ಎಲ್ಲಾ ಧರ್ಮೀಯರ ನಡುವೆ ಔಪಚಾರಿಕ ಮತ್ತು ಅನೌಪಚಾರಿಕ ಸಭೆಗಳು ನಡೆದರೆ ಕೋಮು ಗಲಭೆಗಳನ್ನು ತಡೆಗಟ್ಟಬಹುದಾಗಿದೆ ಎಂದು ಈ ನಿಟ್ಟಿನಲ್ಲಿ ಯೋಚಿಸಲಾಗಿದೆ.

**೮.೪ ಭಯೋತ್ಪಾದನೆ**

**ಅ. ಪ್ರಜಾಪ್ರಭುತ್ವಕ್ಕೆ ಸವಾಲು**

ಭಯೋತ್ಪಾದನೆ ಇಂದು ಜಗತ್ತನ್ನು ಕಾಡುತ್ತಿರುವ ಭೀಕರ ಸಮಸ್ಯೆ. ಇದು ವಿವಿಧ ರೂಪಗಳಲ್ಲಿ ತನ್ನ ಎಲ್ಲೆಯನ್ನು ವಿಸ್ತರಿಸಿಕೊಳ್ಳುತ್ತಾ ನಡೆದಿದೆ. ನಾಗರಿಕ ಬದುಕಿಗೆ ಭೀತಿಯೊಡ್ಡಿ ನೆಮ್ಮದಿಯಿಲ್ಲದಂತೆ ಮಾಡಿದೆ. ಕೊಲೆ, ಬಾಂಬ್ ಧಾಳಿ, ಕಟ್ಟಡಗಳನ್ನು ಸ್ಫೋಟ ಗೊಳಿಸುವುದು, ವಿಮಾನವನ್ನು ಅಪಹರಿಸುವುದು, ವ್ಯಕ್ತಿಗಳನ್ನು ಅಪಹರಿಸುವುದು ಹಾಗೂ ಮುಂತಾದವು ಭಯೋತ್ಪಾದನೆಯ ಭಯಾನಕ ಕೃತ್ಯಗಳು. ಇವುಗಳೆಲ್ಲವನ್ನು ಒಬ್ಬ ವ್ಯಕ್ತಿಯಾದರೂ ಮಾಡಬಹುದು ಅಥವಾ ಒಂದು ಗುಂಪು ಮಾಡಬಹುದು. ಇದರ ಉದ್ದೇಶ ಯಾವುದಾದರೂ ನಿರ್ದಿಷ್ಟವಾದ ರಾಜಕೀಯ ಕಾರಣವನ್ನು ಜಾರಿಗೊಳಿಸುವುದು. ಭಯೋತ್ಪಾದನೆ ಒಂದು ರಾಷ್ಟ್ರದ ಆಂತರಿಕವಾಗಿ ನಡೆಯಬಹುದು ಅಥವಾ ಅಂತರರಾಷ್ಟ್ರೀಯವಾಗಿರಬಹುದು. ಉದಾಹರಣೆಗೆ ಭಾರತದ ಜಮ್ಮು ಮತ್ತು ಕಾಶ್ಮೀರ, ಅಸ್ಸಾಂ, ಮಣಿಪುರ, ಮೇಘಾಲಯ, ನಾಗಾಲ್ಯಾಂಡ್ ರಾಜ್ಯಗಳಲ್ಲಿ ಅಸಮಾನತೆಯಿಂದ ಹುಟ್ಟಿಕೊಂಡ ಸಂಘಟನೆಗಳೂ ವಿದೇಶಿ ಶಕ್ತಿಗಳ ಪ್ರೇರಣೆಯಿಂದ ಭಯೋತ್ಪಾದನಾ ಸಂಘಟನೆಗಳಾಗಿ ಮಾರ್ಪಟ್ಟಿವೆ. ಈಗ ಭಾರತದಲ್ಲಿ ೧೪೨ ಭಯೋತ್ಪಾದನಾ ಸಂಘಟನೆಗಳಿವೆ. ಜಾಗತಿಕ ಭಯೋತ್ಪಾದನೆಯಲ್ಲಿ ಸೆಪ್ಟೆಂಬರ್ ೧೧, ೨೦೦೧ ಕಪ್ಪು ದಿನವಾಗಿ ಇತಿಹಾಸದಲ್ಲಿ ಸೇರಿ ಹೋಯಿತು. ಅಲ್‌ಖೈದಾ ಎಂಬ ಭಯೋತ್ಪಾದಕ ಸಂಘಟನೆ ಅಂದು ಅಮೆರಿಕಾ ಸಂಯುಕ್ತ ಸಂಸ್ಥಾನದ ನಾಲ್ಕು ವಿಮಾನಗಳನ್ನು ಅಪಹರಿಸಿ ಅಮೆರಿಕಾದ ಎರಡು ವಿಶ್ವ ವ್ಯಾಪಾರ ಕಟ್ಟಡವನ್ನು, ಪೆಂಟಗಾನ್ ಕಟ್ಟಡಗಳನ್ನು, ೩ ವಿಮಾನಗಳು ಡಿಕ್ಕಿ ಹೊಡೆದು ಸ್ಫೋಟಿಸಿದವು. ನಾಲ್ಕನೇ ವಿಮಾನ ಪೆನ್ಸಿಲ್ವೇನಿಯಾದಲ್ಲಿ ಅಪಘಾತಕ್ಕೀಡಾಯಿತು. ಈ ದುರಂತದಲ್ಲಿ ೨೬೦೦ ಕ್ಕಿಂತ ಹೆಚ್ಚು ಜನರು ವಿಶ್ವವ್ಯಾಪಾರ ಕೇಂದ್ರದಲ್ಲಿ, ೧೨೫ ಜನರು ಪೆಂಟಗಾನ್‌ನಲ್ಲಿ ಮತ್ತು ೨೫೬ ಜನರು ನಾಲ್ಕು ವಿಮಾನಗಳಲ್ಲಿ ಸತ್ತರು. ಇದು ಅಮೆರಿಕವನ್ನಷ್ಟೇ ಅಲ್ಲದೆ ಇಡೀ ಜಗತ್ತನ್ನು ನಡುಗಿಸಿದ ದುರಂತ.

**ಆ. ನಿಯಂತ್ರಣಾ ಕ್ರಮಗಳು**

ಪ್ರಜಾಪ್ರಭುತ್ವದ ಯಶಸ್ಸು, ಪ್ರಜೆಗಳ ಭಾಗವಹಿಸುವಿಕೆಯಿಂದ ಮಾತ್ರ ಸಫಲವಾಗುತ್ತದೆ

ಅಥವಾ ಯಶಸ್ವಿಯಾಗುತ್ತದೆ. ಉದಾಹರಣೆಗೆ ಮತದಾರ ಸಾಕಷ್ಟು ಸಂಖ್ಯೆಯಲ್ಲಿ ಮತಗಟ್ಟೆಗೆ ಬಂದು ಮತದಾನ ಮಾಡಿ ತನ್ನ ಪ್ರತಿನಿಧಿಯನ್ನು ಸಮರ್ಥವಾಗಿ ಆಯ್ಕೆ ಮಾಡಲು ಸಾಧ್ಯವಾದಾಗ ಮಾತ್ರ ಬಹುಸಂಖ್ಯಾತರ ಪ್ರತಿನಿಧಿ ಆಯ್ಕೆಯಾಗಿ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆ. ಆದರೆ ಭಯೋತ್ಪಾದಕರು ತಮ್ಮ ರಾಜಕೀಯ ಇಚ್ಛಾಶಕ್ತಿಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ಮತದಾರರಲ್ಲಿ ಅಭ್ಯರ್ಥಿಗಳನ್ನು ಕೊಲೆ ಮಾಡುವುದರ ಮೂಲಕ, ಮತದಾರರನ್ನು ಕೊಲೆ ಮಾಡುವುದರ ಮೂಲಕ, ಮತಗಟ್ಟೆಗಳನ್ನು ಧ್ವಂಸ ಮಾಡುವ ಮೂಲಕ ಇನ್ನು ಹಲವಾರು ವಿಧಾನಗಳ ಮೂಲಕ ಮತದಾರರಲ್ಲಿ ಭಯವನ್ನು ಹುಟ್ಟುಹಾಕಿ ಅವರನ್ನು ಮತಗಟ್ಟೆಗೆ ಬರುವುದನ್ನು ತಡೆಗಟ್ಟುತ್ತಾರೆ. ಆ ಮೂಲಕ ಮತದಾನ ಶೇಕಡ ೧೫ ರಿಂದ ೨೦ಕ್ಕೆ ಇಳಿಮುಖವಾಗುತ್ತದೆ. ಆ ಮೂಲಕ ಪ್ರಜಾಪ್ರಭುತ್ವದ ತೊಡಕಿಗೆ ಅಥವಾ ನಾಶಕ್ಕೆ ಅದು ಪ್ರಾರಂಭದ ನಾಂದಿಯಾಗುತ್ತದೆ.

**ಪೋಟಾ(POTA -Prevention of Terrorism Act)ದಂತ ಶಾಸನೀಯ ವಿಧಾನಗಳಿಂದ ಮತ್ತು ಸಾಮಾಜಿಕ ಆರ್ಥಿಕ ಅಭಿವೃದ್ಧಿ ಭಯೋತ್ಪಾದನೆಗೆ ಒಂದು ಪರಿಹಾರ.**

ಭಾರತದಲ್ಲಿ ಮುನ್ನೆಚ್ಚರಿಕೆ ಬಂಧನ ಕಾಯ್ದೆಯ ಅಡಿಯಲ್ಲಿ ವಿಚಿದ್ರಕಾರಕ ಅಥವಾ ಅನುಮಾನಾಸ್ಪದ ವ್ಯಕ್ತಿಗಳನ್ನು ಬಂಧಿಸುವುದಕ್ಕಾಗಿ ಹಲವಾರು ಶಾಸನಗಳು ಅಸ್ತಿತ್ವಕ್ಕೆ ಬಂದು ಅಂತ್ಯವನ್ನು ಕಂಡುಕೊಂಡಿವೆ.ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ೧೯೫೦ರಲ್ಲಿ ಪಾರ್ಲಿಮೆಂಟ್ ಮುನ್ನೆಚ್ಚರಿಕೆ ಬಂಧನ ಕಾಯ್ದೆಯನ್ನು ಅಂಗೀಕರಿಸಿತು. ಈ ಕಾಯ್ದೆ ೧೯೬೯ ರಲ್ಲಿ ಅಂತ್ಯಗೊಂಡಿತು. ೧೯೭೧ರಲ್ಲಿ ಸಂಸತ್ತು "ಆಂತರಿಕ ಭದ್ರತಾ ಕಾಯ್ದೆ" [MISA - Maintanance of Internal SecurityAct] ಯನ್ನು ಅನುಷ್ಠಾನಕ್ಕೆ ತಂದಿತು. ೧೯೭೮ರ ಏಪ್ರಿಲ್ ತಿಂಗಳಿನಲ್ಲಿ ಜನತಾ ಸರ್ಕಾರ ಈ ಕಾಯ್ದೆಯನ್ನು ರದ್ದುಗೊಳಿಸಿತು. ೧೯೮೦ ರಲ್ಲಿ ಸಂಸತ್ತು "ರಾಷ್ಟ್ರೀಯ ಭದ್ರತಾ ಕಾಯ್ದೆ" [National Security Act]ಯನ್ನು ಅಂಗೀಕರಿಸಿತು.

೧೯೮೭ರಲ್ಲಿ ಸಂಸತ್ತು ಅಂಗೀಕರಿಸಿದ "ಭಯೋತ್ಪಾದನೆ ಮತ್ತು ವಿಛಿದ್ರಕಾರಕ ಚಟುವಟಿಕೆಗಳ ನಿಷೇಧ ಕಾಯ್ದೆ" [TADA - Terrorist and Disruptive Activities (Prevention Act)] ೧೯೯೫ರ ವರೆಗೆ ಅಸ್ತಿತ್ವದಲ್ಲಿದ್ದು ಇದುವೇ ೨೩, ೧೯೯೫ ರಂದು ರದ್ದಾಯಿತು. ಆ ಟಾಡಾ ಸ್ಥಾನದಲ್ಲಿ ಪೋಟಾ (POTA - Prevention of Terrorism Act) ಭಯೋತ್ಪಾದನೆ ನಿಷೇಧ ಕಾಯ್ದೆಯನ್ನು ಅಂಗೀಕಾರ ಮಾಡಲಾಯಿತು.

ಈ ಭಯೋತ್ಪಾದನೆ ನಿಷೇಧ ಆಜ್ಞೆಯನ್ನು ರಾಷ್ಟ್ರಪತಿಯವರು ೨೪ನೇ ಅಕ್ಟೋಬರ್ ೨೦೦೧ರಲ್ಲಿ ಅಂಗೀಕಾರ ಮಾಡಿದರು. ಈ ಸುಗ್ರೀವಾಜ್ಞೆಯನ್ನು ಕಾಯ್ದೆಯಾಗಿ ರೂಪಿಸಲು ಅದನ್ನು ನಂತರದ ಸಂಸತ್ತಿನ ಅಧಿವೇಶನದಲ್ಲಿ ಮಂಡಿಸಬೇಕಾಗಿತ್ತು. ಆದರೆ ಡಿಸೆಂಬರ್ ೧೩, ೨೦೦೧ ರಂದು ಸಂಸತ್ತಿನ ಮೇಲೆ ಭಯೋತ್ಪಾದಕರ ದಾಳಿ ನಡೆದದ್ದರಿಂದ ಸಂಸತ್ತಿನ ಅಧಿವೇಶನವನ್ನು ಮುಂದೂಡಲಾಗಿತ್ತು. ಸಂಸತ್ತು ಡಿಸೆಂಬರ್ ೩೦, ೨೦೦೧ ರಂದು (Pre-

vention of Terrorism (Second) Ordinance 2001) ಭಯೋತ್ಪಾದನೆ ನಿಷೇಧ (ಎರಡನೇ) ಕಾಯ್ದೆ ೨೦೦೧ ನ್ನು ಪುನಃ ಮಂಡಿಸಿತು. ಮಾರ್ಚ್ ೨೬, ೨೦೦೨ ರಂದು ಸಂಸತ್ತಿನ ಜಂಟೀ ಅಧಿವೇಶನದಲ್ಲಿ ಅದನ್ನು ಅಂಗೀಕಾರ ಮಾಡಲಾಯಿತು., ಮಾರ್ಚ್ ೨೮, ೨೦೦೨ ರಂದು ಭಾರತದ ರಾಷ್ಟ್ರಪತಿಯವರು ಅದಕ್ಕೆ ಅನುಮೋದನೆಯನ್ನು ನೀಡಿದರು.

ಟಾಡಾ ಮತ್ತು ಪೋಟಾ ಕಾಯ್ದೆ ಬಗ್ಗೆ ಮಾನವ ಹಕ್ಕು ಆಯೋಗದ ಅಧ್ಯಕ್ಷ ನ್ಯಾಯಮೂರ್ತಿ ಎ.ಎಸ್. ಆನಂದ್‌ರವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ, ಟಾಡಾಕ್ಕೆ ಹೋಲಿಸಿದರೆ ಪೋಟಾ ಸುರಕ್ಷಿತವಾಗಿದೆ. ಆದರೆ ಅದು ಸಾಲದು. ಇದರ ಅನುಷ್ಠಾನದಲ್ಲಿ ಸಂಬಂಧಿಸಿದವರಿಗೆ ಸಂವೇದನೆಯಿಲ್ಲ, ನಡುವೆ ಗೆರೆ ಎಳೆದಿದ್ದಾರೆ, ಪ್ರತಿಯೊಬ್ಬ ಭಯೋತ್ಪಾದಕ ಅಪರಾಧಿಯಾಗಬಹುದು. ಆದರೆ ಪ್ರತಿಯೊಬ್ಬ ಅಪರಾಧಿ ಭಯೋತ್ಪಾದಕನಲ್ಲ. ಕಾಯಿದೆಗೆ ಕೆಟ್ಟ ಹೆಸರು ಬರದಿರಲು ಅಪರಾಧ ಮತ್ತು ಅಪರಾಧಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು ಎಂದು ಅವರು ಹೇಳುತ್ತಾರೆ.

ಆದರೆ ಪ್ರಜಾಪ್ರಭುತ್ವದ ಮೌಲ್ಯಗಳಾದ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ, ಜಾತ್ಯತೀತತೆ, ಸಮಾಜವಾದಿ ವ್ಯವಸ್ಥೆ ಇವುಗಳೆಲ್ಲವನ್ನೂ ರಕ್ಷಿಸಬೇಕಾಗುತ್ತದೆ. ಪೊಲೀಸ್ ಅಧಿಕಾರವನ್ನು, ಮಿಲಿಟರಿ ಅಧಿಕಾರವನ್ನು ಮತ್ತು ಮುನ್ನೆಚ್ಚರಿಕೆ ಬಂಧನ ಕಾಯ್ದೆಗಳ್ನು ಸಂವಿಧಾನಬದ್ಧವಾಗಿ ಜಾರಿಗೆ ತಂದು ಅದಕ್ಕನುಗುಣವಾಗಿ ಕಾರ್ಯಗತ ಮಾಡಿದಾಗ ಮಾತ್ರ ಅವುಗಳ ಉದ್ದೇಶಿತ ಗುರಿಯನ್ನು ಸಾಧಿಸಬಹುದಾಗಿದೆ. ಇಲ್ಲವಾದರೆ ಅವುಗಳೇ ಪ್ರಜಾಪ್ರಭುತ್ವಕ್ಕೆ ಮಾರಕವಾಗುತ್ತವೆ.

ಭಾರತದಲ್ಲಿ ಭಯೋತ್ಪಾದನೆ ಒಂದು ರೀತಿಯಲ್ಲಿ ಭಾರತ ಮತ್ತು ಪಾಕಿಸ್ತಾನ ಪ್ರತ್ಯೇಕ ರಾಷ್ಟ್ರಗಳಾದಾಗಲೇ ಆರಂಭವಾಯಿತೆಂದು ಹೇಳಬಹುದು. ಹಾಗೂ ಜಮ್ಮು, ಕಾಶ್ಮೀರ, ಅಸ್ಸಾಂ, ಮಣಿಪುರ, ತ್ರಿಪುರಾ, ಮೇಘಾಲಯ, ನಾಗಾಲ್ಯಾಂಡ್ ರಾಜ್ಯಗಳಲ್ಲಿ ಭಯೋತ್ಪಾದನೆ ಬೆಳೆಯುವುದಕ್ಕೆ ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಯೇ ಕಾರಣವಾಗಿದೆ. ಉದಾಹರಣೆಗೆ ಪಂಜಾಬಿನಲ್ಲಿ ೧೯೮೦ರ ವೇಳೆಗೆ ಉಗ್ರರೂಪ ತಾಳಿದ ಭಯೋತ್ಪಾದನೆಯನ್ನು ತಡೆಗಟ್ಟಿದ್ದು ಆ ರಾಜ್ಯಕ್ಕೆ ದೊರೆತ ಸಾಮಾಜಿಕ ಮತ್ತು ಆರ್ಥಿಕ ಸವಲತ್ತುಗಳು. ಆ ಮೂಲಕವಾದ ಆರ್ಥಿಕ ಪ್ರಗತಿಯಿಂದಾಗಿ ರಾಜ್ಯ ಇಂದು ಕೃಷಿ ಉತ್ಪಾದನೆಯಲ್ಲಿ ದೇಶಕ್ಕೆ ಪ್ರಥಮ ಸ್ಥಾನದಲ್ಲಿದೆ ಮತ್ತು ಭಯೋತ್ಪಾದನೆ ಕಣ್ಮರೆಯಾಗಿದೆ. ಆದ್ದರಿಂದ ಭಯೋತ್ಪಾದನೆಯನ್ನು ನಿಷೇಧಿಸುವ ಶಾಸನಗಳಿಗಿಂತ ಸಾಮಾಜಿಕ ಮತ್ತು ಆರ್ಥಿಕ ಸವಲತ್ತುಗಳನ್ನು ನೀಡಿ ಸಮಾನತೆಯನ್ನು ಸಾಧಿಸುವುದಕ್ಕೆ ಅವಕಾಶ ಮಾಡಿಕೊಡುವುದರ ಮೂಲಕ ಭಯೋತ್ಪಾದನೆಯನ್ನು ನಿಗ್ರಹಿಸಬಹುದು ಎಂದು ಭಾವಿಸಬಹುದಾಗಿದೆ.

### ೮.೫ ಭ್ರಷ್ಟಾಚಾರ

ಭ್ರಷ್ಟಾಚಾರವು, ಜೆ.ಎಸ್. ನೈ ಪ್ರಕಾರ, ''ಖಾಸಗಿ ಪರಿಗಣನೆಯಿಂದ (ವೈಯಕ್ತಿಕ,

ಹತ್ತಿರದ ಕೌಟುಂಬಿಕ ಸಂಬಂಧ ಖಾಸಗಿ ಕೂಟ) ಹಣಕಾಸಿನ ಅಥವಾ ಅಂತಸ್ಥಿನ ಅನುಕೂಲ ದೊರಕಿಸಿಕೊಳ್ಳಲು ಸಾರ್ವಜನಿಕ ಸ್ವರೂಪದ ವಿಧಿರಹಿತ ಕಾರ್ಯಗಳಿಗಿಂತ ಭಿನ್ನವಾದ ಅಡ್ಡ ಮಾರ್ಗದ ನಡವಳಿಕೆ ಅಥವಾ ಖಾಸಗಿ ಪರಿಗಣನೆಯಿಂದ ಕೂಡಿದ ಪ್ರಭಾವದ ಬಳಕೆಯನ್ನು ನಿಷೇಧಿಸುವ ನಿಯಮಗಳ ಉಲ್ಲಂಘನೆ''. ಈ ವ್ಯಾಖ್ಯೆಯ ಪ್ರಕಾರ ಲಂಚ, ಅಂದರೆ ನಂಬಿಕೆಯ ಸ್ಥಾನದಲ್ಲಿರುವಂತಹ ವ್ಯಕ್ತಿಯು ನ್ಯಾಯಯುತವಲ್ಲದಂತಹ ತೀರ್ಮಾನಗಳನ್ನು ಕೈಗೊಳ್ಳುವಂತೆ ಮಾಡಲು ಕೊಡುಗೆಯ (reward) ಬಳಕೆ, ಸರಳವಾಗಿ ಹೇಳುವುದಾದರೆ ಹಣ ಕೊಡುವುದು, ಸ್ವಜನ ಪಕ್ಷಪಾತ ಮತ್ತು ಸಾರ್ವಜನಿಕ ಹಣಕಾಸಿನ ದುರುಪಯೋಗ ಗಳನ್ನು ಒಳಗೊಳ್ಳುತ್ತದೆ.

ಭ್ರಷ್ಟಾಚಾರವನ್ನು ಎರಡು ದೃಷ್ಟಿಕೋನಗಳಲ್ಲಿ ಅರ್ಥೈಸಬಹುದು. ಸಂಕುಚಿತ ಅರ್ಥ ಮತ್ತು ವಿಶಾಲ ಅರ್ಥ. ಸಂಕುಚಿತ ಅರ್ಥದಲ್ಲಿ ಭ್ರಷ್ಟಾಚಾರವು ಹಣಕಾಸಿನ ಲಾಭ ಅಥವಾ ಲಂಚವನ್ನು ಸೂಚಿಸುತ್ತದೆ. ವಿಶಾಲ ಅರ್ಥದಲ್ಲಿ, ಖಾಸಗಿ ಉದ್ದೇಶಗಳಿಗಾಗಿ ಸಾರ್ವಜನಿಕ ಅಧಿಕಾರ ಸ್ಥಾನವನ್ನು ದುರುಪಯೋಗ ಪಡೆಸಿಕೊಳ್ಳುವ ದುರಾಚಾರಗಳ ಸಮೂಹವನ್ನೇ ಒಳಗೊಳ್ಳುತ್ತದೆ.

### ಅ. ಪ್ರಜಾಪ್ರಭುತ್ವಕ್ಕೆ ತೊಡಕು

ಭ್ರಷ್ಟಾಚಾರ ಇಂದು ಎಲ್ಲಾ ಕ್ಷೇತ್ರಗಳನ್ನು ಆವರಿಸಿಕೊಂಡಿದೆ. ಆಡು ಮುಟ್ಟದ ಸೊಪ್ಪಿಲ್ಲ ಎಂಬಂತೆ ಭ್ರಷ್ಟಾಚಾರವಿಲ್ಲದ ಕ್ಷೇತ್ರವೇ ಇಲ್ಲವಾಗಿದೆ.

ಪ್ರಜಾಪ್ರಭುತ್ವ ರಾಷ್ಟ್ರವಾದ ನಮ್ಮ ದೇಶದಲ್ಲಿ ಚುನಾವಣಾ ಸಮಯದಲ್ಲಿ ರಾಜಕೀಯ ಪಕ್ಷಗಳು ಅತ್ಯಂತ ಕೆಳಮಟ್ಟದ ಭ್ರಷ್ಟ ಮಾರ್ಗಗಳನ್ನು ಚುನಾವಣೆಗಳಲ್ಲಿ ಗೆಲ್ಲಲು ಅನುಸರಿಸುತ್ತವೆ. ಮತಗಳನ್ನು ಹಣಕ್ಕೆ ಕೊಂಡುಕೊಳ್ಳುವುದು ಸಾಮಾನ್ಯವಾಗಿ ಪ್ರಚಲಿತ ದಲ್ಲಿರುವ ಭ್ರಷ್ಟಾಚಾರವೇ ಆಗಿದೆ. ಹಣ, ಮದ್ಯಪಾನ, ಊಟೋಪಚಾರ ಮುಂತಾದ ವ್ಯವಸ್ಥೆಗಳನ್ನೆಲ್ಲ ತಮ್ಮ ನಿಕಟವರ್ತಿಗಳಿಗೆ ರಾಜಕೀಯ ವ್ಯಕ್ತಿಗಳು ಒದಗಿಸುವರು. ಗೆದ್ದ ನಂತರ ಅನಗತ್ಯ ಮೆರವಣಿಗೆ, ಉತ್ಸವಗಳು, ಅಭಿನಂದನಾ ಸಭೆಗಳಿಗೆ ಹಣ ವ್ಯಯ ವಾಗುತ್ತದೆ. ಪ್ರಜಾಪ್ರಭುತ್ವದಲ್ಲಿ ದೇಶದ ಎಲ್ಲ ಜನರ ಮತಗಳಿಗೂ ಸಮಾನವಾದ ಬೆಲೆ ಇರುವುದರಿಂದ, ಚುನಾವಣೆಯ ಸಮಯದಲ್ಲಿ ಭ್ರಷ್ಟತೆಯನ್ನು ತಡೆಯಲು ಸಾಧ್ಯವಿಲ್ಲ ವಾಗಿದೆ. ಮಿಗಿಲಾಗಿ ರಾಜಕೀಯ ಪಕ್ಷಗಳು ಯಾವ ನೈತಿಕ ನೆಲೆಗಟ್ಟಿಗೂ ಬದ್ಧವಾಗದೆ, ಚುನಾವಣೆಗಳಲ್ಲಿ ಯಥೇಚ್ಛ ಹಣವನ್ನು ಖರ್ಚು ಮಾಡಬಲ್ಲ ಸಾಮರ್ಥ್ಯವಿರುವ ವ್ಯಕ್ತಿ ಗಳನ್ನೇ ಅಭ್ಯರ್ಥಿಗಳನ್ನಾಗಿ ನಿಲ್ಲಿಸುತ್ತದೆ. ಭ್ರಷ್ಟ ಮಾರ್ಗಗಳಿಂದ ಪಕ್ಷಗಳು ಮತ್ತು ಅಭ್ಯರ್ಥಿ ಗಳು ಹಣಗಳಿಸುತ್ತಾರೆ. ವೈಯಕ್ತಿಕವಾಗಿ ನೂರಾರು, ಸಾವಿರಾರು ಕೋಟಿ ರೂಪಾಯಿ ಗಳಷ್ಟು ಭ್ರಷ್ಟಾಚಾರದ ಅಪಾದನೆಗಳನ್ನು ಹೊತ್ತಿರುವ ರಾಜಕೀಯ ವ್ಯಕ್ತಿಗಳು ಪಕ್ಷದ ಬೆಂಬಲದಿಂದ, ಪ್ರಧಾನಮಂತ್ರಿ, ಮುಖ್ಯಮಂತ್ರಿಗಳಾಗಿ, ಪಕ್ಷದ ಅಧ್ಯಕ್ಷ, ಉಪಾಧ್ಯಕ್ಷರುಗಳಾಗಿ ಮೆರೆಯುತ್ತಿರುವುದುಂಟು. ಚುನಾವಣೆಯಲ್ಲಿ ಗೆದ್ದ ನಂತರ ಚುನಾವಣೆ ಸಂದರ್ಭ ದಲ್ಲಿಯೂ

ಶಾಸಕರುಗಳನ್ನು ಕೊಳ್ಳುವುದರಲ್ಲಿ, ಕೋಟ್ಯಾಂತರ ರೂಪಾಯಿಗಳ ಅಕ್ರಮ ವ್ಯವಹಾರ ನಡೆಯುವುದಲ್ಲದೆ, ಸಂಬಂಧಪಟ್ಟ ಶಾಸಕರ ದೈಹಿಕ ಮತ್ತು ಇನ್ನಿತರ ಅಗತ್ಯಗಳನ್ನೆಲ್ಲಾ ಪೂರೈಸಿ, ಅವರುಗಳನ್ನು ಸುಪ್ರೀತರನ್ನಾಗಿ ಮಾಡುವುದುಂಟು. ಪಕ್ಷಾಂತರಗೊಳಿಸುವುದು, ಆಯೋಗ, ಕಮಿಷನ್‌ಗಳಿಗೆ ನೇಮಕಗೊಳ್ಳುವುದು ಮುಂತಾದವುಗಳಲ್ಲಿ ಲಂಚಗುಳಿತನ ಸಾಮಾನ್ಯವಾದ ಸಂಗತಿಯಾಗಿದೆ. ಪ್ರಜಾಪ್ರಭುತ್ವದ ತತ್ವ, ಸಿದ್ಧಾಂತಗಳನ್ನು ಗಾಳಿಗೆ ತೂರಿ ಭ್ರಷ್ಟಾಚಾರ ತನ್ನ ವಿಕಾರ ರೂಪವನ್ನು ಪ್ರಸರಿಸುತ್ತಿರುವುದು ಪ್ರಜಾಪ್ರಭುತ್ವದ ಅಸ್ತಿತ್ವಕ್ಕೆ ದೊಡ್ಡ ಬೆದರಿಕೆಯಾಗಿದೆ.

## ಆ. ನಿಯಂತ್ರಣ ಕಾಯಿದೆಗಳು : ಲೋಕಪಾಲ್ ಮತ್ತು ಲೋಕಾಯುಕ್ತ ವ್ಯವಸ್ಥೆ

### ಭ್ರಷ್ಟಾಚಾರ ನಿವಾರಣಾ ಅಧಿನಿಯಮ ೧೯೪೭

೧೯೪೭ರ ಭ್ರಷ್ಟಾಚಾರ ನಿವಾರಣಾ ಅಧಿನಿಯಮದ ನಿಯಮ ೫ (i) ಭ್ರಷ್ಟಾಚಾರದ ಬಗ್ಗೆ ಈ ರೀತಿ ವಿವರಿಸಿದೆ: ಸರ್ಕಾರಿ ಉದ್ಯೋಗಿಯಾವವನು ಅಪರಾಧಿಕ ವರ್ತನೆ ಮಾಡಿದ್ದಾನೆಂದು ಕೆಳಗಿನ ಪರಿಸ್ಥಿತಿಗಳಲ್ಲಿ ಭಾವಿಸಲಾಗುವುದು.

ಅ. ಭಾರತದ ದಂಡ ಸಂಹಿತೆಯ ೧೬೧ ನೆಯ ನಿಯಮದಲ್ಲಿ ಸೂಚಿಸಿದ ಪ್ರಕಾರ ಅವನು ವರ್ತಿಸಿದಾಗ,

ಆ. ತನ್ನ ಅಧಿಕೃತ ಕಾರ್ಯಗಳಲ್ಲಿ ಅಥವಾ ತಾನು ಅಧೀನನಾಗಿರುವಂತಹ ಅಧಿಕಾರಿಯ ಅಧಿಕೃತ ಕಾರ್ಯಗಳಲ್ಲಿ ಯಾರಿಗಾದರೂ ಅನುಕೂಲ ಅಥವಾ ಅನಾನುಕೂಲ ಉಂಟು ಮಾಡಲು ತಾನು ಅಥವಾ ತನ್ನ ವ್ಯಕ್ತಿಯೊಬ್ಬನು ಬೆಲೆ ಬಾಳುವಂತಹುದನ್ನು ಅಂಗೀಕರಿಸುವ ಅಥವಾ ಪಡೆಯುವ ಅಥವಾ ಅಂಗೀಕರಿಸುತ್ತೇವೆಂದು ಸಮ್ಮತಿಸುವ ಅಥವಾ ಆ ರೀತಿ ಪ್ರಯತ್ನಿಸುವ ಅಕೃತ್ಯಗಳಲ್ಲಿ ತೊಡಗಿದಾಗ,

ಇ. ಸರ್ಕಾರದ ಅಧಿಕಾರಿಯಾಗಿ ತನ್ನ ಅಧೀನದಲ್ಲಿರುವ ಆಸ್ತಿಯನ್ನು ಅಪ್ರಾಮಾಣಿಕವಾಗಿ ಅಥವಾ ಕಪಟದಿಂದ ಅಥವಾ ಬೇರೆ ಯಾವ ರೀತಿಯಾದರೂ ತನ್ನ ಬಳಕೆಗಾಗಿ ಪರಿವರ್ತಿಸಿದಾಗ ಅಥವಾ ಬೇರೊಬ್ಬ ವ್ಯಕ್ತಿಗೆ ಅವಕಾಶ ಮಾಡಿಕೊಟ್ಟಾಗ,

ಈ. ಭ್ರಷ್ಟಾಚಾರ ಅಥವಾ ನಿಯಮಗಳಿಗೆ ವಿರುದ್ಧವಾಗಿ ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಂಡು ಬೆಲೆ ಬಾಳುವ ವಸ್ತು ಅಥವಾ ಹಣಕಾಸಿನ ಅನುಕೂಲವನ್ನು ತಾನು ಪಡೆದುಕೊಂಡಾಗ ಅಥವಾ ಬೇರೊಬ್ಬ ವ್ಯಕ್ತಿ ಪಡೆಯುವಂತೆ ಮಾಡಿದಾಗ,

ಉ. ತನ್ನ ಆದಾಯಕ್ಕೆ ಅನುಗುಣವಾಗಿಲ್ಲದಿರುವಷ್ಟು ಆಸ್ತಿ ಅಥವಾ ಹಣಕಾಸಿನ ಸಂಪನ್ಮೂಲಗಳನ್ನು ಆತನಾಗಲಿ ಆತನ ಪರವಾಗಿ ಇನ್ನೊಬ್ಬನಾಗಲಿ ಹೊಂದಿದ್ದಾಗ, ನಿಯಮ ೫ (೨) ರ ಪ್ರಕಾರ, ಇಂತಹ ಅಪರಾಧಿಕ (ಅನುಚಿತ) ವರ್ತನೆಗಾಗಿ ಒಂದು ವರ್ಷಕ್ಕೆ ಕಡಿಮೆಯಿಲ್ಲದೆ ಏಳು ವರ್ಷಗಳಷ್ಟು ಸಜಾ (ಜೈಲು) ಶಿಕ್ಷೆ ಹಾಗೂ ದಂಡವನ್ನೂ ವಿಧಿಸ ಬಹುದು. ಆದರೆ ವಿಶೇಷ ಕಾರಣಗಳಿಗಾಗಿ ನ್ಯಾಯಾಲಯವು, ಕಾರಣಗಳ ಲಿಖಿತ ರೂಪದಲ್ಲಿ ನಮೂದಿಸಿ, ಒಂದು ವರ್ಷಕ್ಕಿಂತ ಕಡಿಮೆ ಸಜಾವನ್ನು ವಿಧಿಸಬಹುದು.

### ಲೋಕ್‌ಪಾಲ್ (Lokpal)

ಭಾರತದಲ್ಲಿ ರಾಜಕೀಯ ಕ್ಷೇತ್ರ, ಆಡಳಿತ ಕಛೇರಿಗಳಲ್ಲಿ, ಪೊಲೀಸ್ ಇಲಾಖೆಯಲ್ಲಿ, ನ್ಯಾಯಾಲಯಗಳಲ್ಲಿ, ಸ್ಥಳೀಯ ಸರ್ಕಾರಗಳಲ್ಲಿ. ಆರ್ಥಿಕ ಕ್ಷೇತ್ರದಲ್ಲಿ, ಧಾರ್ಮಿಕ ಕ್ಷೇತ್ರದಲ್ಲಿ, ಸಾಮಾಜಿಕ ಕ್ಷೇತ್ರದಲ್ಲಿ ಇತ್ತೀಚೆಗೆ ಶೈಕ್ಷಣಿಕ ವಲಯಗಳಲ್ಲೂ ಭ್ರಷ್ಟಾಚಾರ ತನ್ನ ಮಿತಿಯನ್ನು ಮೀರಿರುವುದರಿಂದ ಬದುಕು ಅಸಹನೀಯವಾಗುತ್ತಾ ಹೋಗುತ್ತಿದೆ. ಆಡಳಿತ ಸುಧಾರಣಾ ಆಯೋಗವು (ARC) ೧೯೬೬ರಲ್ಲಿಯೇ, ಭಾರತದಲ್ಲಿ ಈ ಭ್ರಷ್ಟಾಚಾರವನ್ನು ತಡೆಗಟ್ಟುವುದಕ್ಕಾಗಿ ಒಂಬುಡ್ಸ್‌ಮನ್ (Ombudsman) ರೀತಿಯ ಸಂಸ್ಥೆಯೊಂದನ್ನು ಸ್ಥಾಪಿಸುವಂತೆ ಸಲಹೆ ಮಾಡಿತು. ೧೯೬೮ರಲ್ಲಿ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸಿನ ಮೇರೆಗೆ ಲೋಕ್‌ಪಾಲ್ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸಲಾಯಿತು. ಇದಕ್ಕೆ ಎರಡು ಸದನಗಳ ಜಂಟಿ ಆಯ್ಕೆ ಸಮಿತಿಯ ಸಮ್ಮತಿ ಕೂಡ ದೊರಕಿತು. ಆದರೆ, ಲೋಕಸಭೆಯ ವಿಸರ್ಜನೆಯಿಂದಾಗಿ ಮಸೂದೆ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ೧೯೭೧ರಲ್ಲಿ ಲೋಕ್‌ಪಾಲ್ ಮಸೂದೆಯನ್ನು ಪುನಃ ಮಂಡಿಸಲಾಯಿತು. ಇದರ ವ್ಯಾಪ್ತಿಯಲ್ಲಿ ಪ್ರಧಾನಿಯು ಬರುತ್ತಿರಲಿಲ್ಲ. ಆದರೆ ಲೋಕಸಭೆಯ ವಿಸರ್ಜನೆಯಿಂದಾಗಿ ಲೋಕ್‌ಪಾಲ್ ಮಸೂದೆ ಎರಡನೇ ಬಾರಿಗೆ ಬಿದ್ದು ಹೋಯಿತು.

ಜನತಾ ಪಕ್ಷದ ಸರ್ಕಾರ ೧೯೭೭ರ ಜುಲೈನಲ್ಲಿ ಮತ್ತೆ ಲೋಕ್‌ಪಾಲ್ ಮಸೂದೆಯನ್ನು ಮಂಡಿಸಿತು. ಅದರ ಎರಡು ವಿಶೇಷ ಲಕ್ಷಣಗಳೆಂದರೆ:

ಅ. ಪ್ರಧಾನಮಂತ್ರಿಯನ್ನು ಇದರ ವ್ಯಾಪ್ತಿಯಲ್ಲಿ ಸೇರಿಸುವುದು

ಆ. ಲೋಕ್‌ಪಾಲ್ ತನ್ನದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಲು ಅವಕಾಶ ನೀಡುವುದು. ಆದರೆ ಲೋಕಸಭೆಯು ಈ ಮಸೂದೆಯ ಬಗ್ಗೆ ಚರ್ಚೆ ನಡೆಸುತ್ತಿರುವಾಗಲೇ ಲೋಕಸಭೆ ವಿಸರ್ಜನೆಯಾಯಿತು.

ತತ್ಪರಿಣಾಮವಾಗಿ ಈ ಮಸೂದೆಯು ಪುನಃ ರದ್ದಾಯಿತು. ನಾಲ್ಕನೆಯ ಬಾರಿಗೆ ದಿವಂಗತ ಶ್ರೀ ರಾಜೀವ್ ಗಾಂಧಿಯವರ ಸರ್ಕಾರ ೧೯೮೫ರ ಆಗಸ್ಟ್ ೨೬ ರಂದು ಲೋಕ್‌ಪಾಲ್ ಮಸೂದೆಯನ್ನು ಮಂಡಿಸಿತು. ಲೋಕಸಭೆ ಮತ್ತು ರಾಜ್ಯಸಭೆ ಈ ಮಸೂದೆಯ ಬಗ್ಗೆ ಕೂಲಂಕಷವಾಗಿ ಚರ್ಚಿಸಿ ನಂತರ ಇದಕ್ಕೆ ಅನುಮೋದನೆ ನೀಡಿದವು.

### ಲೋಕ್‌ಪಾಲ್ ಪ್ರಮುಖಾಂಶಗಳು

ರಾಷ್ಟ್ರಪತಿಯವರು ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶ ರೊಡನೆ ಸಮಾಲೋಚಿಸಿ ಲೋಕ್‌ಪಾಲ್‌ರವರನ್ನು ನೇಮಿಸುತ್ತಾರೆ. ಇವರ ಅಧಿಕಾರಾವಧಿ ಐದು ವರ್ಷಗಳು. ಲೋಕಪಾಲರ ಹುದ್ದೆಗೆ ನೇಮಕವಾಗುವವರು ಭಾರತದ ಸುಪ್ರೀಂ ಕೋರ್ಟಿನ ನ್ಯಾಯಾಧೀಶರಾಗಲು ಬೇಕಾದ ಅರ್ಹತೆಗಳನ್ನು ಹೊಂದಿರಬೇಕು. ಲೋಕ್ ಪಾಲ್‌ರನ್ನು ಹುದ್ದೆಯಿಂದ ಸುಲಭವಾಗಿ ತೆಗೆಯಲು ಸಾಧ್ಯವಿಲ್ಲ. ಇವರ ಮೇಲೆ ಏನಾದರು ಭ್ರಷ್ಟಾಚಾರದ ಆಪಾದನೆ ಇದ್ದರೆ, ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಾಧೀಶರಿಂದ ಈ

ಬಗ್ಗೆ ವಿಚಾರಣೆ ನಡೆಸಿ ಸಾಬೀತಾದರೆ ಮಾತ್ರ ಇವರನ್ನು ಅಧಿಕಾರದಿಂದ ತೆಗೆದುಹಾಕಬಹುದು. ಲೋಕ್‌ಪಾಲ್‌ರು ಮೂಲ ಮೊಕದ್ದಮೆಗೆ ಸಹಕಾರಿಯಾಗುವ ಯಾವ ಅಧಿಕಾರಿಯನ್ನಾದರೂ ಅಂದರೆ ಕೇಂದ್ರದ ಮಂತ್ರಿಗಳು ಅಥವಾ ಅವರ ಮೂಲ ವಿಚಾರಣೆಗೆ ನೆರವಾಗುವ ಯಾವ ವ್ಯಕ್ತಿಯನ್ನಾದರೂ ವಿಚಾರಣೆಗೆ ಗುರಿಪಡಿಸಬಹುದು. ಲೋಕ್‌ಪಾಲ್‌ರಿಗೆ ಭಾರತೀಯ ದಂಡ ಸಂಹಿತೆಯ (IPC) ೯ನೇ ಅಧ್ಯಾಯದ ಪ್ರಕಾರ ಅಥವಾ ೧೯೪೭ರ ಭ್ರಷ್ಟಾಚಾರ ನಿಯಂತ್ರಣ ಕಾಯ್ದೆಯ ಪ್ರಕಾರ ದೂರುಗಳನ್ನು ಸಲ್ಲಿಸಬಹುದು. ಅಪರಾಧ ನಡೆದು ಐದು ವರ್ಷಗಳ ಮೇಲಾಗಿದ್ದರೆ ಇವರು ಅಂತಹ ದೂರುಗಳನ್ನು ಸ್ವೀಕರಿಸುವುದಿಲ್ಲ.

ಪ್ರಧಾನಮಂತ್ರಿಯವರು, ಮುಖ್ಯಮಂತ್ರಿಗಳು, ರಾಷ್ಟ್ರಪತಿಯವರು ಮತ್ತು ಉಪ ರಾಷ್ಟ್ರಪತಿಯವರು, ಲೋಕಸಭೆಯ ಸದಸ್ಯರುಗಳು ಹಾಗೂ ಸ್ಪೀಕರ್‌ಗಳು, ಕೇಂದ್ರ ಲೋಕಸೇವಾ ಆಯೋಗದ ಸದಸ್ಯರುಗಳು ಮತ್ತು ಅಧ್ಯಕ್ಷರು, ಸುಪ್ರೀಂ ಕೋರ್ಟಿನ ನ್ಯಾಯಾಧೀಶರುಗಳು, ಭಾರತೀಯ ಲೆಕ್ಕ ತನಿಖೆ ಮತ್ತು ನಿಯಂತ್ರಣಾಧಿಕಾರಿಗಳು ಲೋಕ್ ಪಾಲ್‌ರ ವ್ಯಾಪ್ತಿಗೆ ಒಳಪಡುವರು.

ಸುಳ್ಳು ಆಪಾದನೆ ನೀಡುವವರು ಮತ್ತು ಸುಳ್ಳು ಸಾಕ್ಷಿಗಳನ್ನು ಕೊಡುವವರನ್ನು ಶಿಕ್ಷಿಸಲು ಇವರಿಗೆ ಅಧಿಕಾರವಿದೆ. ಅಂತಹವರಿಗೆ ೫೦೦೦ ರೂಪಾಯಿಗಳ ದಂಡ, ೧ ವರ್ಷದಿಂದ ೩ ವರ್ಷಗಳವರೆಗೆ ಸೆರೆಮನೆವಾಸದ ಶಿಕ್ಷೆಯನ್ನು ವಿಧಿಸಬಹುದಾದ ಅಧಿಕಾರ ಇವರಿಗಿದೆ.

### ಲೋಕಾಯುಕ್ತರು

ಭಾರತದ ಅನೇಕ ರಾಜ್ಯಗಳಲ್ಲಿ ಓಂಬಡ್ಸ್‌ಮನ್ ಹುದ್ದೆಗೆ ಸಮಾನವಾದ ಲೋಕಾ ಯುಕ್ತರು ಎಂಬ ಹುದ್ದೆಯನ್ನು ಸಾರ್ವಜನಿಕ ಆಡಳಿತದಲ್ಲಿ ಭ್ರಷ್ಟಾಚಾರವನ್ನು ನಿಯಂತ್ರಿಸುವ ಉದ್ದೇಶದಿಂದ ಸ್ಥಾಪಿಸಲಾಗಿದೆ. ೧೯೭೦ರಲ್ಲಿ ಒರಿಸ್ಸಾ ರಾಜ್ಯವು ಈ ಸ್ಥಾನವನ್ನು ಪ್ರಥಮ ಬಾರಿಗೆ ಅಸ್ತಿತ್ವಕ್ಕೆ ತಂದಿತು. ನಂತರ ೧೯೭೧ರಲ್ಲಿ ಮಹಾರಾಷ್ಟ್ರ, ೧೯೭೪ರಲ್ಲಿ ರಾಜಸ್ತಾನ, ಬಿಹಾರ್, ಮಧ್ಯಪ್ರದೇಶ ರಾಜ್ಯಗಳು ಲೋಕಾಯುಕ್ತರ ಹುದ್ದೆಗಳನ್ನು ಅಸ್ತಿತ್ವಕ್ಕೆ ತಂದವು. ೧೯೭೫ರಲ್ಲಿ ಉತ್ತರ ಪ್ರದೇಶ, ೧೯೮೩ರಲ್ಲಿ ಆಂಧ್ರಪ್ರದೇಶ, ೧೯೮೪ರಲ್ಲಿ ಕರ್ನಾಟಕ ರಾಜ್ಯಗಳು ಕ್ರಮವಾಗಿ ಲೋಕಾಯುಕ್ತರ ಹುದ್ದೆಗಳ ಸ್ಥಾಪನೆಗೆ ಅವಕಾಶ ಮಾಡಿಕೊಂಡವು.

ಸರ್ಕಾರಿ ಉದ್ಯೋಗಿಗಳ ಭ್ರಷ್ಟಾಚಾರ, ಅಧಿಕಾರ ದುರುಪಯೋಗ ಮತ್ತು ಅಧಿಕಾರ ಲೋಪಗಳಿಗೆ ಸಂಬಂಧಿಸಿದ ದೂರುಗಳನ್ನು ಸ್ವೀಕರಿಸಿ, ವಿಚಾರಣೆ ನಡೆಸಲು ೧೯೮೪ರ ಕರ್ನಾಟಕ ಲೋಕಾಯುಕ್ತ ಕಾನೂನು ಜಾರಿಗೆ ಬಂದಿತು. ಇದರ ವ್ಯಾಪ್ತಿಯೊಳಗೆ ಮುಖ್ಯ ಮಂತ್ರಿ, ಮಂತ್ರಿಗಳು, ಶಾಸಕಾಂಗದ ಸದಸ್ಯರು, ಸರ್ಕಾರಿ ಉದ್ಯೋಗಿಗಳು, ಸ್ಥಳೀಯ ಸಂಸ್ಥೆಗಳ, ಯಾವುದೇ ಶಾಸನೀಯ ಸಂಸ್ಥೆ, ನಿಗಮ, ಸಹಕಾರಿ ಸಂಘದ, ವಿಶ್ವವಿದ್ಯಾನಿಲಯ ಗಳ ಅಧಿಕಾರ ವರ್ಗದವರು ಬರುತ್ತಾರೆ.

## ನೇಮಕ

ರಾಜ್ಯಪಾಲರು ಲೋಕಾಯುಕ್ತರನ್ನು ಮತ್ತು ಉಪ ಲೋಕಾಯುಕ್ತರನ್ನು ನೇಮಿಸುತ್ತಾರೆ. ಈ ನೇಮಕವು ಮುಖ್ಯಮಂತ್ರಿಯ ಶಿಫಾರಸ್ಸಿನ ಮೇರೆಗೆ ನಡೆಯುತ್ತದೆ. ಮುಖ್ಯಮಂತ್ರಿಯವರು ಶಿಫಾರಸು ಮಾಡುವ ಮುನ್ನ ಉಚ್ಛ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು, ಎರಡು ಸದನಗಳ ಅಧ್ಯಕ್ಷರು ಮತ್ತು ಎರಡು ಸದನಗಳ ವಿರೋಧ ಪಕ್ಷದ ನಾಯಕರೊಡನೆ ಸಮಾಲೋಚಿಸಬೇಕು.

## ಅರ್ಹತೆ

ಲೋಕಾಯುಕ್ತರಾಗಿ ನೇಮಕವಾಗುವ ವ್ಯಕ್ತಿಯು ಸರ್ವೋಚ್ಛ ನ್ಯಾಯಾಲಯದ ನ್ಯಾಯಾಧೀಶರಾಗಿ ಅಥವಾ ಉಚ್ಛ ನ್ಯಾಯಾಲಯದ ನ್ಯಾಯಾಧೀಶರಾಗಿ ಕೆಲಸ ಮಾಡಿರಬೇಕು. ಅವರು ಯಾವುದೇ ಲಾಭಕರ ಹುದ್ದೆಯಲ್ಲಿದ್ದರೆ, ನೇಮಕದ ನಂತರ ಅದನ್ನು ಬಿಟ್ಟು ಬಿಡಬೇಕು. ನಿವೃತ್ತಿಯ ನಂತರ, ಕರ್ನಾಟಕದ ಯಾವುದೇ ಸರ್ಕಾರಿ ಅಥವಾ ಅರೆ - ಸರ್ಕಾರಿ ಸಂಸ್ಥೆಯಲ್ಲಿ ನೇಮಕಗೊಳ್ಳುವಂತಿಲ್ಲ, ನೇಮಕಗೊಂಡಿದ್ದರೆ ಮೊದಲೇ ರಾಜೀನಾಮೆ ಕೊಡಬಹುದು. ಲೋಕಾಯುಕ್ತರ ಅಧಿಕಾರವಧಿ ೫ ವರ್ಷಗಳು. ಇವರನ್ನು ತೆಗೆಯಲು ಅನುಸರಿಸುವ ವಿಚಾರಣಾ ವಿಧಾನವು, ದುರ್ನಡತೆ ಅಥವಾ ಅಸಮರ್ಥತೆಯನ್ನು ರುಜುವಾತು ಮಾಡಲು ಬಳಸಬೇಕು. ಅನಂತರ ಆ ಕಾರಣಕ್ಕಾಗಿ, ಕರ್ನಾಟಕದ ಶಾಸಕಾಂಗದ ಎರಡು ಸಭೆಗಳು ಸಹ ಒಟ್ಟು ಸದಸ್ಯತ್ವದ ಬಹುಮತದಿಂದ ಮತ್ತು ಹಾಜರಿದ್ದು ಓಟು ಮಾಡುವವರ ಮೂರನೆಯ ಎರಡರಷ್ಟು ಬಹುಮತದಿಂದ ಲೋಕಾಯುಕ್ತರನ್ನು ಅಥವಾ ಉಪ ಲೋಕಾಯುಕ್ತರನ್ನು ತೆಗೆದುಹಾಕಲು ಶಿಫಾರಸ್ ಮಾಡಿದರೆ, ಅದೇ ಅಧಿವೇಶನದ ಅವಧಿಯಲ್ಲಿ ರಾಜ್ಯಪಾಲರು ಅವರನ್ನು ವಜಾ ಮಾಡಬಹುದು.

## ಅಧಿಕಾರ ಮತ್ತು ಕರ್ತವ್ಯಗಳು

ಭ್ರಷ್ಟಾಚಾರದ ಮೇಲಿನ ಆಪಾದನೆಗಳು, ಸಾರ್ವಜನಿಕ ಆಡಳಿತದಲ್ಲಿನ ದುರಾಡಳಿತದಿಂದ ಜನರಿಗಾದ ಕುಂದು ಕೊರತೆಗಳು, ಈ ವಿಷಯಗಳನ್ನು ಲೋಕಾಯುಕ್ತರು ವಿಚಾರಣೆ ನಡೆಸುತ್ತಾರೆ. ಕಾನೂನುಬಾಹಿರ ಆಡಳಿತದ ವಿರುದ್ಧ ಯಾರು ಬೇಕಾದರೂ ಲೋಕಾಯುಕ್ತರಿಗೆ ದೂರು ಸಲ್ಲಿಸಬಹುದು. ಆದರೆ ಸುಳ್ಳು ಅಪಾದನೆ ಮಾಡಿದವರಿಗೆ ಇವರು ಒಂದು ವರ್ಷದ ಅವಧಿಯ ಜೈಲು ಶಿಕ್ಷೆಯನ್ನು ವಿಧಿಸಬಹುದಾದ ಅಧಿಕಾರವಿದೆ.

ಹಿಂದಿನ ಮತ್ತು ಈಗಿನ ಎಲ್ಲ ವರ್ಗದ ಮಂತ್ರಿಗಳು ಹಾಗೂ ಶಾಸಕರುಗಳ ಮೇಲಿನ ಭ್ರಷ್ಟಾಚಾರ, ಕಾನೂನುಬಾಹಿರ ನಡವಳಿಕೆಗಳ ಬಗೆಗೆ ಇರುವ ದೂರುಗಳನ್ನು ಇವರು ವಿಚಾರಣೆ ನಡೆಸುತ್ತಾರೆ. ಜಿಲ್ಲಾ ಪರಿಷತ್‌ಗಳು ಮತ್ತು ಪಂಚಾಯತ್ ಸಮಿತಿಗಳ ಅಧ್ಯಕ್ಷರುಗಳು, ಸರ್ಕಾರಿ ನಿಗಮ ಹಾಗೂ ಇಲಾಖೆಗಳ ಮುಖ್ಯಸ್ಥರು, ಸಹಕಾರ ಸಂಘಗಳ ಮುಖ್ಯಸ್ಥರು, ಇತರ ಹಿರಿಯ ಅಧಿಕಾರಿಗಳು, ಗ್ರಾಮ ಪಂಚಾಯಿತಿಯ ಅಧ್ಯಕ್ಷರು ಲೋಕಾ

ಯುಕ್ತರ ವ್ಯಾಪ್ತಿಗೆ ಒಳಪಡುತ್ತಾರೆ. ಆದರೆ ಲೋಕಾಯುಕ್ತರ ಅಧಿಕಾರ ಕೇವಲ ಸಲಹಾತ್ಮಕ, ನಿರ್ಬಂಧಕಾರಕವಲ್ಲ.

ಉಪಲೋಕಾಯುಕ್ತರು, ಲೋಕಾಯುಕ್ತರು ನಿರ್ವಹಿಸುವ ಕಾರ್ಯದಂತೆ ಕೆಳದರ್ಜೆಯ ನೌಕರರ ಮೇಲಿನ ಆರೋಪಗಳನ್ನು ವಿಚಾರಣೆ ನಡೆಸುತ್ತಾರೆ.

**ಲೋಕಾಯುಕ್ತರ ಕಾರ್ಯನಿರ್ವಹಣೆ**

ಲೋಕಾಯುಕ್ತರ ಅಧಿಕಾರ ವ್ಯಾಪ್ತಿಗೆ ಬರುವ ಅಧಿಕಾರಿಗಳು, ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಕಾನೂನುಬಾಹಿರ ಚಟುವಟಿಕೆಗಳು ಮುಂತಾದವುಗಳ ವಿರುದ್ಧ ಯಾರು ಬೇಕಾದರೂ ಲೋಕಾಯುಕ್ತರಿಗೆ ದೂರು ಸಲ್ಲಿಸಬಹುದು. ದೂರನ್ನು ಸ್ವೀಕರಿಸಿದ ನಂತರ ಪೂರ್ವಭಾವಿ ವಿಚಾರಣೆಯನ್ನು ನಡೆಸುತ್ತಾರೆ. ಈ ವಿಚಾರಣೆಯ ನಂತರ ಸಂಬಂಧಪಟ್ಟ ಇಲಾಖೆಗೆ, ಸಂಬಂಧಪಟ್ಟ ವ್ಯಕ್ತಿಗೆ ದೂರಿನ ಒಂದು ಪ್ರತಿಯನ್ನು ಅಥವಾ ಯಾವ ಆಧಾರದ ಮೇಲೆ ವಿಚಾರಣೆ ನಡೆಸಬೇಕು ಎಂಬುದರ ಬಗ್ಗೆ ಮಾಹಿತಿಯನ್ನೂ ಕಳುಹಿಸುವರು. ಅಪರಾಧ ಸಾಬೀತಾದರೆ ಅಪರಾಧಿಯ ಮೇಲೆ ಯಾವ ಕ್ರಮ ತೆಗೆದುಕೊಳ್ಳಬೇಕು ಎಂಬುದರ ಬಗ್ಗೆ ಲೋಕಾಯುಕ್ತರು ಸಲಹೆ ನೀಡುತ್ತಾರೆ.

ಕರ್ನಾಟಕದಲ್ಲಿ ಇತ್ತೀಚಿನ ದಿನಗಳಲ್ಲಿ ಲೋಕಾಯುಕ್ತರು ಮತ್ತು ಉಪಲೋಕಾಯುಕ್ತರು ಸಾಕಷ್ಟು ಭ್ರಷ್ಟಾಚಾರವನ್ನು ಬಯಲುಪಡಿಸುವುದರ ಮೂಲಕ ಭ್ರಷ್ಟಾಚಾರದ ನಿರ್ಮೂಲನೆಗೆ ಪ್ರಯತ್ನಿಸುತ್ತಿದ್ದಾರೆ.

**೮.೬ ಸಾರಾಂಶ**

ಇಂದಿನ ಯುಗವನ್ನು ಪ್ರಜಾಪ್ರಭುತ್ವ ಯುಗವೆಂದು ಕರೆದರೂ, ಅದು ಸಾಗುವ ದಾರಿಯಲ್ಲಿ ಹಲವಾರು ತೊಡಕುಗಳು ಕಂಡುಬಂದು ಅದರ ಸಮರ್ಪಕ ಕಾರ್ಯಾಚರಣೆಗೆ ಧಕ್ಕೆಯಾಗಿದೆ. ಅಂತವುಗಳಲ್ಲಿ ಮೊದಲನೆಯದು, ಅಸಮಾನತೆ. ನೈಸರ್ಗಿಕವಾಗಿ ಮನುಷ್ಯ ಅಸಮಾನನಾಗಿರುವುದು ಸಹಜವಾದುದು. ಆದರೆ ಸಾಮಾಜಿಕವಾಗಿ, ಜಾತಿ ಮತ್ತು ಲಿಂಗದ ಆಧಾರದ ಮೇಲೆ ಅಸಮಾನತೆ ಎಂಬುದು ಸಾಮಾಜಿಕ ಪಿಡುಗಾಗಿ ಪರಿಣಮಿಸಿ ಪ್ರಜಾಪ್ರಭುತ್ವಕ್ಕೆ ಧಕ್ಕೆಯಾಗುತ್ತದೆ. ಆದಕಾರಣ ಈ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಭಾರತ ಸಂವಿಧಾನದಲ್ಲಿ ಹಲವಾರು ಕ್ರಮಗಳನ್ನು ಕೈಗೊಳ್ಳಲಾಗಿದೆ. ರಾಜಕೀಯ ಸ್ಥಾನಮಾನಗಳನ್ನು ಹೊಂದಲು, ಸಾರ್ವಜನಿಕ ಕಛೇರಿಗಳಲ್ಲಿ ಅಧಿಕಾರಿಗಳಾಗಿ ಆಯ್ಕೆಯಾಗಲು, ಉನ್ನತ ತಾಂತ್ರಿಕ ಹಾಗೂ ವೈದ್ಯ ಶಿಕ್ಷಣವನ್ನು ಪಡೆಯಲು ಇಂತಹ ವರ್ಗಗಳಿಗೆ ಮೀಸಲಾತಿ ಸೌಲಭ್ಯದ ಅಡಿಯಲ್ಲಿ ಅವಕಾಶಗಳನ್ನು ನೀಡಿ ಅಭಿವೃದ್ಧಿಗೆ ಪೂರಕವಾದ ಸನ್ನಿವೇಶವನ್ನು ಸೃಷ್ಟಿಸಲಾಗುತ್ತಿದೆ. ಹಾಗೂ ಪುರುಷ ಪ್ರಧಾನವಾದ ನಮ್ಮ ಸಮಾಜದಲ್ಲಿ ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯ ಸ್ಥಾನಮಾನ ನಗಣ್ಯವೆಂದೇ ಹೇಳಬಹುದು. ಆ ಕಾರಣಕ್ಕಾಗಿ ಮಹಿಳೆಯರಿಗೆ ಸ್ಥಳೀಯ ಸರ್ಕಾರಗಳಲ್ಲಿ, ಶಿಕ್ಷಣದಲ್ಲಿ ಮತ್ತು ಉದ್ಯೋಗದಲ್ಲಿ

ಮೀಸಲಾತಿ ಸೌಲಭ್ಯವನ್ನು ನೀಡಲಾಗಿದೆ. ಇಂದಿನ ದಿನಗಳಲ್ಲಿ ಅದರ ಪರಿಣಾಮಗಳನ್ನು ನೋಡಬಹುದಾಗಿದೆ.

ಎರಡನೆಯ ಪಿಡುಗು ಎಂದರೆ ಅನಕ್ಷರತೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಪ್ರಭುಗಳಾಗಿರುವುದರಿಂದ ಸರ್ಕಾರದ ದಕ್ಷತೆ ಅವಲಂಬಿತವಾಗಿರುವುದು ಆ ಸರ್ಕಾರವನ್ನು ರಚಿಸುವ ಪ್ರಜೆಗಳ ಸಾಕ್ಷರತೆಯ ಗುಣಮಟ್ಟದ ಮೇಲೆ. ಆದರೆ ಪ್ರಜೆಗಳು ಅನಕ್ಷರಸ್ಥರಾದರೆ ಸರ್ಕಾರದ ಗುಣಮಟ್ಟ, ದಕ್ಷತೆ ಕ್ಷೀಣಿಸುತ್ತದೆ. ಭಾರತದಲ್ಲಿ ಸಾಕ್ಷರತೆಯನ್ನು ಸಾಧಿಸಲು ಭಾರತ ಸಂವಿಧಾನದಲ್ಲಿ ಸಾಕಷ್ಟು ಅವಕಾಶವನ್ನು ಮೂರನೆ ಮತ್ತು ನಾಲ್ಕನೇ ಅಧ್ಯಾಯಗಳಲ್ಲಿ, ಇತ್ತೀಚಿನ ೮೬ನೇ ತಿದ್ದುಪಡಿಯಲ್ಲಿ ನೀಡಲಾಗಿದೆ. ಇವುಗಳೆಲ್ಲದರ ಪರಿಣಾಮವಾಗಿ, ಇಂದು ೧೪ ವರ್ಷ ವಯಸ್ಸಿನವರೆಗೆ ಕಡ್ಡಾಯ ಮತ್ತು ಉಚಿತ ಶಿಕ್ಷಣವನ್ನು ಜಾರಿಗೊಳಿಸಲಾಗಿದೆ.

ಕೊನೆಯದಾಗಿ, ಕೋಮುವಾದ, ಇದು ಪ್ರಜಾಪಪ್ರಭುತ್ವದ ಗಂಭೀರವಾದ ಸಮಸ್ಯೆಯಾಗಿದೆ. ರಾಷ್ಟ್ರದ ಜನತೆಯಲ್ಲಿ ಏಕತೆಗೆ ಬದಲಾಗಿ ಧಾರ್ಮಿಕ ಆಧಾರದ ಮೇಲೆ ಒಡಕನ್ನು ಉಂಟುಮಾಡಿ ಅದರ ಮೂಲಕ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಗುರಿಯನ್ನು ಸಾಧಿಸಿಕೊಳ್ಳುತ್ತವೆ. ಇಂದು ರಾಜಕೀಯ ಅಧಿಕಾರವನ್ನು ಪಡೆಯುವುದಕ್ಕಾಗಿಯೇ ಇಂತಹ ಸಾಧನಗಳನ್ನು ಬಳಸುತ್ತಿರುವುದು ಇನ್ನೂ ಭಯ ಹುಟ್ಟಿಸುವಂತಹ ಸನ್ನಿವೇಶಗಳು ಅಸ್ತಿತ್ವಕ್ಕೆ ಬರುತ್ತವೆ. ಹಾಗಾಗಿ ಈ ರೀತಿಯ ಧಾರ್ಮಿಕ ನಂಬಿಕೆಗಳ ಆಧಾರದ ಗುಂಪುಗೂಡಿಸಿ, ಆ ಮೂಲಕ ಅಧಿಕಾರ ಪಡೆಯುವುದು ಇಂದಿನ ಕೋಮುವಾದದ ಗುರಿಯಾಗಿರುವುದರಿಂದ ಇದು ಪ್ರಜಾಪ್ರಭುತ್ವಕ್ಕೆ ಧಕ್ಕೆಯಾಗಿ ಪರಿಣಮಿಸಿದೆ.

ಜಾತ್ಯತೀತ ಎಂಬುದು ಭಾರತ ಸಂವಿಧಾನದ ವಿಭಾಜ್ಯ ಅಂಗವಾಗಿದೆ. ಭಾರತದಲ್ಲಿ ವೈವಿಧ್ಯಮಯ ಧರ್ಮಗಳಿರುವುದರಿಂದ ಎಲ್ಲ ಧರ್ಮಗಳಿಗೂ ಸಮಾನ ಅವಕಾಶವನ್ನು ನೀಡುವ ಮತ್ತು ಯಾವುದೇ ಧರ್ಮವನ್ನು ರಾಷ್ಟ್ರೀಯ ಧರ್ಮ ಎಂದು ಘೋಷಿಸದಿರುವುದೇ ಜಾತ್ಯತೀತವಾದವಾಗಿದೆ.ಅದರ ಜೊತೆಗೆ ರಾಷ್ಟ್ರೀಯ ಏಕತೆಯನ್ನು ಸಾಧಿಸಲು ರಾಷ್ಟ್ರೀಯ ಏಕತಾ ಸಮ್ಮೇಳನಗಳನ್ನು, ರಾಷ್ಟ್ರೀಯ ಏಕತಾ ಮಂಡಳಿಗಳನ್ನು ಅಸ್ತಿತ್ವಕ್ಕೆ ತರಲಾಗಿದೆ.

ಭಯೋತ್ಪಾದನೆ, ಇದೊಂದು ಭಯಾನಕ ಕ್ರಿಯೆ, ಇದು ಹಲವಾರು ರೀತಿಯ ಕೃತ್ಯಗಳನ್ನು ಒಳಗೊಂಡಿದೆ ಮತ್ತು ವಿಶ್ವದಾದ್ಯಂತ ಹಬ್ಬಿಕೊಂಡಿರುವ ಜ್ವಲಂತ ಸಮಸ್ಯೆಯಾಗಿ ಪರಿಣಮಿಸಿದೆ. ಇದನ್ನು ತಡೆಗಟ್ಟಲು ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹಲವಾರು ರೀತಿಯ ಕಾನೂನು, ಕಾಯಿದೆಗಳು ಮತ್ತು ಸಂಸ್ಥೆಗಳನ್ನು ರಚಿಸಲಾಗಿದೆ. ಆದರೂ ಇದು ತನ್ನ ಬಾಹುಗಳನ್ನು ವಿಸ್ತರಿಸುವುದನ್ನು ತಡೆಗಟ್ಟುವುದು ಪ್ರತಿಯೊಬ್ಬ ನಾಗರಿಕನ ಆದ್ಯ ಕರ್ತವ್ಯವಾಗಿದೆ.

ಭ್ರಷ್ಟಾಚಾರದ ಬಗ್ಗೆ ಸೆಂಟರ್ ಫಾರ್ ಮಿಡಿಯಾ ಸ್ಟಡೀಸ್ ನಡೆಸಿದ "ಭಾರತ ಭ್ರಷ್ಟಾಚಾರ ಅಧ್ಯಯನ ೨೦೦೫" ರ ವರದಿಯನ್ನು "ಟ್ರಾನ್ಸ್‌ಫರೆನ್ಸಿ ಇಂಟರ್‌ನ್ಯಾಷನಲ್ ಇಂಡಿಯಾ" ಬಿಡುಗಡೆ ಮಾಡಿದೆ. ಅದರ ಪ್ರಕಾರ, ಭ್ರಷ್ಟ ರಾಜ್ಯಗಳ ಪೈಕಿ ಕರ್ನಾಟಕ

ನಾಲ್ಕನೇ ಸ್ಥಾನದಲ್ಲಿದೆ. ಮೊದಲಿನ ಸ್ಥಾನದಲ್ಲಿ ಬಿಹಾರ ಇದ್ದರೆ, ೨ ಮತ್ತು ೩ನೇ ಸ್ಥಾನ ಜಮ್ಮು-ಕಾಶ್ಮೀರ ಹಾಗೂ ಮಧ್ಯಪ್ರದೇಶಗಳದ್ದು. ಭ್ರಷ್ಟಾಚಾರ ಮುಕ್ತ ರಾಜ್ಯಗಳ ಪಟ್ಟಿಯಲ್ಲಿ ಮೊದಲ ಸ್ಥಾನ ಕೇರಳಕ್ಕೆ ನಂತರದ ಮೂರು ಸ್ಥಾನಗಳಲ್ಲಿ ಹಿಮಾಚಲ ಪ್ರದೇಶ, ಗುಜರಾತ್ ಮತ್ತು ಆಂಧ್ರ ಪ್ರದೇಶ ಇವೆ. ಅಂದರೆ, ದಕ್ಷಿಣ ಭಾರತದಲ್ಲಿ ಭ್ರಷ್ಟಾಚಾರದಲ್ಲಿ ಮೊದಲನೆ ಸ್ಥಾನದಲ್ಲಿರುವುದು ಕರ್ನಾಟಕವೇ ಎಂದು ಈ ಅಧ್ಯಯನದಿಂದ ಸಾಬೀತಾಗಿದೆ. ಆದ್ದರಿಂದ ಕರ್ನಾಟಕದಲ್ಲಿ ಈ ಪಿಡುಗನ್ನು ತಡೆಗಟ್ಟುವುದು ಅತ್ಯವಶ್ಯಕವಾಗಿದೆ. ಆ ದಿಕ್ಕಿನಲ್ಲಿ ಲೋಕಾಯುಕ್ತವು ಯಶಸ್ವಿ ಕಾರ್ಯಾಚರಣೆ ಮಾಡುತ್ತಿದೆ, ಅದಕ್ಕೆ ಸಂಬಂಧಿಸಿದಂತೆ ನಾಗರಿಕರಲ್ಲಿ ಅರಿವು ಮೂಡಿಸುವುದರಿಂದ ಇದನ್ನು ತಡೆಗಟ್ಟಬಹುದೇನೊ ಅನಿಸುತ್ತದೆ.

### ೮.೭ ಪಾರಿಭಾಷಿಕ ಪದಕೋಶ

1. Secular - ಜಾತ್ಯತೀತ
2. Prevention of Terrorism Act (POTA) - ಭಯೋತ್ಪಾದನೆ ನಿಷೇಧ ಕಾಯ್ದೆ
3. Maintanance of Internal Security Act (MISA) -ಆಂತರಿಕ ಭದ್ರತಾ ಕಾಯ್ದೆ
4. National Security Act -ರಾಷ್ಟ್ರೀಯ ಭದ್ರತಾ ಕಾಯ್ದೆ
5. Terrorist and Disruptive Activies (Prevention) Act -ಭಯೋತ್ಪಾದನೆ ಮತ್ತು ವಿಛಿದ್ರಕಾರಕ ಚಟುವಟಿಕೆಗಳ ನಿಷೇಧ ಕಾಯ್ದೆ
6. Reward - ಕೊಡುಗೆ

### ೮.೮ ಪ್ರಶ್ನೆಗಳು

### I.ಒಂದು ಅಂಕದ ಪ್ರಶ್ನೆಗಳು

೧. ಗ್ಲೋವನ್ನಿ ಸಾರ್ತೋರಿ ಯವರ ಗ್ರಂಥದ ಹೆಸರೇನು?

೨. ಭಾರತ ಸಂವಿಧಾನದ ಯಾವ ವಿಧಿಯ ಅನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಲೋಕಸಭೆಯಲ್ಲಿ ಮೀಸಲಾತಿ ನೀಡಲಾಗಿದೆ?

೩. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಎಲ್ಲಿಯವರೆಗೆ ಲೋಕಸಭೆಯಲ್ಲಿ ಸ್ಥಾನಗಳನ್ನು ಮೀಸಲೀಡಲಾಗಿದೆ.

೪. ೯೩ನೇ ಸಂವಿಧಾನ ತಿದ್ದುಪಡಿ ಯಾವಾಗ ಜಾರಿಗೊಂಡಿತು?

೫. ಕೋಮುವಾದ ಎಂದರೇನು?

೬. ಜಾತ್ಯತೀತತೆ ಎಂದರೇನು?

೭. ಭಯೋತ್ಪಾದನೆ ಎಂದರೇನು?

೮. POTA ವನ್ನು ವಿಸ್ತರಿಸಿ ಬರೆಯಿರಿ.

೯. MISA ವನ್ನು ವಿಸ್ತರಿಸಿ ಬರೆಯಿರಿ.

೧೦. TADA ವನ್ನು ವಿಸ್ತರಿಸಿ ಬರೆಯಿರಿ.

೧೧. NASA ವನ್ನು ವಿಸ್ತರಿಸಿ ಬರೆಯಿರಿ.

೧೨. ಭ್ರಷ್ಟಾಚಾರ ಎಂದರೇನು?

೧೩. ಕರ್ನಾಟಕ ಸರ್ಕಾರ ಯಾವಾಗ ಲೋಕಾಯುಕ್ತರ ಹುದ್ದೆಯನ್ನು ಅಸ್ತಿತ್ವಕ್ಕೆ ತಂದಿತು.

೧೪. ಲೋಕಾಯುಕ್ತರ ಅಧಿಕಾರಾವಧಿ ಎಷ್ಟು?

## II. ಎರಡು ಅಂಕದ ಪ್ರಶ್ನೆಗಳು

೧. ಸಂವಿಧಾನದ ೩೩ನೇ ವಿಧಿ ಅನ್ವಯ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಎಷ್ಟು ಸ್ಥಾನಗಳನ್ನು ಲೋಕಸಭೆಯಲ್ಲಿ ಮೀಸಲಿಡಲಾಗಿದೆ - ತಿಳಿಸಿ.

೨. ಅನಕ್ಷರತೆ ಪ್ರಜಾಪ್ರಭುತ್ವದ ಒಂದು ತೊಡಕು - ವಿವರಿಸಿ.

೩. ಕಡ್ಡಾಯ ಶಿಕ್ಷಣವನ್ನು ಭಾರತ ಸಂವಿಧಾನದ ಯಾವ ಯಾವ ವಿಧಿಗಳು ಪ್ರಸ್ತಾಪಿಸಿವೆ- ಚರ್ಚಿಸಿ.

೪. ನೆರೆಹೊರೆಯ ಶಾಂತಿ ಸಮಿತಿಗಳ ಬಗ್ಗೆ ವಿವರಿಸಿ.

೫. ಭಾರತದ ಯಾವ ಯಾವ ರಾಜ್ಯಗಳಲ್ಲಿ ಭಯೋತ್ಪಾದನೆ ತನ್ನ ಹುಟ್ಟನ್ನು ಕಂಡುಕೊಂಡಿದೆ- ವಿವರಿಸಿ.

೬. ಭ್ರಷ್ಟಾಚಾರದ ಎರಡು ದೃಷ್ಟಿಕೋನಗಳನ್ನು ವಿವರಿಸಿ.

೭. ಲೋಕಾಯುಕ್ತರ ಅರ್ಹತೆಗಳು ಯಾವುವು?

## III. ಮೂರು ಅಂಕದ ಪ್ರಶ್ನೆಗಳು

೧. ಮೀಸಲಾತಿಯ ಬಗ್ಗೆ ಒಂದು ಟಿಪ್ಪಣಿ ಬರೆಯಿರಿ.

೨. ಭಾರತ ಸಂವಿಧಾನದಲ್ಲಿ ಕಡ್ಡಾಯ ಶಿಕ್ಷಣದ ಸ್ಥಾನವನ್ನು ಚರ್ಚಿಸಿ.

೩. ಕಡ್ಡಾಯ ಶಿಕ್ಷಣಕ್ಕೆ ಪೂರಕವಾದ ೯೩ನೇ ಸಂವಿಧಾನ ತಿದ್ದುಪಡಿ ಮಸೂದೆಯನ್ನು ವಿವರಿಸಿ.

೪. ಭ್ರಷ್ಟಾಚಾರ ಪ್ರಜಾಪ್ರಭುತ್ವಕ್ಕೆ ಒಂದು ಬೆದರಿಕೆ - ವಿಷದಪಡಿಸಿ.

೫. ಭ್ರಷ್ಟಾಚಾರ ನಿವಾರಣಾ ಅಧಿನಿಯಮ ೧೯೪೭ನ್ನು ವಿವರಿಸಿ.

## IV. ಹತ್ತು ಅಂಕದ ಪ್ರಶ್ನೆಗಳು

೧. ಇಂದಿನ ಯುಗವನ್ನು ಪ್ರಜಾಪ್ರಭುತ್ವ ಯುಗ ಎಂದು ಕರೆಯಲಾಗಿದೆ - ವಿಷದಪಡಿಸಿ.

೨. ಹಿಂದುಳಿದ ಜಾತಿ ಮತ್ತು ಮಹಿಳಾ ಮೀಸಲಾತಿ ನ್ಯಾಯಯುತವಾದುದೇ - ಚರ್ಚಿಸಿ.

೩. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಕಡ್ಡಾಯ ಶಿಕ್ಷಣ ಸಾಧ್ಯವೇ, ಚರ್ಚಿಸಿ.

೪. ಜಾತ್ಯತೀತ ಮತ್ತು ರಾಷ್ಟ್ರೀಯ ಏಕತೆಯ ಮಹತ್ವವನ್ನು ಚರ್ಚಿಸಿ.

## V. ಅಭ್ಯಾಸ / ಚಟುವಟಿಕೆಗಳು

೧. ಮೀಸಲಾತಿಯನ್ನು ಸಮರ್ಪಕವಾಗಿ ಬಳಕೆಯಾಗುತ್ತಿದೆಯಾ ಎಂಬ ಬಗ್ಗೆ ಒಂದು ಸ್ಥಳೀಯವಾದ ಅಧ್ಯಯನವನ್ನು ಮಾಡಿ.

೨. ವಯಸ್ಕರ ಶಿಕ್ಷಣದಿಂದ ಅನಕ್ಷರತೆ ಹೋಗಲಾಡಿಸಲು ಸಾಧ್ಯವೇ, ಆ ಬಗ್ಗೆ ಚಿಂತಿಸಿ ಅಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸಿ.

೩. ನಿಮ್ಮ ಊರುಗಳಲ್ಲಿ ಕೋಮು ಸೌಹಾರ್ದತೆಯನ್ನು ಕಾಯ್ದುಕೊಳ್ಳಲು ನೆರೆಹೊರೆಯ ಶಾಂತಿ ಸಮಿತಿಯನ್ನು ರಚಿಸಲಾಗಿದೆಯೇ, ಇಲ್ಲವಾದಲ್ಲಿ ಅಂತಹ ಸಮಿತಿಗಳನ್ನು ರಚಿಸಲು ಮುಂದಾಗಿ.

೪. ಭ್ರಷ್ಟ ಅಧಿಕಾರಿಗಳ ಬಗ್ಗೆ ಲೋಕಾಯುಕ್ತರಿಗೆ ಮಾಹಿತಿ ನೀಡಿ.

**ಗ್ರಂಥ ಋಣ**


ಡಾ.ಎಚ್. ಎಮ್. ರಾಜಶೇಖರ., ಭಾರತದ ಸರ್ಕಾರ ಮತ್ತು ರಾಜಕೀಯ.

ಪ್ರೊ. ಎಂ. ನಂಜುಂಡ ಸ್ವಾಮಿ., ಸಾರ್ವಜನಿಕ ಆಡಳಿತ

ಪ್ರೊ. ಮಾಲಿ ಮದ್ದಣ್ಣ., ಸಾರ್ವಜನಿಕ ಆಡಳಿತ

ಹೆಚ್. ಸಿ. ಲೋಹಿತಾಶ್ವ., ಭಾರತದ ಸಂವಿಧಾನ ಸರಕಾರ ಮತ್ತು ರಾಜಕೀಯ

ಡಾ. ಕೆ. ಎಂ. ಕುಮಾರ್., ರಾಜ್ಯಶಾಸ್ತ್ರ

ಡಾ. ಯು. ಗುರುಮೂರ್ತಿ., ರಾಜಕೀಯ ತತ್ವ ಮತ್ತು ಚಿಂತಕರು

ಎಸ್. ಚಂದ್ರಶೇಖರ್., ಅಂಬೇಡ್ಕರ್ ಮತ್ತು ಗಾಂಧಿ

ಬಾಪು ಹೆದ್ದೂರ ಶೆಟ್ಟಿ., ಸಮಾಜವಾದ ಜನತಂತ್ರ ಮತ್ತು ಕಮ್ಯೂನಿಸಂ

ಪ್ರೊ. ಮಾಲಿ ಮದ್ದಣ್ಣ., ರಾಜ್ಯ ಸಿದ್ಧಾಂತ ಮತ್ತು ಸಿದ್ಧಾಂತಗಳು

ಎಸ್. ಕುಮಾರ ಸ್ವಾಮಿ., ರಾಜ್ಯಶಾಸ್ತ್ರ (ಸಂಪುಟ ೧)

ಪ್ರೊ. ಎಂ. ನಂಜುಂಡ ಸ್ವಾಮಿ., ರಾಜಕೀಯ ಸಿದ್ಧಾಂತ ಮತ್ತು ದಾರ್ಶನಿಕರು

ಡಾ. ಕೆ. ಜೆ. ಸುರೇಶ್., ಆಧುನಿಕ ರಾಜಕೀಯ ಸಿದ್ಧಾಂತಗಳು

ಡಾ. ಕೆ. ಜೆ. ಸುರೇಶ್., ರಾಜಕೀಯ ಸಿದ್ಧಾಂತ ಮತ್ತು ಚಿಂತಕರು

ನೇ. ತಿ. ಸೋಮಶೇಖರ್., ಆರ್ಥಿಕ ಚಿಂತನೆ

ಮಹದೇವಯ್ಯ., ರಾಜ್ಯಶಾಸ್ತ್ರ ಪರಿಕಲ್ಪನೆಗಳು ಮತ್ತು ಸಿದ್ಧಾಂತ

P. R. Ram (Editor) - Secular Challenge To Communal Politics

P. M. Bakshi., The Constitution of India.

Srivastava., History of Economic Thought.

A.R. Tyagi., Public Administration.

Dr. K. M. kumar., An Analysis of Karnataka Rajya Raitha Sangha as a Movement (an unpublished thesis)

ದಿಕ್ಸೂಚಿ (ಮಾಸಿಕ ಪತ್ರಿಕೆಯ ಹಲವು ಸಂಚಿಕೆಗಳು).


## Articles


Rahul Mukherjee., Privatisation, Fedaralism and governance, EPW, January 3, 2004.

Ujjwal Kumar Singh., Democratic Dilemmas - Can Democracy Do without Extraordinary Laws?, EPW, February 1, 2003.

# ಅಧ್ಯಾಯ ೯

# ಭಾರತ ಮತ್ತು ವಿಶ್ವ

## ೯.೧. ಅಂತಾರಾಷ್ಟ್ರೀಯ ರಾಜಕಾರಣ

ಅಂತಾರಾಷ್ಟ್ರೀಯ ಸಂಬಂಧಗಳು ಮತ್ತು ಅಂತರ-ರಾಷ್ಟ್ರೀಯ ರಾಜಕಾರಣ ಎಂಬ ಎರಡು ಪದಗಳನ್ನು ಸಾಕಷ್ಟು ಸಂದರ್ಭಗಳಲ್ಲಿ ಸಮಾನಾರ್ಥದಲ್ಲಿ ಬಳಸಲಾಗುತ್ತಿದೆ. ಆದರೆ ಅಂತರ-ರಾಷ್ಟ್ರೀಯ ರಾಜಕಾರಣವು ವಿಶ್ವಸಮುದಾಯದ ರಾಜಕೀಯ ಅಧ್ಯಯನ. ಅದು ರಾಯಭಾರ ಮತ್ತು ರಾಜ್ಯಗಳ ನಡುವಣ ಇರುವ ರಾಜಕೀಯ ಸಂಬಂಧವೇ ಆಗಿದೆ ಮತ್ತು ಅಂತರ-ರಾಷ್ಟ್ರೀಯ ಸಂಬಂಧಗಳು ವಿಶ್ವಸಮಾಜದ ಜನತೆ ಮತ್ತು ವಿವಿಧ ಗುಂಪುಗಳ ನಡುವಣ ಎಲ್ಲಾ ಸಂಬಂಧಗಳ ಮೊತ್ತವಾಗಿದೆ.

ಅಂತಾರಾಷ್ಟ್ರೀಯ ಸಂಬಂಧಗಳ ಕೇಂದ್ರ ಬಿಂದು ಅಂತರ-ರಾಷ್ಟ್ರೀಯ ರಾಜಕಾರಣ ವಾಗಿದೆ. ಅಂತಾರಾಷ್ಟ್ರೀಯ ಸಂಬಂಧಗಳು ವಿಶ್ವ ರಾಜಕಾರಣದ ಸುತ್ತಲೂ ಸುತ್ತುತ್ತಿರುತ್ತವೆ.

### ಅ. ಅರ್ಥ ಮತ್ತು ವ್ಯಾಖ್ಯೆಗಳು

ಅಂತಾರಾಷ್ಟ್ರೀಯ ರಾಜಕಾರಣದ ಬಗ್ಗೆ ಹಲವಾರು ಚಿಂತಕರು ತಮ್ಮದೇ ಆದ ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅವುಗಳೆಂದರೆ:

**ಪಾಮರ್** ಮತ್ತು **ಪರ್ಕಿನ್ಸ್‌**ರವರು "ಸ್ಥಿತ್ಯಂತರ ಗತಿಯಲ್ಲಿರುವ ವಿಶ್ವಸಮುದಾಯದ ಅಧ್ಯಯನವೇ ಅಂತಾರಾಷ್ಟ್ರೀಯ ಸಂಬಂಧ" ಎಂದಿದ್ದಾರೆ.

**ಮಾರ್ಗೆಂಥೋ**ರವರ ಪ್ರಕಾರ "ರಾಷ್ಟ್ರಗಳ ನಡುವೆ ಅಧಿಕಾರಕ್ಕಾಗಿ ಸಂಘರ್ಷ ಮತ್ತು ಅದರ ಪ್ರಯೋಗವೇ ಅಂತಾರಾಷ್ಟ್ರೀಯ ರಾಜಕಾರಣ"ವಾಗಿದೆ.

**ಕ್ವಿನ್ಸಿರೈಟರ್‌**ರವರ ಅಭಿಪ್ರಾಯದಂತೆ "ಬಲಯುತ ಗುಂಪುಗಳ ನಡುವಣ ಸಂಬಂಧಗಳ ಅಧ್ಯಯನವೇ ಅಂತಾರಾಷ್ಟ್ರೀಯ ಸಂಬಂಧಗಳು".

**ಗ್ರೇಸನ್ ಕರ್ಕ್‌**ರವರ ಪ್ರಕಾರ "ಅಂತಾರಾಷ್ಟ್ರೀಯ ರಾಜಕಾರಣವು ರಾಷ್ಟ್ರರಾಜ್ಯಗಳ ವಿದೇಶಾಂಗ ನೀತಿಯನ್ನು ರೂಪಿಸುವ ಶಕ್ತಿಗಳ, ಅವುಗಳನ್ನು ಜಾರಿಗೆ ತರುವ ವಿಧಾನಗಳ ಮತ್ತು ಅವುಗಳ ಪರಿಣಾಮವನ್ನು ಮಿತಗೊಳಿಸುವ ಪ್ರಭಾವಗಳ ಅಧ್ಯಯನವನ್ನು ಒಳಗೊಂಡಿರುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

**ಹೆರಾಲ್ಡ್‌ಸ್ಪ್ರೌಟ್** ಮತ್ತು **ಮಾರ್ಗರೆಟ್ ಸ್ಪ್ರೌಟ್‌**ರವರ ಅಭಿಪ್ರಾಯದಂತೆ "ಅಪಿರೋಧತೆ, ಪ್ರತಿರೋಧ ಅಥವಾ ಉದ್ದೇಶ ಅಥವಾ ಹಿತಾಸಕ್ತಿಯ ಬಿಕ್ಕಟ್ಟಿನ

ಅಂಶಗಳನ್ನೊಳಗೊಂಡಂತಹ ಸ್ವತಂತ್ರ ರಾಜಕೀಯ ಸಮಾಜಗಳ ಪ್ರಕ್ರಿಯೆಗಳನ್ನು ಮತ್ತು ಸಂಬಂಧಗಳನ್ನು" ಅಂತಾರಾಷ್ಟ್ರೀಯ ರಾಜಕಾರಣ ಎಂದಿದ್ದಾರೆ.

ಜಾಜ್.ಎ.ಲಿಂಕನ್‌ರವರು ಅಂತಾರಾಷ್ಟ್ರೀಯ ಸಂಬಂಧಗಳನ್ನು "ರಾಜ್ಯಗಳ ನಡುವಣ ಯಥಾ ರೀತಿಯ ಸಂಬಂಧಗಳು" ಎಂದು ವ್ಯಾಖ್ಯಾನಿಸಿದ್ದಾರೆ.

ಸ್ಟ್ಯಾನ್ಲೆ ಹಾಫ್‌ಮನ್‌ರವರು "ಅಂತಾರಾಷ್ಟ್ರೀಯ ಸಂಬಂಧಗಳು ಎಂಬ ಶಾಸ್ತ್ರವು ಈ ವಿಶ್ವವು ವಿಭಜಿಸಲ್ಪಟ್ಟಿರುವ ಪ್ರಾಥಮಿಕ ಘಟಕಗಳ ಬಾಹ್ಯ ಧೋರಣೆ ಮತ್ತು ಶಕ್ತಿಯ ಮೇಲೆ ಪ್ರಭಾವ ಬೀರುವ ಅಂಶಗಳಿಗೆ ಮತ್ತು ಚಟುವಟಿಕೆಗಳಿಗೆ ಸಂಬಂಧಿಸಿದೆ."

ಅಂತಾರಾಷ್ಟ್ರೀಯ ಸಂಬಂಧಗಳಲ್ಲಿ ರಾಜಕೀಯ ಅಂಶಗಳ ಮೇಲೆ ಮಾತ್ರ ಅಂತಾರಾಷ್ಟ್ರೀಯ ರಾಜಕಾರಣವು ಗಮನ ನೀಡುತ್ತದೆ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜಕೀಯ ಅಂಶವು ಬೇರೆಲ್ಲಾ ಅಂಶಗಳ ಮೇಲೆ ಯಾವ ರೀತಿ ಪ್ರಭಾವ ಬೀರುತ್ತದೆ ಎಂಬುದನ್ನು ಅಧ್ಯಯನ ಮಾಡುತ್ತದೆ.

ಫ್ರಿಡರಿಕ್ ಹಾರ್ಡ್‌ಮನ್‌ರ ದೃಷ್ಟಿಯಲ್ಲಿ "ಅತ್ಯಂತ ವ್ಯಾಪಕ ಅರ್ಥದಲ್ಲಿ ಅಂತಾರಾಷ್ಟ್ರೀಯ ಸಂಬಂಧಗಳು ಎಂಬ ಮಾತು ರಾಜ್ಯಗಳ ನಡುವಣ ಪರಸ್ಪರ ವ್ಯವಹಾರಗಳನ್ನು ಮತ್ತು ರಾಷ್ಟ್ರೀಯ ಗಡಿಯನ್ನು ಹಾಯ್ದು ಹೋಗುವ ಜನತೆ, ವಸ್ತುಗಳು ಹಾಗೂ ಅಭಿಪ್ರಾಯಗಳೆಲ್ಲವನ್ನು ಒಳಗೊಳ್ಳುತ್ತದೆ. ಅದು ಹೇಗಾದರೂ ಇರಲಿ ಅಧ್ಯಯನ ಕ್ಷೇತ್ರವಾಗಿ ರಾಜ್ಯಗಳು ತಮ್ಮ ರಾಷ್ಟ್ರೀಯ ಹಿತಾಸಕ್ತಿಗಳನ್ನು ಇನ್ನಿತರೇ ರಾಜ್ಯಗಳ ಹಿತಾಸಕ್ತಿಗಳೊಡನೆ ಹೊಂದಾಣಿಸಿಕೊಳ್ಳುವ ವಿಧಾನಗಳೇ ಅದರ ಕೇಂದ್ರಬಿಂದು."

ಅರ್ನಾಲ್ಡ್ ಟಾಯ್ನುಬಿಯವರ ಪ್ರಕಾರ "ಪರಮಾಧಿಕಾರ ಪಡೆದ ಸ್ವತಂತ್ರ ರಾಜ್ಯಗಳ ಸಂಬಂಧದ" ಅಧ್ಯಯನವೇ ಅಂತಾರಾಷ್ಟ್ರೀಯ ಸಂಬಂಧಗಳು.

ಈ ವ್ಯಾಖ್ಯಾನವು ಅಂತಾರಾಷ್ಟ್ರೀಯ ಸಂಬಂಧಗಳನ್ನು ರಾಜ್ಯ-ರಾಜ್ಯಗಳ ನಡುವಣ ಸಂಬಂಧಗಳಿಗೆ ಸೀಮಿತಗೊಳಿಸುತ್ತದೆ ಮತ್ತು ಅಧ್ಯಯನ ವ್ಯಾಪ್ತಿಯಿಂದ ರಾಜಕೀಯೇತರ ವಿಷಯಗಳನ್ನು ಹೊರಗಿಡುತ್ತದೆ ಮತ್ತು ಪರಮಾವಧಿಕಾರಿ ಸ್ವತಂತ್ರ ರಾಜ್ಯಗಳ ನಡುವಣ ಸಂಬಂಧಗಳ ಮೇಲೆ ಪ್ರಭಾವ ಬೀರದ ರಾಜಕೀಯೇತರ ಶಕ್ತಿಗಳನ್ನು, ವಿಧಾನಗಳನ್ನು, ಒತ್ತಡಗಳನ್ನು ಅಧ್ಯಯನ ವ್ಯಾಪ್ತಿಯಿಂದ ಹೊರಗಿಡುತ್ತದೆ.

ಆಧುನಿಕಕಾಲದಲ್ಲಿ ಅಂತಾರಾಷ್ಟ್ರೀಯ ರಾಜಕಾರಣವನ್ನು ಪ್ರತ್ಯೇಕ ವಿಷಯವಸ್ತು ಎಂದು ಪರಿಗಣಿಸದೇ ಅದನ್ನು ಅಂತಾರಾಷ್ಟ್ರೀಯ ಸಂಬಂಧದಲ್ಲೇ ಗುರುತಿಸಲು ಹಲವಾರು ಚಿಂತಕರು ಪ್ರಯತ್ನಿಸಿದ್ದಾರೆ. ಆದರೆ ಮೂಲಭೂತವಾಗಿ ಅಂತಾರಾಷ್ಟ್ರೀಯ ರಾಜಕಾರಣ ಮತ್ತು ಅಂತಾರಾಷ್ಟ್ರೀಯ ಸಂಬಂಧದಲ್ಲಿ ಸ್ವಲ್ಪ ಭಿನ್ನತೆ ಇರುವುದನ್ನು ಕಾಣಬಹುದು ಮತ್ತು ಅಂತರಾಷ್ಟ್ರೀಯ ರಾಜಕಾರಣದ ವ್ಯಾಪ್ತಿ ಸಂಕುಚಿತವಾದುದಾಗಿದೆ.

**ಆ. ಮಹತ್ವ**

ಅಂತಾರಾಷ್ಟ್ರೀಯ ರಾಜಕಾರಣದ ಮಹತ್ವಗಳು ಈ ರೀತಿ ಇವೆ:

**೧. ವಿಶ್ವದ ರಾಷ್ಟ್ರಗಳ ರಾಜಕೀಯ ಜ್ಞಾನ**

ಅಂತಾರಾಷ್ಟ್ರೀಯ ರಾಜಕಾರಣದ ಅಧ್ಯಯನದಿಂದಾಗಿ ವಿಶ್ವದ ಇತರೆ ರಾಷ್ಟ್ರಗಳು ಬೇರೆ ಬೇರೆ ರಾಷ್ಟ್ರಗಳೊಂದಿಗೆ ಯಾವ ತರಹದ ಸಂಬಂಧವನ್ನು ಹೊಂದಿವೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಬಹುದು.

**೨. ಶಾಂತಿ ಕಾಪಾಡಲು**

ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಷ್ಟ್ರಗಳು ಪರಸ್ಪರ ಸ್ನೇಹಯುತ ಸಂಬಂಧ ಹೊಂದುವುದರಿಂದ ಯುದ್ಧಗಳನ್ನು ತಡೆಗಟ್ಟಿ ಶಾಂತಿಯನ್ನು ಮರು ಸ್ಥಾಪಿಸಬಹುದಾಗಿದೆ. ಉದಾ. ಶೀತಲಸಮರ ಕೊನೆಗೊಂಡು ರಷ್ಯಾ ಮತ್ತು ಅಮೇರಿಕಾ ರಾಷ್ಟ್ರಗಳ ನಡುವೆ ಸೌಹಾರ್ದ ಸಂಬಂಧ ಏರ್ಪಟ್ಟಿರುವುದೇ ಇದಕ್ಕೆ ನಿದರ್ಶನವಾಗಿದೆ.

**೩. ರಾಷ್ಟ್ರಗಳ ಸಮಸ್ಯೆ**

ರಾಷ್ಟ್ರಗಳು ಪರಸ್ಪರ ಸಹಕಾರಿಯುತ ಸ್ನೇಹ ಸಂಬಂಧಗಳನ್ನು ಬೆಳೆಸಿಕೊಳ್ಳುವುದರಿಂದ ಒಂದು ರಾಷ್ಟ್ರಕ್ಕೆ ವಿಶ್ವದ ಹಲವಾರು ರಾಷ್ಟ್ರಗಳ ಸಮಸ್ಯೆಯ ಅರಿವಾಗುತ್ತದೆ ಮತ್ತು ಅದಕ್ಕೆ ಪರಿಹಾರ ಸೂಚಿಸುವ ಕಾರ್ಯದಲ್ಲಿ ಮುಂದಾಳತ್ವವಹಿಸುವ ಸಾಧ್ಯತೆ ಇರುತ್ತದೆ.

**೪. ರಾಷ್ಟ್ರದ ಪ್ರತಿನಿಧಿತ್ವ**

ಅಂತಾರಾಷ್ಟ್ರೀಯ ರಾಜಕಾರಣದಿಂದಾಗಿ ಅದರಲ್ಲಿ ಪಾಲ್ಗೊಳ್ಳುವ ರಾಷ್ಟ್ರಗಳು ಜಾಗತಿಕ ಮಟ್ಟದಲ್ಲಿ ತಮ್ಮದೇ ಆದ ವರ್ಚಸ್ಸನ್ನು ಬೆಳೆಸಿಕೊಳ್ಳಬಹುದು ಮತ್ತು ತಾನೂ ಒಂದು ಸಾರ್ವಭೌಮ ರಾಷ್ಟ್ರವೆಂದು ಪ್ರತಿನಿಧಿಸಿಕೊಳ್ಳುವಲ್ಲಿ ಸಫಲವಾಗಬಹುದು.

**೫. ವಿದೇಶಾಂಗ ನೀತಿಯ ಅರಿವು**

ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ವಿಶ್ವದ ಅನೇಕ ರಾಷ್ಟ್ರಗಳು ಭಾಗವಹಿಸುವುದರಿಂದ ಆಯಾ ರಾಷ್ಟ್ರಗಳ ವಿದೇಶಾಂಗ ನೀತಿಯ ಮಹತ್ವ ಬೇರೆಲ್ಲಾ ರಾಷ್ಟ್ರಗಳಿಗೂ ತಿಳಿಯುತ್ತದೆ. ಆಗ ಯಾವುದೇ ಒಂದು ರಾಷ್ಟ್ರವು ಬೇರೆ ರಾಷ್ಟ್ರಗಳೊಂದಿಗೆ ವ್ಯವಹರಿಸುವಾಗ ಯಾವ ರೀತಿಯ ನೀತಿಯನ್ನು ಅನುಸರಿಸಬೇಕು ಎಂದು ಮೊದಲೇ ನಿರ್ಧರಿಸಬಹುದು. ಇದರಿಂದ ರಾಷ್ಟ್ರ-ರಾಷ್ಟ್ರಗಳ ಸಂಬಂಧಗಳು ಬಲಯುತವಾಗುತ್ತವೆ.

**೬. ಶಕ್ತಿಸಮತೋಲನ ಮತ್ತು ನಿಶ್ಯಸ್ತ್ರೀಕರಣ**

ಆಧುನಿಕ ಯುಗದಲ್ಲಿ ಎಲ್ಲಾ ರಾಷ್ಟ್ರಗಳು ಯುದ್ಧಕ್ಕಿಂತ ಶಾಂತಿಯನ್ನು ಹೆಚ್ಚಾಗಿ ಬಯಸುತ್ತಿರುವುದರಿಂದ ನಿಶ್ಯಸ್ತ್ರೀಕರಣ ಮತ್ತು ಶಕ್ತಿ ಸಮತೋಲನ ಅಂಶಗಳು ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚಾಗಿ ಮಹತ್ವ ಪಡೆಯುತ್ತವೆ. ಈ ಒಂದು ಕಾರ್ಯ ಅಂತಾರಾಷ್ಟ್ರೀಯ ರಾಜಕಾರಣದಿಂದ ಮಾತ್ರ ಸಾಧ್ಯ.

### ೭. ಕಲೆ ಸಂಸ್ಕೃತಿಯ ವಿನಿಮಯ

ಜಾಗತಿಕ ಮಟ್ಟದಲ್ಲಿ ರಾಷ್ಟ್ರಗಳು ಪರಸ್ಪರ ಸಹಕಾರಯುತ ಮೈತ್ರಿಸಂಬಂಧ ಹೊಂದಲು ಬಯಸುವುದರಿಂದ ಇಲ್ಲಿ ಕಲೆ, ಸಾಹಿತ್ಯ, ಸಂಸ್ಕೃತಿಗಳು ರಾಷ್ಟ್ರದಿಂದ ರಾಷ್ಟ್ರಕ್ಕೆ ವಿನಿಮಯ ವಾಗುತ್ತವೆ. ಇಲ್ಲಿ ವಿನಿಮಯ ಪದವು ಪ್ರಭಾವ ಬೀರುವುದು ಅಥವಾ ಅನುಸರಿಸುವುದು ಎಂಬ ಪದಕ್ಕೆ ಸಮನಾರ್ಥವಾಗಿರುತ್ತದೆ.

### ೮. ವಿದೇಶಿ ನೆರವು

ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ರಾಷ್ಟ್ರಗಳು ಪರಸ್ಪರ ಮುಖಾಮುಖಿ ಸಂಬಂಧ ಹೊಂದುವುದರಿಂದ ಯಾವುದೇ ರಾಷ್ಟ್ರವು ಯಾವುದೇ ಸಮಸ್ಯೆಯಲ್ಲಿ ಸಿಲುಕಿದಾಗ ವಿದೇಶಿ ರಾಷ್ಟ್ರಗಳು ನೆರವಿಗೆ ಬರುತ್ತವೆ. ಈ ರೀತಿಯ ಒಂದು ಸಹಕಾರ ಮನೋಭಾವನೆ ಮಾನವನ ಮೂಲಭೂತ ಸ್ವಭಾವಗಳಲ್ಲಿ ಒಂದಾಗಿದೆ.

### ೯. ಅಂತಾರಾಷ್ಟ್ರೀಯ ಸಂಸ್ಥೆಗಳು

ಅಂತಾರಾಷ್ಟ್ರೀಯ ರಾಜಕಾರಣದಿಂದಾಗಿ ಎಲ್ಲಾ ರಾಷ್ಟ್ರಗಳಿಗೂ ಅಂತಾರಾಷ್ಟ್ರೀಯ ಸಂಘಟನೆಗಳ ಒಡಂಬಡಿಕೆ, ಅವುಗಳು ಅನುಸರಿಸುತ್ತಿರುವ ನೀತಿಗಳು, ಧೋರಣೆಗಳು ಮನವರಿಕೆಯಾಗುತ್ತವೆ.

### ೧೦. ವಿಶಾಲ ಮನೋಭಾವನೆ

ಅಂತಾರಾಷ್ಟ್ರೀಯ ರಾಜಕಾರಣದಿಂದಾಗಿ ವ್ಯಕ್ತಿಗಳ ಮತ್ತು ರಾಷ್ಟ್ರಗಳ ಸಂಕುಚಿತ ಮನೋಭಾವ ಇಂಗಿತವಾಗಿ ವಿಶಾಲ ದೃಷ್ಟಿಕೋನ ಪಸರಿಸುತ್ತದೆ. ಇದರಿಂದಾಗಿ ಅಂತಾ ರಾಷ್ಟ್ರೀಯ ಸಹಕಾರ, ಮೈತ್ರಿಯುತ ಸಂಬಂಧ, ಶಾಂತಿ, ಸಹಬಾಳ್ವೆಗಳು ಅಭಿವೃದ್ಧಿಯಾಗುತ್ತವೆ ಮತ್ತು ರಾಷ್ಟ್ರಗಳ ಸ್ವಾರ್ಥ ಮನೋಭಾವನೆ ಕಡಿಮೆಯಾಗುತ್ತದೆ ಹಾಗೂ ಎಲ್ಲಾ ರಾಷ್ಟ್ರದ ಪ್ರಜೆಗಳ ಬಗ್ಗೆ ಆಸಕ್ತಿ ಮತ್ತು ಕಾಳಜಿ ಬೆಳೆಯುತ್ತದೆ.

### ೯.೨ ಇಂದಿನ ವಿಶ್ವಸಂಸ್ಥೆ

ದ್ವಿತೀಯ ಜಾಗತಿಕ ಯುದ್ಧದ ನಂತರ ರಾಷ್ಟ್ರಗಳ ಸಂಘವು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡು ಶಕ್ತಿಹೀನವಾಯಿತು. ಹೀಗೆ ರಾಷ್ಟ್ರಗಳ ಸಂಬಂಧವು ತನ್ನ ಪ್ರಾಮುಖ್ಯತೆಯನ್ನು ಪರಿಣಾಮಕಾರಿಯಾಗಿ ರಾಷ್ಟ್ರಗಳ ಮಧ್ಯೆ ಜಾಗತಿಕ ಮಟ್ಟದಲ್ಲಿ ಶಾಂತಿ ಮತ್ತು ಸಹಕಾರಗಳನ್ನು ಏರ್ಪಡಿಸಲು ೧೯೪೫ರಲ್ಲಿ ವಿಶ್ವಸಂಸ್ಥೆಯು ಅಸ್ತಿತ್ವಕ್ಕೆ ಬಂದಿತು ಮತ್ತು ವಿಶ್ವಶಾಂತಿಯನ್ನು ಕಾಪಾಡುವಲ್ಲಿ ಮತ್ತು ಮಹಾಯುದ್ಧಗಳನ್ನು ತಡೆಗಟ್ಟುವಲ್ಲಿ ಸಂಪೂರ್ಣವಾಗಿ ವಿಫಲವಾಗದೆ ವಿಶ್ವಸಂಸ್ಥೆಯಲ್ಲಿ ಇತ್ತೀಚಿನ ವರದಿಯ ಪ್ರಕಾರ ಸುಮಾರು ೧೯೦ ರಾಷ್ಟ್ರಗಳು ಸದಸ್ಯತ್ವವನ್ನು ಪಡೆದಿವೆ. ಇದರಿಂದ ತಿಳಿಯುವ ಅಂಶವೆಂದರೆ ವಿಶ್ವದ ಸಮಸ್ತ ರಾಷ್ಟ್ರಗಳು ವಿಶ್ವಸಂಸ್ಥೆಯ ಅಸ್ತಿತ್ವಕ್ಕೆ ತಮ್ಮ ಬೆಂಬಲವನ್ನು ನೀಡುತ್ತಿವೆ. ವಿಶ್ವಸಂಸ್ಥೆಯು ಕೆಲವೊಂದು ಪ್ರಾಬಲ್ಯವನ್ನು ಕೆಲವೊಂದು ಕ್ಷೇತ್ರಗಳಲ್ಲಿ ಸಾಧಿಸಿದೆ. ಹಾಗೆಯೇ ಹಲವಾರು ರಂಗಗಳಲ್ಲಿ ದುರ್ಬಲ

ವಾಗಿಯೂ ಇದೆ. ಹೀಗೆ ಇಂದಿನ ವಿಶ್ವಸಂಸ್ಥೆಯ ಸ್ವರೂಪವನ್ನು ಅದರ ಗುಣ ಮತ್ತು ದೌರ್ಬಲ್ಯಗಳನ್ನು ವಿಶ್ಲೇಷಿಸುವ ಮೂಲಕ ಅರ್ಥಮಾಡಿಕೊಳ್ಳಬಹುದು.

### ಅ. ವಿಶ್ವ ಸಂಸ್ಥೆಯ ಗುಣಗಳು

### ೧. ವಿಶ್ವಶಾಂತಿ ಮತ್ತು ಸಹಕಾರ

ವಿಶ್ವಸಂಸ್ಥೆಯು ಅಸ್ತಿತ್ವಕ್ಕೆ ಬಂದ ತರುವಾಯ ಮಹಾಯುದ್ಧ ತಡೆಯುವಲ್ಲಿ ಸಫಲ ವಾಗಿದೆ ಮತ್ತು ರಾಷ್ಟ್ರ-ರಾಷ್ಟ್ರಗಳ ನಡುವೆ ಏರ್ಪಡುವ ಸಮಸ್ಯೆಗಳನ್ನು ಬಗೆಹರಿಸುವಲ್ಲಿಯೂ ಸಹ ಸಫಲವಾಗುತ್ತದೆ. ಜಾಗತಿಕ ಮಟ್ಟದಲ್ಲಿ ಒಂದು ಬಲಯುತ ಸಂಘಟನೆಯಾಗಿ ರಾಷ್ಟ್ರಗಳ ಮಧ್ಯೆ ಸಹಕಾರ ಸಂಬಂಧಗಳನ್ನು ಬೆಳೆಸುವಲ್ಲಿ ಅಗ್ರಗಣ್ಯ ಪಾತ್ರವಹಿಸುತ್ತದೆ.

### ೨. ದುರ್ಬಲ ರಾಷ್ಟ್ರಗಳಿಗೆ ರಕ್ಷಣೆ

ವಿಶ್ವಸಂಸ್ಥೆಯು ಕೇವಲ ಪ್ರಬಲ ರಾಷ್ಟ್ರಗಳೊಂದಿಗೆ ಮಾತ್ರ ಮೈತ್ರಿಯುತ ಸಂಬಂಧವನ್ನು ಏರ್ಪಡಿಸಲು ಪ್ರಯತ್ನಿಸದೆ, ದುರ್ಬಲ ರಾಷ್ಟ್ರಗಳಿಗೂ ರಕ್ಷಣೆ ಒದಗಿಸುವ ಕಾರ್ಯವನ್ನು ಮಾಡಿದೆ ಮತ್ತು ಪ್ರಬಲ ರಾಷ್ಟ್ರಗಳಿಂದ ಅಂತರಾಷ್ಟ್ರಗಳಿಗೆ ವಿಪತ್ತು ಒದಗಿ ಬಂದರೆ ಅದನ್ನು ತಪ್ಪಿಸಲು ಮುಂದಾಳತ್ವವನ್ನು ವಹಿಸುತ್ತದೆ.

ಕೊರಿಯಾ ವಿವಾದ ಉಂಟಾದಾಗ ವಿಶ್ವಸಂಸ್ಥೆಯು ಮಿಲಿಟರಿ ಕ್ರಮವನ್ನು ಕೈಗೊಂಡು ಯಶಸ್ವಿಯಾಯಿತು. ಹೀಗೆ ಹಲವಾರು ಸಂದರ್ಭಗಳಲ್ಲಿ ಪ್ರಬಲ ರಾಷ್ಟ್ರಗಳು ವಿಶ್ವಸಂಸ್ಥೆಯ ಸೂಚನೆಗೆ ಸಮ್ಮತಿಸದಿದ್ದರೆ, ದುರ್ಬಲ ರಾಷ್ಟ್ರಗಳ ರಕ್ಷಣೆಗೆ ಯಾವುದಾದರೂ ವಿಧಾನವನ್ನು ಅನುಸರಿಸಿ ಅವುಗಳಿಗೆ ರಕ್ಷಣೆ ನೀಡುತ್ತದೆ.

### ೩. ನಿಶ್ಯಸ್ತ್ರೀಕರಣ

ವಿಶ್ವಸಂಸ್ಥೆಯು ಜಾಗತಿಕ ಮಟ್ಟದಲ್ಲಿ ರಾಷ್ಟ್ರಗಳ ಮಧ್ಯೆ ಶಾಂತಿ-ಸಹಬಾಳ್ವೆ-ಭ್ರಾತೃತ್ವ ಏರ್ಪಡಿಸುವ ಉದ್ದೇಶದಿಂದ ಶಾಸ್ತ್ರಾಸ್ತ್ರ ನಿಯಂತ್ರಣಕ್ಕೆ ಹೆಚ್ಚಿನ ಒತ್ತನ್ನು ನೀಡುತ್ತಿದೆ ಮತ್ತು ಅದರಲ್ಲಿ ಸಫಲವೂ ಆಗುತ್ತಿದೆ. ಎನ್.ಪಿ.ಟಿ., ಸಿ.ಟಿ.ಬಿ.ಟಿ., ಮುಂತಾದ ನಿಶ್ಯಸ್ತ್ರೀಕರಣದ ನಿಯಮಾವಳಿಗಳನ್ನು ಜಾರಿಗೆ ತಂದಿದೆ ಮತ್ತು ನಿಶ್ಯಸ್ತ್ರೀಕರಣಕ್ಕೆ ಒಪ್ಪದ ರಾಷ್ಟ್ರಗಳ ಮೇಲೆ ಕಠಿಣ ಕ್ರಮಕೈಗೊಳ್ಳುತ್ತದೆ. ಆ ಕಾರಣದಿಂದಾಗಿಯೇ ಸದ್ದಾಂ ಹುಸೇನ್‌ರವರನ್ನು ಬಂಧಿಸಲಾಯಿತು. ಇದು ಕೇವಲ ಒಂದು ದೃಷ್ಟಿಕೋನದಿಂದ ಶಸ್ತ್ರಾಸ್ತ್ರ ಸಂಗ್ರಹಣೆಯ ವಿರುದ್ಧ ನಡೆಸಿದ ದಾಳಿಯಾಗಿದೆ. ಬೇರೆ ದೃಷ್ಟಿಕೋನದಲ್ಲಿ ಇದನ್ನು ಗಮನಿಸಿದರೆ ವಿವಿಧ ರಾಷ್ಟ್ರಗಳ ಸ್ವಾರ್ಥ ಮತ್ತು ಇರಾಕ್ ಮೇಲಿನ ಭಯವೂ ಅಡಗಿದೆ.

### ೪.ಸಮಸ್ಯೆ-ಬಿಕ್ಕಟ್ಟುಗಳ ಪರಿಹಾರ

ವಿಶ್ವಸಂಸ್ಥೆಯು ರಾಜಕೀಯ ರಂಗದಲ್ಲಿ ಹಲವಾರು ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಭಾಗಶಃ ಸಫಲವಾಗಿದೆ ಎಂದರೆ ತಪ್ಪಾಗಲಾರದು ಮತ್ತು ವಿಶ್ವಸಂಸ್ಥೆಯು ರಾಷ್ಟ್ರಗಳ ನಡುವೆ ಏರ್ಪಟ್ಟಿದ್ದ ಸಮಸ್ಯೆಗಳನ್ನು ಬಗೆಹರಿಸಿದೆ ಅಂತಹ ಪರಿಹಾರಗೊಂಡ ಸಮಸ್ಯೆಗಳೆಂದರೆ:

ಕೊರಿಯಾ ವಿವಾದಕ್ಕೆ ಸಂಬಂಧಿಸಿದಂತೆ ವಿಶ್ವಸಂಸ್ಥೆ ಮೊದಲ ಬಾರಿಗೆ ಮಿಲಿಟರಿ ಕ್ರಮಕೈಗೊಂಡು ಸಮಸ್ಯೆಯನ್ನು ಇತ್ಯರ್ಥಗೊಳಿಸುವಲ್ಲಿ ವಿಫಲವಾಯಿತು ಮತ್ತು ಶಾಂತಿಗಾಗಿ ಏಕತೆ ಎಂಬ ಮಸೂದೆಯನ್ನು ಈ ಒಂದು ಸಂದರ್ಭದಲ್ಲಿ ಜಾರಿಗೆ ತಂದಿತು.

೧೯೫೬ರಲ್ಲಿ ಸೂಯೆಜ್ ಬಿಕ್ಕಟ್ಟಿನ ಸಂದರ್ಭದಲ್ಲಿಯೂ ಈಜಿಪ್ಟ್ ಮೇಲೆ ದಾಳಿ ನಡೆಸಿದ ಫ್ರಾನ್ಸ್, ಇಂಗ್ಲೆಂಡ್, ಇಸ್ರೇಲ್ ರಾಷ್ಟ್ರಗಳಿಗೆ ಗಂಭೀರವಾದ ಎಚ್ಚರಿಕೆಯನ್ನು ನೀಡಿ ಯುದ್ಧವನ್ನು ತಡೆಯುವಲ್ಲಿ ಸಫಲವಾಯಿತು.

೧೯೫೬ರಲ್ಲಿಯೇ ಹಂಗೇರಿ ಮತ್ತು ಪೋಲೆಂಡ್‌ನಲ್ಲಿ ಉದ್ಭವಿಸಿದ ಬಿಕ್ಕಟ್ಟನ್ನು ಪರಿಹರಿಸುವುದರಲ್ಲಿಯೂ ಯಶಸ್ವಿಯಾಗದೆ ಅವುಗಳಿಗೆ ರಕ್ಷಣೆ ನೀಡುವಲ್ಲಿ ಭಾಗಶಃ ಸಫಲವಾಯಿತು.

**೫. ನ್ಯಾಯದ ತೀರ್ಮಾನ**

ವಿಶ್ವಸಂಸ್ಥೆಯ ಗುಣಗಳಲ್ಲಿ ಇದೂ ಸಹ ಒಂದಾಗಿದೆ. ರಾಷ್ಟ್ರ-ರಾಷ್ಟ್ರಗಳ ನಡುವೆ ಏರ್ಪಟ್ಟ ಯಾವುದೇ ವಿವಾದಗಳನ್ನು ಅಂತಾರಾಷ್ಟ್ರೀಯ ನ್ಯಾಯಾಲಯದ ಮೂಲಕ ಬಗೆಹರಿಸಲು ಪ್ರಯತ್ನಿಸಿದೆ. ವಿಶ್ವಸಂಸ್ಥೆಯು ಅಂತಾರಾಷ್ಟ್ರೀಯ ನ್ಯಾಯಾಲಯವನ್ನು ನೆದರ್‌ಲ್ಯಾಂಡ್‌ನ ಹೇಗ್‌ನಲ್ಲಿ ಸ್ಥಾಪಿಸಿದೆ. ಈಗಾಗಲೇ ಈ ನ್ಯಾಯಾಲಯವು ಹಲವಾರು ಬಿಕ್ಕಟ್ಟುಗಳನ್ನು ಶಾಂತಿಯುತವಾಗಿ ಪರಿಹರಿಸುವಲ್ಲಿ ಸ್ವಲ್ಪಮಟ್ಟದ ಯಶಸ್ಸನ್ನು ಪಡೆದಿದೆ.

**೬. ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆ**

ವಿಶ್ವಸಂಸ್ಥೆಯು ವಿಶ್ವವ್ಯಾಪಿ ರಾಷ್ಟ್ರಗಳಲ್ಲಿರುವ ಸಾಮಾಜಿಕ, ಆರ್ಥಿಕ ಸಮಸ್ಯೆಗಳನ್ನು ಗುರುತಿಸಿ, ಅವುಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿ ಅಂತಹ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಮತ್ತು ಸಹಾಯ ಹಸ್ತ ನೀಡುವ ಕಾರ್ಯಗಳನ್ನು ಮಾಡುತ್ತದೆ. ಅನಭಿವೃದ್ಧಿ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ಆರ್ಥಿಕ, ಸಾಮಾಜಿಕ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ನೀಡುತ್ತದೆ ಮತ್ತು ಈ ಎಲ್ಲಾ ಕಾರ್ಯಗಳನ್ನು ಆರ್ಥಿಕ, ಸಾಮಾಜಿಕ ಮಂಡಳಿಯ ಮೂಲಕ ಕಾರ್ಯನಿರ್ವಹಿಸುತ್ತದೆ. ಈ ಮಂಡಳಿಯು ಒಂದು ಸಮಿತಿಯನ್ನು ರಚಿಸಿ ಅದರ ಮೂಲಕ ಸಮೀಕ್ಷೆ ಮತ್ತು ಅಭಿವೃದ್ಧಿಕಾರ್ಯಗಳನ್ನು ಮಾಡಿಸುತ್ತದೆ.

**೭. ಮಾನವ ಹಕ್ಕುಗಳು**

ವಿಶ್ವಸಂಸ್ಥೆ ಬೇರೆಲ್ಲಾ ಅಂಶಗಳಲ್ಲಿ ವಿಫಲವಾಗುತ್ತಿದ್ದರೂ ಸಹ ಮಾನವ ಹಕ್ಕುಗಳ ವ್ಯಾಪಕ ಪ್ರಚಾರ ಮತ್ತು ಮಾನವ ಹಕ್ಕುಗಳ ರಕ್ಷಣೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದೆ. ಅದಕ್ಕಾಗಿ ಹಲವಾರು ಒಡಂಬಡಿಕೆ ಮತ್ತು ನಡಾವಳಿಗಳನ್ನು ರಚಿಸಿ ಅದರ ಮೂಲಕ ಮಾನವ ಹಕ್ಕುಗಳ ರಕ್ಷಣೆ ಮಾಡುತ್ತದೆ. ಯಾವ ರಾಷ್ಟ್ರದಲ್ಲಾದರೂ ಮಾನವ ಹಕ್ಕುಗಳ ಉಲ್ಲಂಘನೆಯಾದರೆ ಅಲ್ಲಿ ತ್ವರಿತ ಕಾರ್ಯಗಳನ್ನು ಕೈಗೊಳ್ಳುತ್ತದೆ.

### ೮. ವಸಾಹತುಶಾಹಿಗೆ ಒಳಪಟ್ಟ ರಾಷ್ಟ್ರಗಳ ರಕ್ಷಣೆ

ವಿಶ್ವಸಂಸ್ಥೆಯು ಸಾಮ್ರಾಜ್ಯಶಾಹಿ ಮತ್ತು ವಸಾಹತುನೀತಿಯ ಆಳ್ವಿಕೆಗೆ ಒಳಪಟ್ಟ ರಾಷ್ಟ್ರಗಳ ರಕ್ಷಣೆ ಮತ್ತು ಅಭಿವೃದ್ಧಿಯನ್ನು ಮಾಡುತ್ತಿದೆ. ಧರ್ಮದರ್ಶಿ ಮಂಡಳಿಯು ಕಾರ್ಯಭಾರದ ಹೊಣೆಯನ್ನು ಹೊತ್ತುಕೊಂಡಿದೆ. ಇಂಡೋನೇಷಿಯಾದ ಮೇಲೆ ಡಚ್ ಸರ್ಕಾರವು ಅಧಿಕಾರವನ್ನು ಪುನರ್ ಸ್ಥಾಪಿಸಲು ಪ್ರಯತ್ನಿಸಿದಾಗ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯು ಇದಕ್ಕೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿದಾಗ ಡಚ್ ಸರ್ಕಾರ ಹಿಂದಕ್ಕೆ ಸರಿಯಿತು. ಈ ಒಂದು ವಿಮೋಚನೆಯಲ್ಲಿ ಭಾರತದ ಪಾತ್ರವನ್ನು ಶ್ಲಾಘಿಸಲೇ ಬೇಕು.

### ೯. ವಿಶ್ವದ ಜನತೆಯ ಆರೋಗ್ಯದ ರಕ್ಷಣೆ

ವಿಶ್ವಸಂಸ್ಥೆಯು ಕೇವಲ ರಾಜಕೀಯ, ಆರ್ಥಿಕ ರಕ್ಷಣೆ ಮತ್ತು ಅಭಿವೃದ್ಧಿಯ ಕಾರ್ಯಗಳನ್ನು ಮಾತ್ರಮಾಡದೆ, ವಿಶ್ವದ ಸಮಸ್ತ ಜನತೆಯ ಆರೋಗ್ಯವನ್ನು ಕಾಪಾಡುವ ಹಿತದೃಷ್ಟಿಯಿಂದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತದೆ. ಈ ಕಾರ್ಯಗಳನ್ನು ವಿಶ್ವ ಆರೋಗ್ಯಸಂಸ್ಥೆ ಮೂಲಕ ಮಾಡುತ್ತದೆ. ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ಮುಂಜಾಗ್ರತ ಕ್ರಮ, ಭೀಕರ ರೋಗಗಳ ಬಗ್ಗೆ ಮತ್ತು ಅದನ್ನು ತಡೆಯುವ ಮಾರ್ಗದ ಬಗ್ಗೆ ವ್ಯಾಪಕ ಪ್ರಚಾರವನ್ನು ಮಾಡುತ್ತದೆ ಮತ್ತು ಜನರಲ್ಲಿ ಉತ್ತಮ ಆರೋಗ್ಯದ ಬಗ್ಗೆ ತಿಳುವಳಿಕೆ ಬರುವಂತೆ ಮಾಡುತ್ತದೆ.

### ೧೦. ತುರ್ತು ಪರಿಸ್ಥಿತಿ

ವಿಶ್ವಸಂಸ್ಥೆಯು ಒಂದು ನಿಷ್ಕ್ರಿಯ ವಸ್ತುವಾಗಿರದೆ ಕ್ರಿಯಾಶೀಲ ಜೀವಂತ ವಸ್ತುವಿನಂತಿದೆ. ಬರಗಾಲ, ಪ್ರಕೃತಿ ವಿಕೋಪಗಳು ಒದಗಿ ಬಂದಂತಹ ಸಂದರ್ಭದಲ್ಲಿ ವಿಶ್ವಸಂಸ್ಥೆ ಸಕಾಲಕ್ಕೆ ಬೇಕಾಗುವಂತಹ ಅಥವಾ ಅವಶ್ಯಕತೆಯಿರುವ ವಸ್ತುಗಳ ರವಾನೆ ಮಾಡುತ್ತದೆ ಮತ್ತು ಅಂತಹ ಸಂದರ್ಭದಲ್ಲಿ ಜೀವಹಾನಿಯಾಗದಂತೆ ಜನರ ಜೀವವನ್ನು ರಕ್ಷಿಸುವ ಕಾರ್ಯವನ್ನು ಮಾಡುತ್ತದೆ. ಆದ್ದರಿಂದ ವಿಶ್ವಸಂಸ್ಥೆ ಇಂತಹ ಮಾನವೀಯ ಮೌಲ್ಯಗಳನ್ನು ಹೊಂದಿದೆ ಎಂದರೆ ತಪ್ಪಾಗಲಾರದು.

### ಆ. ವಿಶ್ವ ಸಂಸ್ಥೆಯ ದೌರ್ಬಲ್ಯಗಳು

ವಿಶ್ವಸಂಸ್ಥೆಯು ಹಲವಾರು ಕ್ಷೇತ್ರಗಳಲ್ಲಿ ಸಾಧನೆಗೈದಿದ್ದರೂ ಸಹ ಅದು ಹಲವಾರು ದೌರ್ಬಲ್ಯಗಳಿಂದ ಮುಕ್ತವಾಗಿಲ್ಲದ ಕಾರಣ ಅದು ಕೆಲವೊಂದು ಕ್ಷೇತ್ರಗಳಲ್ಲಿ ತನ್ನದೇ ಆದ ಮಿತಿಗಳಿಂದಾಗಿ ಕಾರ್ಯಕ್ಷೇತ್ರದ ವ್ಯಾಪ್ತಿ ಸಂಕುಚಿತವಾಗಿದೆ. ವಿಶ್ವಸಂಸ್ಥೆ ಹಲವಾರು ದೋಷಗಳನ್ನು ಹೊಂದಿದೆ. ಅವುಗಳೆಂದರೆ:

### ೧. ಬಲಿಷ್ಠರಾಷ್ಟ್ರಗಳ ಒಡನಾಟ

ವಿಶ್ವಸಂಸ್ಥೆಯು ಹೊದಿರುವ ಪ್ರಮುಖ ದೋಷವೆಂದರೆ ಅದು ಸಂಪೂರ್ಣವಾಗಿ ಬಲಿಷ್ಠ ರಾಷ್ಟ್ರಗಳ ಹಿಡಿತಕ್ಕೊಳಪಟ್ಟಿದೆ. ಅದು ಅನಿವಾರ್ಯವೂ ಆಗಿದೆ. ಆ ಕಾರಣ ವಿಶ್ವಸಂಸ್ಥೆಯ

ನಿರ್ವಹಣೆಗಾಗಿ ಅಮೇರಿಕಾ ರಾಷ್ಟ್ರವು ವಾರ್ಷಿಕವಾಗಿ ೧೩೦ ಕೋಟಿ ರೂಪಾಯಿಗಳನ್ನು ನೀಡುತ್ತಿದೆ. ಅಂತೆಯೇ ಉಳಿದ ಭದ್ರತಾ ಮಂಡಳಿಯ ಖಾಯಂ ಸದಸ್ಯರಾಷ್ಟ್ರಗಳು ಅಧಿಕ ಹಣವನ್ನು ನೀಡುತ್ತಿವೆ. ಆದ್ದರಿಂದ ವಿಶ್ವಸಂಸ್ಥೆಯು ಬಲಿಷ್ಟ ರಾಷ್ಟ್ರಗಳ ಕೈಗೊಂಬೆಯಂತೆ ನರ್ತಿಸುತ್ತಿದೆ.

### ೨. ದಬ್ಬಾಳಿಕೆ

ವಿಶ್ವಸಂಸ್ಥೆಯು ಶಕ್ತಿಶಾಲಿರಾಷ್ಟ್ರಗಳ ಕೈಗೊಂಬೆಯಾಗಿರುವುದರಿಂದ ಅವುಗಳಿಗೆ ತಕ್ಕಂತೆ ಮತ್ತು ಅವರಿಗೆ ಪೂರಕವಾಗುವ ಶಾಸನಗಳನ್ನು ಮತ್ತು ನಿಯಮಾವಳಿಗಳನ್ನು ರಚಿಸುತ್ತಿದೆ. ಈ ಮೂಲಕ ಅನಭಿವೃದ್ಧಿ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಈ ರಾಷ್ಟ್ರಗಳು ದಬ್ಬಾಳಿಕೆ ನಡೆಸುತ್ತವೆ ಮತ್ತು ಅದರಿಂದ ಅನೇಕ ಉಪಯೋಗಗಳನ್ನು ಪಡೆಯುತ್ತವೆ.

### ೩. ಯುದ್ಧಗಳನ್ನು ತಡೆಗಟ್ಟುವಲ್ಲಿ ವಿಫಲ

ವಿಶ್ವಶಾಂತಿಯನ್ನು ಕಾಪಾಡುವ ಉದ್ದೇಶದಿಂದ ಸ್ಥಾಪಿತವಾದಂತಹ ವಿಶ್ವಸಂಸ್ಥೆಯ ಮುಖ್ಯ ಉದ್ದೇಶವೇ ಯುದ್ಧಗಳನ್ನು ತಡೆಗಟ್ಟುವುದಾಗಿದೆ. ಆದರೆ ವಿಶ್ವಸಂಸ್ಥೆಯು ಚೀನಾ ಆಕ್ರಮಣ, ಪಾಕಿಸ್ತಾನದ ಆಕ್ರಮಣ ಹಾಗೂ ಇರಾಕ್‌ನ ದಾಳಿ, ಅಮೇರಿಕಾದ ದಾಳಿಯನ್ನು ತಡೆಯುವಲ್ಲಿ ವಿಫಲವಾಗಿರುವುದು ಪ್ರತ್ಯಕ್ಷ ನಿದರ್ಶನವಾಗಿದೆ. ಇನ್ನು ಮುಂದೆ ಈ ವಿಶ್ವಸಂಸ್ಥೆಯು ಯಾವ ರೀತಿ ವಿಶ್ವಶಾಂತಿ ಕಾಪಾಡುತ್ತದೆ ಎಂಬುದು ಪ್ರಶ್ನಾರ್ಹವಾಗಿದೆ.

### ೪. ಸಮಸ್ಯೆಗಳನ್ನು ಬಗೆಹರಿಸುವಲ್ಲಿ ವಿಫಲತೆ

ವಿಶ್ವಸಂಸ್ಥೆ ರಾಷ್ಟ್ರ-ರಾಷ್ಟ್ರಗಳ ಮಧ್ಯೆ ಸ್ನೇಹಯುತ ಸಹಕಾರ ಸಂಬಂಧಗಳನ್ನು ಏರ್ಪಡಿಸುವ ಉದ್ದೇಶವನ್ನು ಹೊಂದಿದೆ. ಆದರೆ ಆ ಕ್ಷೇತ್ರದಲ್ಲೂ ಅದು ವಿಫಲವಾಗಿದೆ. ಕಾರಣ ಬಲಿಷ್ಠ ರಾಷ್ಟ್ರಗಳು ಯಾವ ರಾಷ್ಟ್ರಕ್ಕೆ ಸಹಕಾರ, ಸಮ್ಮತಿ ಸೂಚಿಸುತ್ತವೆಯೋ ಆ ರಾಷ್ಟ್ರ ದ ಪರವಾಗಿ ವಿಶ್ವಸಂಸ್ಥೆ ನಿಲ್ಲಬೇಕಾಗುತ್ತದೆ ಮತ್ತು ರಾಷ್ಟ್ರಗಳು ಸಹ ವಿಶ್ವಸಂಸ್ಥೆಗೆ ಅಷ್ಟಾಗಿ ಗೌರವವನ್ನು ನೀಡುವುದಿಲ್ಲ.

೧೯೫೬ರಲ್ಲಿ ಹಂಗೇರಿ ಮತ್ತು ಪೋಲೆಂಡ್‌ನಲ್ಲಿ ಉದ್ಭವಿಸಿದ ಬಿಕ್ಕಟ್ಟನ್ನು ಬಗೆಹರಿಸುವಲ್ಲಿ ವಿಶ್ವಸಂಸ್ಥೆಯು ವಿಫಲವಾಯಿತು.

ಭಾರತ ಮತ್ತು ಪಾಕಿಸ್ತಾನದ ನಡುವೆ ಏರ್ಪಟ್ಟಿರುವ ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸುವಲ್ಲಿ ಇಲ್ಲಿಯವರೆಗೂ ಸಹ ಸಫಲವಾಗಿಲ್ಲ.

### ೫. ಅವಲಂಬನೆ

ವಿಶ್ವಸಂಸ್ಥೆಯು ಎಲ್ಲಾ ಅಂಶಗಳಲ್ಲಿಯೂ ಬಲಿಷ್ಠ ರಾಷ್ಟ್ರಗಳ ಮೇಲೆ ಅವಲಂಬಿತ ವಾಗಿದೆ. ವಿಶ್ವಸಂಸ್ಥೆಯು ವಿಪತ್ತಿನ ಸಂದರ್ಭದಲ್ಲಿ ದುರ್ಬಲ ರಾಷ್ಟ್ರಗಳಿಗೆ ಸಹಾಯ ಮಾಡಲು ತನ್ನದೇ ಆದ ಸ್ವ-ಸೇವೆಯನ್ನು ಸಹ ಹೊಂದಿಲ್ಲ. ಅದನ್ನೂ ಸಹ ಬೃಹತ್ ಬಲಿಷ್ಟ ರಾಷ್ಟ್ರ ಗಳಿಂದಲೇ ಪಡೆಯುತ್ತದೆ. ಆದ್ದರಿಂದ ತುರ್ತು ಸಂದರ್ಭದಲ್ಲಿ ರಾಷ್ಟ್ರಗಳಿಗೆ ತತ್‌ಕ್ಷಣದ ಸಹಾಯ ಮಾಡಲು ಸಾಧ್ಯವಾಗಿಲ್ಲ.

### ೭. ಸದಸ್ಯತ್ವದ ಸಾರ್ವತ್ರಿಕತೆಯ ಲೋಪ

ವಿಶ್ವಸಂಸ್ಥೆಯ ಸದಸ್ಯತ್ವವು ಸಾರ್ವತ್ರಿಕ ತತ್ವಗಳಿಗೆ ವಿರೋಧವಾಗಿದೆ. ಯಾವ ರಾಷ್ಟ್ರಗಳಿಗೆ ಸದಸ್ಯತ್ವ ನೀಡಬೇಕು, ಯಾವ ರಾಷ್ಟ್ರಗಳ ಸದಸ್ಯತ್ವವನ್ನು ತೆಗೆದುಹಾಕಬೇಕೆಂದು ಭದ್ರತಾ ಮಂಡಳಿಯೇ ನಿರ್ಧರಿಸುತ್ತದೆ. ಅಂದರೆ ಪುನಃ ಇಲ್ಲಿ ಬಲಿಷ್ಠ ರಾಷ್ಟ್ರಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ವಿಶ್ವಸಂಸ್ಥೆಯು ಮಹಾಯುದ್ಧಗಳಲ್ಲಿ ವಿಜಯ ಸಾಧಿಸಸಿದ ರಾಷ್ಟ್ರಗಳ ಸಂಘಟನೆ ಮತ್ತು ಆ ರಾಷ್ಟ್ರಗಳ ತಾಳಕ್ಕೆ ನರ್ತಿಸುವ ನೃತ್ಯಗಾರ ಎಂದರೆ ತಪ್ಪಾಗಲಾರದು.

### ೭. ವಿಟೋ ಅಧಿಕಾರ

ವಿಶ್ವಸಂಸ್ಥೆಯು ವಿಟೋ ಅಧಿಕಾರವನ್ನು ಕೆಲವೇ ರಾಷ್ಟ್ರಗಳಿಗೆ ನೀಡಿರುವುದು ಮುಖ್ಯ ದೌರ್ಬಲ್ಯವಾಗಿದೆ. ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ತೀರ್ಮಾನ ತೆಗೆದುಕೊಳ್ಳುವಾಗ ನಾಲ್ಕು ರಾಷ್ಟ್ರಗಳು ಸಮ್ಮತಿಸಿದರೂ ಒಂದು ರಾಷ್ಟ್ರ ನಕಾರಾತ್ಮಕ ವಿಟೋ ಪ್ರಯೋಗಿಸಿದರೆ ಆ ನಿಯಮಗಳು ಜಾರಿಗೆ ಬರುವುದಿಲ್ಲ ಹಾಗೂ ಇದರಿಂದ ಅಭಿವೃದ್ಧಿ ಕಾರ್ಯಗಳನ್ನು ಅಪೇಕ್ಷಿಸುವುದು ಮತ್ತು ರಕ್ಷಣೆಯನ್ನು ನಿರೀಕ್ಷಿಸುವುದು ವ್ಯರ್ಥವೆನಿಸುತ್ತದೆ. ಈ ವಿಟೋ ಅಧಿಕಾರವೇ ವಿಶ್ವಸಂಸ್ಥೆಯನ್ನು ದುರ್ಬಲ ಸಂಸ್ಥೆಯನ್ನಾಗಿ ಮಾಡುತ್ತಿದೆ.

### ೮. ಶೀತಲ ಸಮರವನ್ನು ತಡೆಗಟ್ಟುವಲ್ಲಿ ವಿಫಲ

ವಿಶ್ವಸಂಸ್ಥೆಯ ದೌರ್ಬಲ್ಯವನ್ನು ಎತ್ತಿಹಿಡಿಯುವ ಮತ್ತೊಂದು ಅಂಶವೆಂದರೆ ಪ್ರಬಲ ಬಣಗಳ ನಡುವೆ ಇದ್ದ ಶೀತಲ ಸಮರವನ್ನು ತಡೆಯುವಲ್ಲಿ ೪೦ ವರ್ಷ ಕಳೆದರೂ ಸಾಧ್ಯವಾಗದಿರುವುದು. ಆದರೆ ರಾಷ್ಟ್ರದಲ್ಲಿ ತಲೆದೋರಿದ ಆಂತರಿಕ ಸಮಸ್ಯೆಗಳಿಂದಾಗಿ ಶೀತಲಸಮರ ಅಂತ್ಯಗೊಂಡಿತು. ವೀಟೋ ಅಧಿಕಾರ ಹೊಂದಿರುವ ಭದ್ರತಾ ಮಂಡಳಿಯ ಖಾಯಂ ಸದಸ್ಯ ರಾಷ್ಟ್ರಗಳೇ ವಿಶ್ವಸಂಸ್ಥೆಯ ನಿಯಮಗಳನ್ನು ಪಾಲಿಸಲು ಹಿಂಜರಿಯುವಾಗ ಸಾಮಾನ್ಯ ಸದಸ್ಯ ರಾಷ್ಟ್ರಗಳು ಹೇಗೆ ವರ್ತಿಸುತ್ತವೆ ಮತ್ತು ವಿಶ್ವಸಂಸ್ಥೆಗೆ ಹೇಗೆ ಗೌರವ ನೀಡುತ್ತವೆ ಎಂಬುದು ಪ್ರಶ್ನಾತೀತವಾಗಿದೆ.

### ೯. ಮನ್ನಣೆ ದೊರಕದ ಶಾಸನಗಳು

ವಿಶ್ವಸಂಸ್ಥೆಯ ದೋಷಗಳಲ್ಲಿ ಇದೂ ಸಹ ಒಂದಾಗಿದೆ. ವಿಶ್ವಸಂಸ್ಥೆಯ ಸಾಮಾನ್ಯ ಸಭೆಯಲ್ಲಿ ಹಲವಾರು ಶಾಸನಗಳನ್ನು ರಚಿಸಲಾಗುತ್ತದೆ ಮತ್ತು ಸದಸ್ಯ ರಾಷ್ಟ್ರಗಳು ಅದನ್ನು ಪರಿಪಾಲಿಸಬೇಕು ಎಂಬ ನಿಯಮವನ್ನು ಮಾಡುತ್ತದೆ. ಆದರೆ ಆ ಶಾಸನಗಳ ಬಗ್ಗೆ ಯಾವ ರಾಷ್ಟ್ರಗಳು ಸಹಮತ ವ್ಯಕ್ತಪಡಿಸುವುದಿಲ್ಲ ಮತ್ತು ಅದನ್ನು ಪಾಲಿಸುವುದೂ ಇಲ್ಲ. ಆದ್ದರಿಂದ ವಿಶ್ವಸಂಸ್ಥೆಯ ಶಾಸನಗಳು, ನಿಯಮಗಳು ಕೇವಲ ವಿಶ್ವಸಂಸ್ಥೆಗೆ ಮಾತ್ರ ಸೀಮಿತವಾಗಿವೆ.

### ೧೦. ಪರಸ್ಪರ ನಂಬಿಕೆಯಿಲ್ಲದ ಸದಸ್ಯ ರಾಷ್ಟ್ರಗಳು

ವಿಶ್ವಸಂಸ್ಥೆ ಹಲವಾರು ಕ್ಷೇತ್ರಗಳಲ್ಲಿ ವಿಫಲವಾಗುತ್ತಿರುವುದಕ್ಕೆ ಕಾರಣೀಭೂತವಾದ ಅಂಶಗಳಲ್ಲಿ ಇದು ಸಹ ಒಂದಾಗಿದೆ. ಯಾವುದೇ ಕಾರ್ಯಮಾಡುವಾಗ ಸಂಘಟನೆಯ ಸದಸ್ಯ

ರಾಷ್ಟ್ರಗಳಲ್ಲಿ ಒಮ್ಮತದ ಅಭಿಪ್ರಾಯವಿರುವುದಿಲ್ಲ, ಕಾರಣ ಸದಸ್ಯ ರಾಷ್ಟ್ರಗಳಲ್ಲೆ ಪರಸ್ಪರ ನಂಬಿಕೆಯ ಕೊರತೆ ಹೆಚ್ಚಾಗಿದೆ. ಇದರಿಂದ ಸ್ನೇಹ ಸಹಕಾರ ಬಲಗೊಳ್ಳುವ ಬದಲು ಸಂಬಂಧಗಳು ದುರ್ಬಲವಾಗುತ್ತವೆ. ಇಂತಹ ಸನ್ನಿವೇಶಗಳಿದ್ದಾಗ ವಿಶ್ವಸಂಸ್ಥೆಯು ಏನನ್ನೂ ಸಾಧಿಸಲು ಸಾಧ್ಯವಿಲ್ಲ.

### ೧೧. ನಾಮಮಾತ್ರ ನ್ಯಾಯಾಲಯ

ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ಅಂತಾರಾಷ್ಟ್ರೀಯ ನ್ಯಾಯಾಲಯ ಕೇವಲ ನಾಮಕಾವಸ್ಥೆ ನ್ಯಾಯಾಲಯವಾಗಿದೆ. ಜಗತ್ತಿನ ಎಷ್ಟೋ ಬಿಕ್ಕಟ್ಟುಗಳನ್ನು ಬಗೆಹರಿಸುವಲ್ಲಿ ಮತ್ತು ಅದಕ್ಕೆ ನ್ಯಾಯ ಒದಗಿಸುವಲ್ಲಿ ಫಲಕಾರಿಯಾಗದಿರುವುದು ವಿಶ್ವಸಂಸ್ಥೆಯ ದೌರ್ಬಲ್ಯದ ಪ್ರತಿರೂಪವಾಗಿದೆ ಎಂದು ಅನೇಕ ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

### ೧೨. ಮಾನವ ಹಕ್ಕುಗಳು

ವಿಶ್ವಸಂಸ್ಥೆಯು ಮಾನವ ಹಕ್ಕುಗಳ ರಕ್ಷಣೆಯ ವಿಚಾರದಲ್ಲಿ ಭಾಗಶಃ ವಿಫಲವಾಗಿದೆ. ವಿಶ್ವಸಂಸ್ಥೆಯು ಮಾನವ ಹಕ್ಕುಗಳ ಬಗ್ಗೆ ಜನರಲ್ಲಿ ತಿಳುವಳಿಕೆ ಮೂಡಿಸಬಹುದು. ಶಿಕ್ಷಣ ನೀಡಬಹುದು. ಆದರೆ ಹಕ್ಕುಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆಯನ್ನು ನೀಡುವುದಿಲ್ಲ. ಆದ್ದರಿಂದ ವಿಶ್ವಸಂಸ್ಥೆ ಮಾನವ ಹಕ್ಕುಗಳ ರಕ್ಷಣೆ ಮಾಡುವುದಕ್ಕಿಂತ ಹೆಚ್ಚಾಗಿ ಅದರ ಪ್ರಚಾರ ಕಾರ್ಯ ಮಾಡುತ್ತಿದೆ.

ಈ ಮೇಲ್ಕಾಣಿಸಿದ ಅಂಶಗಳು ವಿಶ್ವಸಂಸ್ಥೆಯ ದೋಷಗಳಾಗಿದ್ದರೂ ಸಹ ಮಹಾಯುದ್ಧಗಳನ್ನು ತಡೆಗಟ್ಟುವಲ್ಲಿ ಯಶಸ್ವಿಯಾಗಿದೆ. ಮಾನವ ಹಕ್ಕುಗಳ ರಕ್ಷಣೆಗಿಂತ ಅದರ ಪ್ರಚಾರವೇ ಉತ್ತಮವಾದ ವಿಧಾನವಾಗಿದೆ. ಜನತೆಗೆ ಯಾವ ರೀತಿ ವರ್ತಿಸಬೇಕು, ಬೇರೆಯವರ ಹಕ್ಕನ್ನು ಹೇಗೆ ಗೌರವಿಸಬೇಕೆಂದು ಮನವರಿಕೆಯಾದರೆ ಅಲ್ಲಿ ಹಕ್ಕುಗಳ ಉಲ್ಲಂಘನೆಯಾಗುವುದಿಲ್ಲ ಮತ್ತು ಅದರ ರಕ್ಷಣೆಯ ಅವಶ್ಯಕತೆಯೂ ಇರುವುದಿಲ್ಲ.

## ೯.೩ ಭಾರತದ ವಿದೇಶಾಂಗ ನೀತಿ

### ಅ. ಮೂಲಭೂತ ತತ್ವಗಳು

ವ್ಯಕ್ತಿಯಾಗಲಿ ಅಥವಾ ಒಂದು ರಾಷ್ಟ್ರವಾಗಲಿ ಏಕಾಂಗಿಯಾಗಿರಲು ಅಸಾಧ್ಯ. ಆದ್ದರಿಂದ ನೆರೆಹೊರೆಯ ರಾಷ್ಟ್ರಗಳ ಸಂಬಂಧ, ಸಹಕಾರ ಅತ್ಯವಶ್ಯಕವಾಗಿರುತ್ತದೆ. ಈ ಸಂಬಂಧಗಳು ಭದ್ರವಾಗಿ ನೆಲೆಯೂರುವುದು ಆ ರಾಷ್ಟ್ರಗಳ ವಿದೇಶಾಂಗ ನೀತಿಯ ಆಧಾರದ ಮೇಲೆ. ಅಂತೆಯೇ ಭಾರತವು ತನ್ನದೇ ಆದ ಸ್ವತಂತ್ರ ವಿದೇಶಾಂಗ ನೀತಿಯನ್ನು ಹೊಂದಿದೆ. ಸಂವಿಧಾನ ರಚನಾಸಭೆಯ ಸದಸ್ಯರು ಹಾಗೂ ಪಂಡಿತ್ ಜವಾಹರ್‌ಲಾಲ್ ನೆಹರೂರವರು ಭಾರತದ ವಿದೇಶಾಂಗ ನೀತಿಯನ್ನು ರೂಪಿಸುವಲ್ಲಿ ಪ್ರಮುಖ ರೂವಾರಿಗಳಾಗಿದ್ದಾರೆ. ಭಾರತದ ವಿದೇಶಾಂಗ ನೀತಿ ಹಲವಾರು ಮೂಲ ತತ್ವಗಳನ್ನು ಒಳಗೊಂಡಿದೆ. ಅವುಗಳೆಂದರೆ..

೧. ಅಲಿಪ್ತನೀತಿ

ಭಾರತದ ವಿದೇಶಾಂಗ ನೀತಿಯಲ್ಲಿ ನಮೂದಿಸಿರುವ ಅತ್ಯಂತ ಪ್ರಮುಖ ತತ್ವವೇ ಅಲಿಪ್ತ ನೀತಿಯಾಗಿದೆ. ನೆಹರೂರವರನ್ನು ಅಲಿಪ್ತ ನೀತಿಯ ಪಿತಾಮಹ ಎನ್ನಬಹುದು. ವಿದೇಶಾಂಗ ನೀತಿಗಳಲ್ಲಿ ಅಲಿಪ್ತ ನೀತಿಯನ್ನು ಮೊದಲ ಬಾರಿಗೆ ಸೇರಿಸಿದ ಕೀರ್ತಿ ಭಾರತಕ್ಕೆ ಸಲ್ಲುತ್ತದೆ. ಅಲಿಪ್ತ ನೀತಿ ರೂಪಿಸಿದ ನೆಹರೂರವರು ಈಜಿಪ್ಟ್‌ನ ನಾಸೆರ್, ಯುಗೋಸ್ಲೋವಿಯಾದ ಮಾರ್ಷಲ್ ಟೀಟೋ, ಇಂಡೋನೇಶ್ಯಾದ ಸುಕಾರ್ನೊ ಮೊದಲಾದ ವಿಶ್ವದ ಪ್ರಮುಖ ನಾಯಕರ ಸಹಾಯದಿಂದ ಅದನ್ನು ಜನಪ್ರಿಯಗೊಳಿಸಿದರು.

ವಿಶ್ವವು ಎರಡು ಶಕ್ತಿ ಬಣಗಳಾಗಿ ವಿಭಜಿತವಾಗಿತ್ತು. ಒಂದು ಬಣದ ನಾಯಕತ್ವ ರಷ್ಯಾ ಹಾಗೂ ಇನ್ನೊಂದು ಬಣದ ನಾಯಕತ್ವ ಅಮೇರಿಕಾ ವಹಿಸಿತ್ತು. ಹಲವಾರು ರಾಷ್ಟ್ರಗಳು ಈ ಬಣಗಳ ಸದಸ್ಯತ್ವವನ್ನು ಹೊಂದಿದ್ದವು. ಆದರೆ ಈ ಎರಡೂ ಬಣಗಳಿಗೆ ಸೇರದೆ ತಟಸ್ಥ ನೀತಿಯನ್ನು ಅನುಸರಿಸುವುದೇ ಅಲಿಪ್ತ ನೀತಿಯಾಗಿದೆ. ಭಾರತವು ಎರಡೂ ಬಣಗಳಿಗೂ ಸೇರದಿದ್ದರೂ ಎರಡೂ ಬಣದೊಂದಿಗೆ ಸೌಹಾರ್ದಯುತ ಸ್ನೇಹವನ್ನು ಹೊಂದಿದೆ.

ಅಲಿಪ್ತ ನೀತಿಯು ನಕಾರಾತ್ಮಕ ನೀತಿಯೂ ಅಲ್ಲ, ಅನಾಸಕ್ತ ತಟಸ್ಥ ನೀತಿಯೂ ಅಲ್ಲ. ಅಲಿಪ್ತ ನೀತಿಯನ್ನು ತಟಸ್ಥನೀತಿ ಎಂದು ಪರಿಗಣಿಸಿದರೆ ಅಂತಾರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ವಿವೇಚಿಸದೆ ಒಳ್ಳೆಯದು, ಕೆಟ್ಟದ್ದನ್ನು ಪರಿಗಣಿಸದೆ ತನ್ನ ಪಾಡಿಗೆ ತಾನಿರಬೇಕಾಗಿದೆ. ಆದುದರಿಂದ ಅಲಿಪ್ತ ನೀತಿಯನ್ನು ತಟಸ್ಥನೀತಿಯೆಂದು ಪರಿಗಣಿಸಲು ಸಾಧ್ಯವಿಲ್ಲ. ಸಾಮ್ರಾಜ್ಯಶಾಹಿ, ವಸಾಹತುಶಾಹಿ ಹಾಗೂ ವಿಶ್ವಶಾಂತಿಗೆ ಸಂಬಂಧಿಸಿದ ಮೂಲಭೂತ ಸಮಸ್ಯೆಗಳು ಉದ್ಭವಿಸಿದಾಗ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಭಾರತವು ಹಿಂಜರಿಯುವುದಿಲ್ಲ. ನೆಹರೂ ಅವರೇ ಹೇಳಿರುವಂತೆ ಸ್ವಾತಂತ್ರ್ಯಕ್ಕೆ ತೊಂದರೆಯಾಗಿದ್ದರೆ, ನ್ಯಾಯವಿಲ್ಲದಿದ್ದಲ್ಲಿ ಹಾಗೂ ಸಂಘರ್ಷಗಳುಂಟಾದರೆ ಅಂತಹ ರಾಷ್ಟ್ರಗಳ ಬಗ್ಗೆ ನಾವು ತಟಸ್ಥರಾಗಿಲು ಸಾಧ್ಯವಿಲ್ಲ, ತಟಸ್ಥರಾಗಿರುವುದೂ ಇಲ್ಲ.

೨. ಪಂಚಶೀಲ ತತ್ವ

ವಿವಿಧ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ಒಳಗೊಂಡಿರುವ ರಾಷ್ಟ್ರಗಳು ಕೆಲವು ಸರ್ವಸಮ್ಮತ ತತ್ವಗಳ ಆಧಾರದ ಮೇಲೆ ಸಹಬಾಳ್ವೆ ನಡೆಸಬಹುದು ಎಂಬ ನಂಬಿಕೆ ಭಾರತಕ್ಕಿದೆ. ಇಂದು ಸಹಬಾಳ್ವೆಯ ತತ್ವವನ್ನು ರಷ್ಯಾ ಹಾಗೂ ಇತರ ಬೃಹತ್ ರಾಷ್ಟ್ರಗಳೂ ಒಪ್ಪಿಕೊಂಡಿವೆ. ಸೈದ್ಧಾಂತಿಕವಾಗಿ ವಿಭಿನ್ನ ಅಭಿಪ್ರಾಯ ಹೊಂದಿರುವ ರಾಷ್ಟ್ರಗಳೂ ಸಹ ಶಾಂತಿಯುತ ಸಹಬಾಳ್ವೆ ನಡೆಸುವುದು ಸಾಧ್ಯವೆಂದು ಪಂಚಶೀಲದ ಮೇಲೆ ರೂಪಿತವಾಗಿದೆ.

೧೯೫೪ರಲ್ಲಿ ಭಾರತಕ್ಕೆ ಭೇಟಿ ನೀಡಿದ ಚೀನಾದ ಪ್ರಧಾನಿ ಚೌ-ಎನ್-ಲಾಯ್ ಅವರು ಹಾಗೂ ನೆಹರೂರವರು ವಿಶ್ವಶಾಂತಿ ರಕ್ಷಿಸುವ ಉದ್ದೇಶದಿಂದ ಒಂದು ಸಂಯುಕ್ತ ಘೋಷಣೆ ಹೊರಡಿಸಿದರು. ಅಂತಾರಾಷ್ಟ್ರೀಯ ಬಾಂಧವ್ಯಕ್ಕೆ ಸಂಬಂಧಿಸಿದಂತೆ ಅನುಸರಿಸಬೇಕಾದ ಈ ತತ್ವಗಳನ್ನು ಅದು ಒಳಗೊಂಡಿತ್ತು.

೧. ವಿಶ್ವದ ರಾಷ್ಟ್ರಗಳ ಪ್ರಾದೇಶಿಕ ಏಕತೆ ಹಾಗೂ ಸಾರ್ವಭೌಮ ಅಧಿಕಾರಕ್ಕೆ ಪರಸ್ಪರ ಗೌರವ ಕೊಡುವುದು.
೨. ಪರಸ್ಪರ ಯುದ್ಧನಿರೋಧಕ ನೀತಿ.
೩. ಆಂತರಿಕ ವ್ಯವಹಾರಗಳಲ್ಲಿ ಪರಸ್ಪರ ಹಸ್ತಕ್ಷೇಪ ಮಾಡದಿರುವುದು.
೪. ಪರಸ್ಪರ ಸಹಾಯ ಹಾಗೂ ಸಮಾನತೆ ತತ್ವದ ಆಧಾರದ ಮೇಲೆ ಮೈತ್ರಿಯುತ ಸಂಬಂಧಗಳನ್ನು ಬೆಳೆಸಿಕೊಳ್ಳುವುದು.
೫. ಶಾಂತಿಯುತ ಸಹಜೀವನ.

ಈ ಮೇಲ್ಕಾಣಿಸಿದ ತತ್ವಗಳೇ ಪಂಚಶೀಲ ತತ್ವಗಳಾಗಿವೆ. ಕಾಲಾನಂತರ ವಿಶ್ವದ ಅನೇಕ ರಾಷ್ಟ್ರಗಳು ಇದನ್ನು ಒಪ್ಪಿಕೊಂಡವು. ರಾಷ್ಟ್ರಗಳು ಪಂಚಶೀಲ ತತ್ವವನ್ನು ಅನುಸರಿಸಿದರೆ ವಿವಿಧತೆಯಲ್ಲಿ ಏಕತೆ ಸಾಧಿಸಬಹುದು ಮತ್ತು ವಿಶ್ವಶಾಂತಿ ಕಾಪಾಡುವುದೇ ಈ ಐದು ತತ್ವಗಳ ಮೂಲಭೂತ ಉದ್ದೇಶವಾಗಿದೆ.

ಚೀನಾ ಮತ್ತು ಭಾರತ ರಾಷ್ಟ್ರಗಳೇ ಇದಕ್ಕೆ ತಳಪಾಯ ಹಾಕಿದ್ದರೂ ೧೯೬೨ರಲ್ಲಿ ಚೀನಾವು ಭಾರತದ ಮೇಲೆ ಆಕ್ರಮಣ ಮಾಡಿ ಈ ಪಂಚಶೀಲ ತತ್ವಗಳಿಗೆ ವಿರುದ್ಧವಾಗಿ ನಡೆದುಕೊಂಡಿತು.

### ೩. ಶೀತಲಸಮರಕ್ಕೆ ವಿರೋಧ

ಭಾರತವು ಶೀತಲಸಮರಕ್ಕೆ ವಿರೋಧವಾದ ನೀತಿಯನ್ನು ಹೊಂದಿದೆ. ನೆಹರೂರವರೇ ಹೇಳಿರುವಂತೆ ಶಸ್ತ್ರಾಸ್ತ್ರಗಳ ವಾಸ್ತವ ಯುದ್ಧಕ್ಕಿಂತ ಶೀತಲಸಮರ ಅತ್ಯಂತ ಕೆಟ್ಟದ್ದು. ಇಂತಹ ವಾತಾವರಣ ಮುಂದುವರೆದರೆ ಜನರಲ್ಲಿ ಯುದ್ಧ ಪ್ರವೃತ್ತಿ, ಅಸಹಕಾರ ಮನೋಭಾವನೆ ಬೆಳೆಯುತ್ತದೆ.

ಶೀತಲಸಮರದಿಂದಾಗಿ ಎರಡೂ ಬಣಗಳಲ್ಲಿಯೂ ಪರಸ್ಪರ ಆಂತರಿಕ ವೈರತ್ವ ಹೆಚ್ಚಾಗುತ್ತದೆ. ಇದರಿಂದ ಯುದ್ಧಗಳು ಸಂಭವಿಸುವ ಸಾಧ್ಯತೆಯೂ ಇರುತ್ತದೆ. ಆದ್ದರಿಂದ ಭಾರತವು ಇಂತಹ ಸಮರ ನೀತಿಯನ್ನು ವಿರೋಧಿಸುತ್ತದೆ. ಆದರೆ ವಾಸ್ತವದಲ್ಲಿ ಶೀತಲ ಸಮರವೇ ಅಸ್ತಿತ್ವದಲ್ಲಿಲ್ಲದಂತಾಗಿದೆ. ೧೯೯೫ರ ನಂತರ ಅಂದರೆ ರಷ್ಯಾದ ವಿಭಜನೆಯ ನಂತರ ಅಮೇರಿಕಾದೊಂದಿಗೆ ಸಹಕಾರ, ಸ್ನೇಹಯುತ ಸಂಬಂಧವನ್ನು ರಷ್ಯಾ ಬೆಳೆಸಿಕೊಳ್ಳಲು ಪ್ರಯತ್ನಿಸಿದೆ.

### ೪. ಅಹಿಂಸಾ ತತ್ವ

ಭಾರತವು ಸ್ವಾತಂತ್ರ್ಯವನ್ನು ಗಳಿಸಿರುವುದೇ ಅಹಿಂಸಾ ಮಾರ್ಗದಲ್ಲಿ. ಆದ್ದರಿಂದ ಸ್ವಾತಂತ್ರ್ಯಾನಂತರ ವಿದೇಶಾಂಗ ನೀತಿಯನ್ನು ರೂಪಿಸುವಾಗ ಅಹಿಂಸಾ ತತ್ವಕ್ಕೆ ಅಧಿಕ ಮಹತ್ವ ನೀಡಲಾಯಿತು. ಅಹಿಂಸಾ ನೀತಿಯನ್ನು ಅಳವಡಿಸಿಕೊಂಡಿದ್ದರೂ ವಿದೇಶಿ ರಾಷ್ಟ್ರಗಳು ಆಕ್ರಮಣ ಮಾಡಿದಾಗ ಹಿಂಸಾ ಮಾರ್ಗವನ್ನು ಅನುಸರಿಸಲು ಹಿಂಜರಿಯುವುದಿಲ್ಲ. ಆದರೆ ವಿಶ್ವಶಾಂತಿ, ವಿಶ್ವಭ್ರಾತೃತ್ವ ಕಾಪಾಡಲು ಅಹಿಂಸಾ ಮಾರ್ಗವು ಒಂದು ಉತ್ತಮ ಮಾರ್ಗವಾಗಿದೆ.

## ೫. ಸಾಮ್ರಾಜ್ಯಶಾಹಿ ಹಾಗೂ ವಸಾಹತುಶಾಹಿ ನೀತಿಗೆ ವಿರೋಧ

ಭಾರತವು ಸಾಮ್ರಾಜ್ಯಶಾಹಿ ಹಾಗೂ ವಸಾಹತುಶಾಹಿ ಧೋರಣೆಯನ್ನು ತನ್ನ ವಿದೇಶಾಂಗ ನೀತಿಯಲ್ಲಿ ವಿರೋಧಿಸಿದೆ. ಕಾರಣ ಈ ಎರಡು ಅನಿಷ್ಟ ಪದ್ಧತಿಗಳಿಗೆ ಭಾರತವೇ ಸ್ವತಃ ಒಳಗಾಗಿತ್ತು. ಸುಮಾರು ೩೫೦ ವರ್ಷಗಳ ಕಾಲ ವಿದೇಶಿಯರ ಕಪಿಮುಷ್ಟಿಯಲ್ಲಿ ಹುದುಗಿ ಹೋಗಿತ್ತು. ಆದ್ದರಿಂದ ಭಾರತ ಈ ನೀತಿಯನ್ನು ಕಠೋರವಾಗಿ ವಿರೋಧಿಸಿದೆ.

ಡಚ್ ಸರ್ಕಾರವು ಇಂಡೋನೇಷ್ಯಾದ ಮೇಲೆ ಪುನರ್ ಅಧಿಕಾರ ಸ್ಥಾಪಿಸಲು ಹೊರಟಾಗ ಇಂಡೋನೇಷ್ಯಾದ ಸ್ವಾತಂತ್ರ್ಯಕ್ಕೆ ಭಾರತವು ಸಫಲದಾಯಕ ಪ್ರಯತ್ನಪಟ್ಟು ಯಶಸ್ವಿಯಾಯಿತು. ಆದ್ದರಿಂದ ಸಾಮ್ರಾಜ್ಯಶಾಹಿ ಹಾಗೂ ವಸಾಹತುಶಾಹಿ ಧೋರಣೆಗಳಿಗೆ ಒಳಗಾಗುತ್ತಿರುವ ರಾಷ್ಟ್ರಗಳು ವಿಮೋಚನೆಗೆ ಭಾರತವು ಪ್ರೋತ್ಸಾಹ ನೀಡುವುದು ಹಾಗೆಯೇ ಭಾರತವು ಲಿಬಿಯಾದ ರಾಷ್ಟ್ರೀಯ ವಿಮೋಚನಾ ಚಳುವಳಿಯನ್ನು ಸಮರ್ಥಿಸಿತು. ಹಾಗೂ ಅಲ್ಜೀರಿಯಾ, ಅಂಗೋಲ, ಮೊರಾಕೋ ಮೊದಲಾದ ರಾಷ್ಟ್ರಗಳ ವಿಮುಕ್ತಿಗೆ ಭಾರತವು ಶ್ರಮಿಸಿದೆ.

## ೬. ವರ್ಣಭೇದ ನೀತಿಗೆ ವಿರೋಧ

ಭಾರತವು ಯಾವುದೇ ರೀತಿಯ ವರ್ಣಭೇದ ನೀತಿಯನ್ನು ಜಗತ್ತಿನ ಯಾವ ಸ್ಥಳದಲ್ಲಾದರೂ ಅದನ್ನು ವಿರೋಧಿಸಿದೆ. ವಿಶ್ವದ ಎಲ್ಲಾ ಜನತೆಗೆ ಸಮಾನ ಅವಕಾಶ ನೀಡಬೇಕು ಎಂಬ ಸ್ಥಿರ ನಂಬಿಕೆಯನ್ನು ಹೊಂದಿದೆ. ಜಾತಿ, ಲಿಂಗ, ವರ್ಣ ಯಾವುದೇ ರೀತಿಯ ಭೇದಭಾವ ಇರಬಾರದೆಂದು ಅದನ್ನು ವಿರೋಧಿಸುತ್ತಾ ಬಂದಿದೆ. ಮಹಾತ್ಮ ಗಾಂಧಿಯವರು ದಕ್ಷಿಣ ಆಫ್ರಿಕಾದಲ್ಲಿ ಹೋರಾಡಿರುವುದೇ ಭಾರತದ ವಿದೇಶಾಂಗ ನೀತಿ ರಚನಾಕಾರರಿಗೆ ಅತ್ಯಂತ ಸ್ಫೂರ್ತಿಯಾಗಿದೆ.

ವಿಶ್ವದಲ್ಲಿ ಗುಲಾಮಗಿರಿ, ಕಷ್ಟನಷ್ಟ ಹಾಗೂ ಮಾನಾಪಮಾನಗಳನ್ನು ಉಚ್ಚಾಟನೆ ಮಾಡುವ ಪ್ರಯತ್ನಗಳು ನಡೆಯುತ್ತಿರುವ ಕಡೆಗಳಲ್ಲೆಲ್ಲಾ ಭಾರತವು ತನ್ನ ಸಕ್ರಿಯ ನೆರವು ನೀಡಲು ಮುಂದಾಗುತ್ತದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವರ್ಣಭೇದ, ಗುಲಾಮಗಿರಿಯಂತಹ ಭೇದಭಾವವಿದ್ದರೆ, ಪೌರಾತ್ಯ ರಾಷ್ಟ್ರಗಳಲ್ಲಿ ಜಾತಿ, ಲಿಂಗ, ಧರ್ಮ ಇವುಗಳ ಆಧಾರದ ಮೇಲೆ ಭೇದಭಾವ ನಡೆಯುತ್ತಿದೆ.

## ೭. ವಿಶ್ವ ಸಂಸ್ಥೆಯಲ್ಲಿ ವಿಶ್ವಾಸ

ಭಾರತದ ವಿದೇಶಾಂಗ ನೀತಿಯಲ್ಲಿ ಪ್ರಮುಖವಾದ ಮತ್ತೊಂದು ನೀತಿಯೆಂದರೆ ವಿಶ್ವಸಂಸ್ಥೆಯಲ್ಲಿ ನಂಬಿಕೆ ಇಟ್ಟಿರುವುದು. ಜಾಗತಿಕ ಮಟ್ಟದಲ್ಲಿ ಯುದ್ಧಗಳನ್ನು ತಡೆಗಟ್ಟಿ, ಅಂತಾರಾಷ್ಟ್ರೀಯ ಸಂಘಟನೆಯ ಅವಶ್ಯಕತೆಯನ್ನು ಅರಿತುಕೊಂಡು ಭಾರತವು ವಿಶ್ವ ಸಂಸ್ಥೆಯನ್ನು ಬಲಪಡಿಸಲು ತನ್ನಿಂದ ಸಾಧ್ಯವಾದ ಸಹಾಯ ಹಸ್ತವನ್ನು ನೀಡುತ್ತಿದೆ.

ಭಾರತವು ಇಟ್ಟಿರುವ ನಂಬಿಕೆ ಏಕಮುಖವಾಗಿದೆ. ಅಂದರೆ ಭಾರತ ಮಾತ್ರ ವಿಶ್ವಸಂಸ್ಥೆಯ ಮೇಲೆ ವಿಶ್ವಾಸ ಹೊಂದಿದೆ. ಆದರೆ ವಿಶ್ವಸಂಸ್ಥೆಯು ತನ್ನ ವಿಶ್ವಾಸವನ್ನು ಕಾಪಾಡಿಕೊಂಡಿದೆಯೆ?

ಭಾರತ ಅತಂತ್ರ ಸ್ಥಿತಿಯಲ್ಲಿರುವಾಗ ಸಹಾಯ ನೀಡಲು ವಿಶ್ವಸಂಸ್ಥೆ ಹಿಂಜರಿಯಿತು. ಭಾರತದ ವಿಮಾನವನ್ನು ಪಾಕಿಸ್ತಾನದ ಭಯೋತ್ಪಾದಕರು ಅಪಹರಣ ಮಾಡಿ ಅದನ್ನು ಧ್ವಂಸ ಗೊಳಿಸಿದರು. ಆದರೆ ವಿಶ್ವಸಂಸ್ಥೆ ಭಾರತಕ್ಕೆ ಪರಿಹಾರ ನೀಡಿಸುವಲ್ಲಿ ವಿಫಲವಾಯಿತು. ಆದಾಗ್ಯೂ ಭಾರತ ತನ್ನ ಸ್ವಾರ್ಥಕ್ಕಿಂತ ವಿಶ್ವದ ಶಾಂತಿಯೇ ಪ್ರಮುಖ ಎಂದು ವಿಶ್ವ ಸಂಸ್ಥೆಯನ್ನು ಈಗಲೂ ಗೌರವಿಸುತ್ತಿದೆ.

**೮. ಏಷ್ಯಾ ರಾಷ್ಟ್ರಗಳ ಬಗ್ಗೆ ವಿಶೇಷ ಆಸಕ್ತಿ**

ಭಾರತವು ವಿಶ್ವದ ಎಲ್ಲ ರಾಷ್ಟ್ರಗಳೊಡನೆ ಮೈತ್ರಿಯಿಂದಿರುವುದೇನೋ ನಿಜ. ಆದರೆ ತನ್ನ ದೃಷ್ಟಿಕೋನವನ್ನೇ ಹೊಂದಿರುವ ಏಷ್ಯಾ ಮತ್ತು ಆಫ್ರಿಕನ್ ರಾಷ್ಟ್ರಗಳೊಂದಿಗೆ ಹೆಚ್ಚು ಮೈತ್ರಿಯುತ ಸಂಬಂಧ ಬೆಳೆಸಲು ವಿಶೇಷ ಆಸಕ್ತಿವಹಿಸುತ್ತಿದೆ. ಭಾರತವು ಏಷಿಯನ್ ರಾಷ್ಟ್ರಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಸ್ಪಂದಿಸುವುದಲ್ಲದೇ ಹಲವಾರು ಸಮ್ಮೇಳನಗಳ ಮೂಲಕ ಏಷ್ಯಾ ರಾಷ್ಟ್ರಗಳ ಒಂದುಗೂಡುವಿಕೆಗೆ ಪ್ರಾಮಾಣಿಕ ಪ್ರಯತ್ನ ನಡೆಸುತ್ತಿದೆ. ಅಲ್ಲದೆ ವಿಶ್ವದ ಎಲ್ಲ ವ್ಯವಹಾರಗಳಲ್ಲೂ ಏಷ್ಯನ್ ರಾಷ್ಟ್ರಗಳಿಗೆ ಇನ್ನೂ ಹೆಚ್ಚಿನ ಸ್ಥಾನ ಬೇಕು ಎಂದು ಪ್ರತಿಪಾದಿಸುತ್ತಾ ಈ ವಿಷಯದಲ್ಲಿ ಮುಂದಾಳತ್ವವನ್ನು ವಹಿಸುತ್ತಿದೆ. ೧೯೮೫ರಲ್ಲಿ ಪ್ರಾದೇಶಿಕ ಸಹಕಾರ ವೃದ್ಧಿಸುವ ದೃಷ್ಟಿಯಿಂದ ರೂಪಿಸಿಕೊಂಡಿರುವ ಸಾರ್ಕ್‌ನಲ್ಲಿಯೂ ಸಹ ಭಾರತ ಬಹಳ ಪ್ರಮುಖ ಪಾತ್ರವಹಿಸಿದೆ.

**೯. ವಿಭಜಿತ ರಾಷ್ಟ್ರಗಳ ಬಗ್ಗೆ ಸಹಾನುಭೂತಿ**

ದೇಶದ ವಿಭಜನೆಯಿಂದ ಉಂಟಾಗುವ ಕಷ್ಟನಷ್ಟಗಳು ತೊಂದರೆಗಳು ಭಾರತಕ್ಕೆ ಸ್ವಅನುಭವ ಇರುವುದರಿಂದ ವಿಭಜಿತ ರಾಷ್ಟ್ರಗಳಿಗೆ ಸಹಾನುಭೂತಿ ತೋರಿಸುವ ನೀತಿಯನ್ನು ಭಾರತವು ತನ್ನ ವಿದೇಶಾಂಗ ನೀತಿಯಲ್ಲಿ ಅಳವಡಿಸಿಕೊಂಡಿದೆ.

ಪ್ಯಾಲೆಸ್ಟೈನ್‌ನ ವಿಭಜನೆಯನ್ನು ವಿರೋಧಿಸಿ ಅರಬ್ಬರ ಹಾಗೂ ಯಹೂದಿಗಳ ಸಂಯುಕ್ತ ರಾಜ್ಯ ಸ್ಥಾಪನೆಗೆ ಸಲಹೆ ನೀಡಿತು. ಕೋರಿಯಾ, ವಿಯಟ್ನಾಂ ಮೊದಲಾದ ರಾಷ್ಟ್ರಗಳ ವಿಭಜನೆಯನ್ನು ವಿರೋಧಿಸಿತು.

**೧೦. ಕಾಮನ್ ವೆಲ್ತ್‌ನೊಡನೆ ಸಂಬಂಧ**

ಕಾಮನ್‌ವೆಲ್ತ್‌ಗೆ ಬೆಂಬಲ ನೀಡುತ್ತಿರುವ ಭಾರತ ಅದರ ಸದಸ್ಯತ್ವವನ್ನು ಪಡೆದಿದೆ. ಹಿಂದೆ ಬ್ರಿಟಿಷ್ ಕಾಮನ್‌ವೆಲ್ತ್ ಎಂದು ಇದ್ದದ್ದು ಈಗ ಕೇವಲ ಕಾಮನ್‌ವೆಲ್ತ್ ಎಂದು ರೂಪಾಂತರವಾಗಲು ಭಾರತವೇ ಕಾರಣ ಎಂದರೆ ಉತ್ಪ್ರೇಕ್ಷೆಯಾಗಲಾರದು. ಶಾಂತಿ ಮತ್ತು ಅಭಿವೃದ್ಧಿಯ ಉದ್ದೇಶವನ್ನಿಟ್ಟುಕೊಂಡಿರುವ ಯಾವುದೇ ಅಂತಾರಾಷ್ಟ್ರೀಯ ಸಂಸ್ಥೆಯನ್ನು ಪ್ರೋತ್ಸಾಹಿಸುವುದು ತಪ್ಪಲ್ಲ.

೧೯೬೫ರಲ್ಲಿ ಭಾರತ ಪಾಕ್ ಯುದ್ಧ ನಡೆದಾಗ ಬ್ರಿಟನ್ ಪಾಕಿಸ್ತಾನದ ಪರವಹಿಸಿ ಅದಕ್ಕೆ ಸಹಾನುಭೂತಿಯನ್ನು ವ್ಯಕ್ತಪಡಿಸಿತು. ಭಾರತವು ಎಲ್ಲ ಸಂಘಟನೆಗಳನ್ನು ಗೌರವಿಸುತ್ತದೆ.

ಆದರೆ ಅಂಥಾ ಸಂಘಟನೆಗಳು ಮಾತ್ರ ಭಾರತಕ್ಕೆ ಗೌರವ ನೀಡುವುದಿಲ್ಲ. ಈ ರೀತಿ ಭಾರತ ಎಲ್ಲಾ ಅಂತಾರಾಷ್ಟ್ರೀಯ ಸಂಘಟನೆಗಳಲ್ಲೂ ಸಕ್ರಿಯ ಪಾತ್ರವಹಿಸಿದರೂ ತನಗೆ ಮಾತ್ರ ಏನನ್ನೂ ನಿರೀಕ್ಷೆ ಮಾಡದಿರುವ ಭಾರತದ ನೀತಿಯನ್ನು ಮೆಚ್ಚಲೇಬೇಕು.

### ೧೧. ವಿರುದ್ಧ ರಾಷ್ಟ್ರಗಳ ನಡುವಣ ಕೊಂಡಿ

ಭಾರತವು ಅಲಿಪ್ತ ನೀತಿಯನ್ನು ಅನುಸರಿಸುತ್ತಿರುವುದರಿಂದ ಯಾವುದೇ ಶಕ್ತಿ ಬಣಕ್ಕೂ ಸೇರದೆ ಎರಡೂ ಭಾಗಗಳೊಂದಿಗೆ ಸೌಹಾರ್ದ ಸಂಬಂಧ ಹೊಂದಿದೆ ಮತ್ತು ಭಾರತದ ಪ್ರಯತ್ನದಿಂದಾಗಿ ರಷ್ಯಾ ಮತ್ತು ಅಮೇರಿಕಾದ ನಡುವೆ ಇದ್ದ ಶೀತಲ ಸಮರಗಳು ಕೊನೆಗೊಂಡು ಸಂಬಂಧ ಉತ್ತಮವಾಗುತ್ತಿದೆ. ಇದೂ ಸಹ ಪ್ರಮುಖ ವಿದೇಶಾಂಗ ನೀತಿಯಾಗಿದೆ.

## ೯.೪ ಭಾರತ ಮತ್ತು ಪ್ರಾದೇಶಿಕ ಸಹಕಾರ

ಸಾರ್ಕ್ ಎಂದು ಕರೆಯಲ್ಪಡುವ ದಕ್ಷಿಣ ಏಷ್ಯಾ ಪ್ರಾದೇಶಿಕ ಸಹಕಾರ ಸಂಸ್ಥೆಯ ಕನಸು ಕಂಡವರು ಬಾಂಗ್ಲಾದೇಶದ ರಾಷ್ಟ್ರಾಧ್ಯಕ್ಷರಾಗಿದ್ದ ಜಿಯಾವುರ್ ರೆಹಮಾನ್. ೧೯೮೫ ಡಿಸೆಂಬರ್‌ನಲ್ಲಿ ಏಳು ರಾಷ್ಟ್ರಗಳಾದ ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ಶ್ರೀಲಂಕಾ, ನೇಪಾಳ, ಭೂತಾನ ಮತ್ತು ಮಾಲ್ಡೀವ್ಸ್ ಸೇರಿ ಸಾರ್ಕ್‌ನ್ನು ಸ್ಥಾಪಿಸಿದವು. ಭಾರತದ ಪ್ರಧಾನಿ ರಾಜೀವ್ ಗಾಂಧೀಯವರು ಸಾರ್ಕ್ ಸ್ಥಾಪನೆಯಲ್ಲಿ ಗಣನೀಯ ಪಾತ್ರವಹಿಸಿದ್ದರು. ಸಾರ್ಕ್‌ನ ಎಲ್ಲಾ ದೇಶಗಳು ಪ್ರಾಥಮಿಕ ಉತ್ಪನ್ನಗಳ ಉತ್ಪಾದಕ ದೇಶಗಳಾಗಿವೆ. ಅವು ಮುಖ್ಯವಾಗಿ ಕೃಷಿ ಪ್ರಧಾನ ರಾಷ್ಟ್ರಗಳಾಗಿವೆ. ಅಲ್ಲದೆ ಬೇರೆ ಬೇರೆ ಪ್ರಮಾಣದಲ್ಲಿ ಒಂದೇ ರೀತಿಯ ಆರ್ಥಿಕಾಭಿವೃದ್ಧಿಯ ಸಮಸ್ಯೆಗಳನ್ನು ಎದುರಿಸುತ್ತಿವೆ.

ಭಾರತವು ಸಾರ್ಕ್‌ನ ನಾಯಕತ್ವದ ಜವಾಬ್ದಾರಿಯನ್ನು ವಹಿಸಿಕೊಂಡಿದೆ. ಈಗ ಭಾರತ ದಕ್ಷಿಣ ಏಷ್ಯಾ ರಾಷ್ಟ್ರಗಳ ಬಗ್ಗೆ ವಿಶೇಷ ಕಾಳಜಿಯನ್ನು ಹೊಂದಿದೆ. ಜಾಗತಿಕ ಮಟ್ಟದಲ್ಲಿ ಅಂದರೆ ವಿಶ್ವಸಂಸ್ಥೆಯಲ್ಲಿ ಸಾರ್ಕ್‌ಗೆ ವಿಶೇಷ ಸ್ಥಾನಮಾನ ನೀಡಲು ಭಾರತ ಹಲವು ಬಾರಿ ಪ್ರಯತ್ನಿಸಿದೆ ಹಾಗೂ ಎಲ್ಲಾ ಸದಸ್ಯ ರಾಷ್ಟ್ರಗಳಲ್ಲಿ ಉಂಟಾಗುವ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಸಮಸ್ಯೆಗಳಿಗೆ ಸ್ಪಂದಿಸಿ ತನ್ನಿಂದಾಗುವ ಸಹಾಯವನ್ನು ಮಾಡುತ್ತಲೇ ಬಂದಿದೆ ಮತ್ತು ಇವು ಎದುರಿಸುತ್ತಿರುವ ಸಮಾನ ಸಮಸ್ಯೆಗಳೆಂದರೆ ಬಡತನ, ನಿರುದ್ಯೋಗ, ರೋಗರುಜಿನ ಇತ್ಯಾದಿ.

ಸಾರ್ಕ್‌ನ ಶಾಶ್ವತ ಕಾರ್ಯಾಲಯ (ಕೇಂದ್ರ ಕಛೇರಿ) ನೇಪಾಳದ ರಾಜಧಾನಿ ಕಠ್ಮಂಡುವಿನಲ್ಲಿದೆ. ಇದಕ್ಕೆ ಒಬ್ಬ ಮಹಾಕಾರ್ಯದರ್ಶಿ ಮತ್ತು ಸಾರ್ಕ್‌ನ ಏಳು ರಾಷ್ಟ್ರಗಳಿಂದ ಆಯ್ಕೆಯಾದ ನಾಗರಿಕ ಅಧಿಕಾರಿಗಳಿರುತ್ತಾರೆ. ಮಂತ್ರಿಗಳ ಸಮಿತಿಯೊಂದು ಸಾರ್ಕ್‌ನ ನೀತಿಯನ್ನು ರೂಪಿಸುವ ಅಂಗವಾಗಿದ್ದು ಇದು ವರ್ಷಕ್ಕೆ ಎರಡು ಬಾರಿ ಸಭೆ ಸೇರುತ್ತದೆ. ಸಾರ್ಕ್‌ನ ಎಲ್ಲಾ ರಾಷ್ಟ್ರಗಳ ಮುಖ್ಯಸ್ಥರು ವರ್ಷಕ್ಕೊಮ್ಮೆ ಸಭೆ ಸೇರುತ್ತಾರೆ.

### ಅ. ಸಾರ್ಕ್ (ಎಸ್.ಎ.ಎ.ಆರ್.ಸಿ.) : ಉದ್ದೇಶ ಗುರಿಗಳು

ಸಾರ್ಕ್ ಏಳು ರಾಷ್ಟ್ರಗಳ ಸಮಗ್ರ ಅಭಿವೃದ್ಧಿಯನ್ನು ಸಾಧಿಸ ಹೊರಟಿರುವ ಸಂಘಟನೆಯಾಗಿದೆ. ಸಾರ್ಕ್ ಹಲವಾರು ಉದ್ದೇಶ ಮತ್ತು ಗುರಿಗಳನ್ನು ಹೊಂದಿದೆ. ಅವುಗಳೆಂದರೆ

೧. ಏಳು ಸದಸ್ಯ ರಾಷ್ಟ್ರಗಳ ಜನತೆಯ ಕಲ್ಯಾಣವನ್ನು ಸಾಧಿಸುವುದು ಮತ್ತು ಅವರ ಜೀವನ ಗುಣಮಟ್ಟವನ್ನು ಉತ್ತಮಪಡಿಸುವುದು ಸಾರ್ಕ್‌ನ ಪ್ರಮುಖ ಉದ್ದೇಶವಾಗಿದೆ.

೨. ಸಾರ್ಕ್ ದೇಶಗಳ ಅರ್ಥಿಕಾಭಿವೃದ್ಧಿ, ಸಾಮಾಜಿಕ ಪ್ರಗತಿ ಮತ್ತು ಸಾಂಸ್ಕೃತಿಕ ಬೆಳವಣಿಗೆಯನ್ನು ಹೆಚ್ಚಿಸುವುದು ಹಾಗೂ ಈ ಪ್ರದೇಶದ ಎಲ್ಲಾ ನಾಗರೀಕರಿಗೂ ಘನತೆಯಿಂದ ಜೀವನ ನಡೆಸಲು ಹಾಗೂ ಅವರವರ ಸಾಮರ್ಥ್ಯಗಳನ್ನು ಬಳಸಿಕೊಳ್ಳಲು ಅವಕಾಶಗಳನ್ನು ಕಲ್ಪಿಸಿಕೊಡುವುದು.

೩. ಸಾರ್ಕ್ ದೇಶಗಳಲ್ಲಿ ಸಾಮೂಹಿಕ ಸ್ವಾವಲಂಬನೆಯನ್ನು ಪ್ರೋತ್ಸಾಹಿಸುವುದು ಮತ್ತು ಬಲಪಡಿಸುವುದು.

೪. ಪರಸ್ಪರ ಸಮಸ್ಯೆಗಳನ್ನು ಅರ್ಥಮಾಡಿಕೊಂಡು ಅವುಗಳ ಪರಿಹಾರಕ್ಕೆ ಕೊಡುಗೆ ನೀಡುವುದರ ಮೂಲಕ ಪರಸ್ಪರ ವಿಶ್ವಾಸಗಳನ್ನು ಗಳಿಸುವುದು.

೫. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಿ ಪರಸ್ಪರ ನೆರವು ಮತ್ತು ಜಂಟಿ ಪ್ರಯತ್ನಗಳನ್ನು ಉತ್ತೇಜಿಸುವುದು.

೬. ಇತರೆ ಅಭಿವೃದ್ಧಿ ಶೀಲ ರಾಷ್ಟ್ರಗಳೊಂದಿಗೆ ಸಹಕಾರ ಬಲಪಡಿಸುವುದೂ ಸಹ ಸಾರ್ಕ್‌ನ ಮುಖ್ಯಧ್ಯೇಯವಾಗಿದೆ.

೭. ಸಮಾನ ಸಮಸ್ಯೆಗಳ ಬಗೆಗೆ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಪ್ರತಿಪಾದಿಸಲು ವಿಕಾಶಶೀಲ ರಾಷ್ಟ್ರಗಳ ನಡುವೆ ಸಹಕಾರವನ್ನು ಬಲಪಡಿಸುವುದು.

೮. ತಮ್ಮದೇ ಆದ ಉದ್ದೇಶಗಳನ್ನಿರಿಸಿಕೊಂಡಿರುವ ಅಂತಾರಾಷ್ಟ್ರೀಯ ಸಂಸ್ಥೆಗಳೊಂದಿಗೆ ಸಹಕರಿಸುವುದು.

೯. ಸಾರ್ಕ್ ಪ್ರದೇಶದಲ್ಲಿ ಹೊಸ ಮತ್ತು ಪುನರ್ ನವೀಕರಣಗೊಳ್ಳುವ ಶಕ್ತಿ ಮತ್ತು ಇಂಧನ ಮೂಲಗಳನ್ನು ಪರಸ್ಪರ ಲಾಭಕ್ಕೆ ಅಭಿವೃದ್ಧಿಪಡಿಸುವುದು.

ಸಾರ್ಕ್‌ನ ಕೆಲವು ಶೃಂಗಸಭೆಗಳಲ್ಲಿ ಸಾರ್ಕ್‌ನ ಗುರಿಗಳನ್ನು ಮತ್ತು ಕರ್ತವ್ಯಗಳನ್ನು ಇನ್ನೂ ಹೆಚ್ಚಿಸಲಾಯಿತು. ಅವುಗಳೆಂದರೆ:

**ಢಾಕಾದ ೭ನೇ ಶೃಂಗಸಭೆ ೧೯೯೩ ಏಪ್ರಿಲ್ ೧೦**

೧. ಪರಸ್ಪರ ಆರ್ಥಿಕ ಸಹಕಾರವನ್ನು ಮತ್ತಷ್ಟು ಹೆಚ್ಚಿಸುವ ವಾಗ್ದಾನವನ್ನು ಪುನರುಚ್ಚರಿಸಿ ವಿದೇಶಾಂಗ ಮಂತ್ರಿಗಳು ಸಾಪ್ತಕ್ಕೆ ಸಹಿ ಮಾಡಿದರು. ಸಾರ್ಕ್ ಪ್ರದೇಶದಲ್ಲಿ ಅಂತರ ಪ್ರಾದೇಶಿಕ ವ್ಯಾಪಾರದಲ್ಲಿ ಉದಾರೀಕರಣವನ್ನು ಅನುಸರಿಸಲು ಸಾಪ್ತದ ಅಡಿಯಲ್ಲಿ ತೀರ್ಮಾನಿಸಲಾಯಿತು.

೧. ದಕ್ಷಿಣ ಏಷ್ಯಾದಲ್ಲಿ ಹೆಚ್ಚುತ್ತಿರುವ ಭಯೋತ್ಪಾದನೆ ಹತ್ತಿಕ್ಕಲು ಸಮನ್ವಯ ಕಾರ್ಯ ಚರಣೆಯಲ್ಲಿ ಹೆಚ್ಚಿನ ಸಹಕಾರ ಒದಗಿಸುವುದು.

೨. ಸಾರ್ಕ್ ಸಂಸತ್ ಸದಸ್ಯರ ಮತ್ತು ಸಭಾಪತಿಗಳ ಕೂಟಗಳು ಮತ್ತು ಸಾರ್ಕ್ ಅಭಿವೃದ್ಧಿ ನಿಧಿಯ ಸ್ಥಾಪನೆ.

**ದೆಹಲಿಯ ೮ನೇ ಶೃಂಗಸಭೆ ೧೯೯೫ ಮೇ ೨, ೩ ಮತ್ತು ೪**

೧. ನ್ಯೂಕ್ಲಿಯರ್ ಬಾಂಬನ್ನು ಬಳಸದಿರುವುದು ಮತ್ತು ಬಳಸಲು ಬೆದರಿಕೆ ಒಡ್ಡದಿರುವುದು.

೨. ೨೦೦೨ರ ಒಳಗೆ ಬಡತನವನ್ನು ನಿವಾರಿಸುವುದು ಮತ್ತು ನಿರ್ಗತಿಕರಿಗೆ, ನಿರಾಶ್ರಿತರಿಗೆ ವಸತಿ ಕಲ್ಪಿಸಿಕೊಡುವುದು.

ವಿಶ್ವದ ಜನಸಂಖ್ಯೆಯ ಸುಮಾರು ಐದನೇ ಒಂದು ಭಾಗದಷ್ಟು ಜನರು ಸಾರ್ಕ್ ದೇಶಗಳಲ್ಲಿ ವಾಸಿಸುತ್ತಾರೆ. ವ್ಯಾಪಾರದ ದೃಷ್ಟಿಯಿಂದ ಸಾರ್ಕ್ ವಿಪುಲ ಮಾರುಕಟ್ಟೆಯನ್ನು ಹೊಂದಿದೆ. ಸಾರ್ಕ್ ಸದಸ್ಯ ರಾಷ್ಟ್ರಗಳು ತಮ್ಮೊಳಗಿನ ಭಿನ್ನಾಭಿಪ್ರಾಯ ಅಡೆತಡೆಗಳನ್ನು ತೊಲಗಿಸಿ ಒಗ್ಗಟ್ಟಾಗಿ ನಿಂತರೆ ವಿಶ್ವದ ಆರ್ಥಿಕ ಬೆಳವಣಿಗೆಯಲ್ಲಿ ಒಂದು ಪ್ರಮುಖ ಸ್ಥಾನ ಹೊಂದಬಹುದು, ಸಾರ್ಕ್ ಪ್ರದೇಶದಲ್ಲಿನ ಎಲ್ಲಾ ಸಾಮಾಜಿಕ ಪಿಡುಗುಗಳನ್ನು ಸಹಕಾರ ಮತ್ತು ಒಗ್ಗಟಿನಿಂದ ಹೋಗಲಾಡಿಸುವುದು. ಇದಕ್ಕೆ ಸಾರ್ಕ್ ಒಂದು ಉತ್ತಮ ವೇದಿಕೆಯಾಗ ಬಲ್ಲದು. ವಿದ್ಯುಚ್ಛಕ್ತಿ, ಕೃಷಿ, ಕೈಗಾರಿಕೆಗಳ ಬೆಳವಣಿಗೆಯಲ್ಲಿ ನೂತನ ಅಧ್ಯಾಯ ಪ್ರಾರಂಭಿಸಲು ದಕ್ಷಿಣ ಏಷ್ಯಾ ಪ್ರದೇಶದಲ್ಲಿ ಸಾಕಷ್ಟು ಅವಕಾಶಗಳಿವೆ. ಸಾರ್ಕ್ ರಾಷ್ಟ್ರಗಳು ಆಂತರಿಕ ವೈಮನಸ್ಸುಗಳನ್ನು ಮರೆತು ಮುಕ್ತವಾಗಿ ವ್ಯವಹರಿಸಿದರೆ ಈ ಸಂಘವು ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ಒಂದು ಪ್ರಮುಖ ಪಾತ್ರವಹಿಸುವುದರಲ್ಲಿ ಸಂದೇಹವೇ ಇಲ್ಲ.

**೯.೫ ಸಾರಾಂಶ**

ಆಧುನಿಕ ವಿಶ್ವದಲ್ಲಿ ಭಾರತವು ಕ್ಷಿಪ್ರವಾಗಿ ಬೆಳೆಯುತ್ತಿರುವ ಶಕ್ತಿಯಾಗಿದೆ. ಇದು ವಿಶ್ವ ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ಇಂದು ಮಹತ್ವವಾದ ಸ್ಥಾನವನ್ನು ಪಡೆಯುತ್ತಿದೆ. ಅಂತಾರಾಷ್ಟ್ರೀಯ ರಾಜಕಾರಣವು ವಿಶ್ವದ ಎಲ್ಲಾ ಸಾರ್ವಭೌಮ ರಾಷ್ಟ್ರಗಳು ಒಳಗೊಳ್ಳು ವಂತಹ ರಾಜಕಾರಣವಾಗಿದೆ. ಇದೊಂದು ರೀತಿಯಲ್ಲಿ ಪ್ರತಿಯೊಂದು ರಾಷ್ಟ್ರವೂ ತನ್ನ ರಾಷ್ಟ್ರೀಯ ಹಿತವನ್ನು ರಕ್ಷಿಸಿಕೊಂಡು ಮತ್ತು ವೃದ್ಧಿಸಿಕೊಂಡು ಹೋಗಲು ಹೂಡುವ ಆಟ ಅಥವಾ ಕ್ರೀಡೆಯಾಗಿದೆ. ವಿಶ್ವ ರಾಷ್ಟ್ರಗಳ ಈ ರೀತಿಯ ಅಂತಾರಾಷ್ಟ್ರೀಯ ರಾಜಕಾರಣದ ಕ್ರೀಡೆಗೆ ಪ್ರಮುಖ ವೇದಿಕೆಯಾಗಿದೆ ವಿಶ್ವಸಂಸ್ಥೆ. ಇದು ೧೯೪೫ರಲ್ಲಿ ಅಸ್ತಿತ್ವಕ್ಕೆ ಬಂದಿತು. ಭಾರತವು ಇಂದು ಇದರ ಭದ್ರತಾ ಮಂಡಳಿಯಲ್ಲಿ ಶಾಶ್ವತ ಸದಸ್ಯತ್ವವನ್ನು ಪಡೆಯಲು ಪ್ರಯತ್ನಿಸುವ ಹಂತಕ್ಕೆ ಬಂದು ಮುಟ್ಟಿರುವುದು ನಿಜಕ್ಕೂ ಒಂದು ಸಾಧನೆಯೇ ಸರಿ. ಅಂದರೆ, ಇದುವರೆಗೂ ಇದರ ಸದಸ್ಯತ್ವ ಹೊಂದಿ, ಶಕ್ತ ರಾಷ್ಟ್ರಗಳೆಂದು ಪರಿಗಣಿಸಲ್ಪಟ್ಟಿರುವ

ಅಮೇರಿಕ, ರಷ್ಯಾ, ಫ್ರಾನ್ಸ್, ಇಂಗ್ಲೆಂಡ್ ಮತ್ತು ಚೀನಾಗಳ ಸಾಲಿನಲ್ಲಿ ಇಂದು ಭಾರತವೂ ಸಹ ಬಂದು ನಿಲ್ಲುವ ಹಂತಕ್ಕೆ ಮುಟ್ಟಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಹಾಗೆಯೇ ವಿಶ್ವಸಂಸ್ಥೆಯ ಅಸ್ತಿತ್ವದ ಔಚಿತ್ಯ ಮತ್ತು ಸಾಧನೆಗಳ ಬಗ್ಗೆ ಸಾಕಷ್ಟು ವಾದ ವಿವಾದಗಳಿದ್ದರೂ ಸಹ ಇದು ತನ್ನ ಪ್ರಸ್ತುತೆಯನ್ನು ಇಂದಿಗೂ ಉಳಿಸಿಕೊಂಡಿದೆ. ಮುಖ್ಯವಾಗಿ, ವಿಶ್ವಶಾಂತಿಯನ್ನು ಕಾಪಾಡುವಲ್ಲಿ ಮತ್ತು ಮಹಾಯುದ್ಧಗಳನ್ನು ತಡೆಗಟ್ಟುವಲ್ಲಿ ಸಂಪೂರ್ಣವಾಗಿ ವಿಫಲವಾಗಿಯೇನೂ ಇಲ್ಲ. ಇತ್ತೀಚಿನ ವರದಿಗಳ ಪ್ರಕಾರ ವಿಶ್ವ ಸಂಸ್ಥೆಯಲ್ಲಿ ಸುಮಾರು ೧೯೦ ರಾಷ್ಟ್ರಗಳು ಸದಸ್ಯತ್ವವನ್ನು ಪಡೆದಿವೆ. ಇದರಿಂದ ತಿಳಿಯುವ ಅಂಶವೆಂದರೆ ವಿಶ್ವದ ಸಮಸ್ತ ರಾಷ್ಟ್ರಗಳು ವಿಶ್ವಸಂಸ್ಥೆಯ ಅಸ್ತಿತ್ವಕ್ಕೆ ತಮ್ಮ ಬೆಂಬಲವನ್ನು ನೀಡುತ್ತಿವೆ. ಭಾರತದ ವಿದೇಶಾಂಗ ನೀತಿಯೂ ಸಹ ಇದಕ್ಕೆ ಪೂರಕವಾದ ತತ್ವಗಳನ್ನೇ ಹೊಂದಿದೆ.

### ೯.೬ ಪಾರಿಭಾಷಿಕ ಪದಕೋಶ

೧. International Relations - ಅಂತಾರಾಷ್ಟ್ರೀಯ ಸಂಬಂಧಗಳು
೨. International Politics - ಅಂತಾರಾಷ್ಟ್ರೀಯ ರಾಜಕಾರಣ
೩. United Nations Organisation - ವಿಶ್ವಸಂಸ್ಥೆ
೪. International Court Justice - ಅಂತಾರಾಷ್ಟ್ರೀಯ ನ್ಯಾಯಾಲಯ
೫. Foreign Policy - ವಿದೇಶಾಂಗ ನೀತಿ
೬. Non-alignment - ಅಲಿಪ್ತನೀತಿ
೭. Human Rights - ಮಾನವ ಹಕ್ಕುಗಳು
೮. General Assembly - ಸಾಮಾನ್ಯ ಸಭೆ
೯. Security Council - ಭದ್ರತಾ ಮಂಡಳಿ
೧೦. Economic and Social Council - ಆರ್ಥಿಕ ಮತ್ತು ಸಾಮಾಜಿಕ ಮಂಡಳಿ
೧೧. Veto Power - ನಕಾರಾತ್ಮಕ ಅಧಿಕಾರ
೧೨. Resolutions - ಶಾಸನಗಳು

### ೯.೭ ಪ್ರಶ್ನೆಗಳು

#### ಅ. ಒಂದು ಅಂಕದ ಪ್ರಶ್ನೆಗಳು

೧. ಅಂತಾರಾಷ್ಟ್ರೀಯ ರಾಜಕಾರಣ ಎಂದರೇನು?
೨. ಅಂತಾರಾಷ್ಟ್ರೀಯ ಸಂಬಂಧ ಎಂದರೇನು?
೩. ಮಾರ್ಗಿಂಥೋರವರ ಅಂತಾರಾಷ್ಟ್ರೀಯ ರಾಜಕಾರಣದ ವ್ಯಾಖ್ಯಾನವನ್ನು ಬರೆಯಿರಿ.
೪. ವಿಶ್ವಸಂಸ್ಥೆ ಅಸ್ತಿತ್ವಕ್ಕೆ ಬಂದ ವರ್ಷ ಯಾವುದು?
೫. ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳೆಷ್ಟು?

೬. ಸುಯೇಜ್ ಬಿಕ್ಕಟ್ಟು ಸಂಭವಿಸಿದ ವರ್ಷಯಾವುದು?
೭. ವಿಶ್ವಸಂಸ್ಥೆಯ ಅಂತಾರಾಷ್ಟ್ರೀಯ ನ್ಯಾಯಾಲಯವನ್ನು ಎಲ್ಲಿ ಸ್ಥಾಪಿಸಲಾಯಿತು?
೮. ವಿಶ್ವ ಆರೋಗ್ಯ ಸಂಸ್ಥೆಯ ಪ್ರಮುಖ ಕಾರ್ಯಗಳೇನು?
೯. ಅಲಿಪ್ತನೀತಿ ಎಂದರೇನು?
೧೦. ವಿದೇಶಾಂಗ ನೀತಿ ಎಂದರೇನು?
೧೧. ಸಾರ್ಕ್ ಯಾವ ವರ್ಷದಲ್ಲಿ ಜಾರಿಗೆ ಬಂದಿತು?
೧೨. ಸಾರ್ಕ್‌ನ ಕೇಂದ್ರ ಕಛೇರಿ ಎಲ್ಲಿದೆ?
೧೩. ಸಾರ್ಕ್‌ನ ಪ್ರಥಮ ಅಧಿವೇಶನ ಎಲ್ಲಿ ಜರುಗಿತು?
೧೪. ಸಾರ್ಕ್‌ನ ಸದಸ್ಯ ರಾಷ್ಟ್ರಗಳು ಎಷ್ಟು?
೧೫. ಸಾರ್ಕ್‌ನ ನಾಯಕತ್ವವನ್ನು ಯಾವ ರಾಷ್ಟ್ರವಹಿಸಿಕೊಂಡಿದೆ?

**ಆ. ಎರಡು ಅಂಕಗಳ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣವನ್ನು ಯಾವುದಾದರೂ ಎರಡು ವ್ಯಾಖ್ಯಾನಗಳ ಮೂಲಕ ವಿವರಿಸಿ.
೨. ಅಂತಾರಾಷ್ಟ್ರೀಯ ರಾಜಕಾರಣದ ಎರಡು ಮಹತ್ವವನ್ನು ಹೆಸರಿಸಿ.
೩. ವಿಶ್ವಸಂಸ್ಥೆಯ ಪ್ರಮುಖ ಉದ್ದೇಶವನ್ನು ತಿಳಿಸಿ.
೪. ನಿಶ್ಯಸ್ತ್ರೀಕರಣ ಎಂದರೇನು?
೫. ಸಾಮಾಜಿಕ ಮತ್ತು ಆರ್ಥಿಕ ಮಂಡಳಿಯ ಪ್ರಮುಖ ಕಾರ್ಯ ಯಾವುದು?
೬. ವಿಟೋ ಅಧಿಕಾರ ಹೊಂದಿರುವ ರಾಷ್ಟ್ರಗಳಾವುವು?
೭. ವಿಶ್ವಸಂಸ್ಥೆಯ ಶಾಸನಗಳನ್ನು ಎಲ್ಲಿ ರಚಿಸಲಾಗುತ್ತದೆ?
೮. ಭಾರತದ ವಿದೇಶಾಂಗ ನೀತಿಯ ನಾಲ್ಕು ತತ್ವಗಳನ್ನು ಹೆಸರಿಸಿ?
೯. ಪಂಚಶೀಲ ತತ್ವಗಳನ್ನು ಹೆಸರಿಸಿ?
೧೦. ವಿಶ್ವದಲ್ಲಿದ್ದ ಎರಡು ಪ್ರಮುಕ ಶಕ್ತಿಶಾಲಿ ಬಣಗಳಾವುವು?
೧೧. ಸಾರ್ಕ್ ಸ್ಥಾಪಿತವಾದ ವರ್ಷ ಯಾವುದು ಮತ್ತು ಅದರ ಸ್ಥಾಪನೆಗೆ ಕಾರಣಕರ್ತರಾದ ಭಾರತದ ಪ್ರಧಾನಮಂತ್ರಿ ಯಾರು?
೧೨. ಸಾರ್ಕ್‌ನ ಯಾವುದಾದರೂ ಎರಡು ಉದ್ದೇಶಗಳನ್ನು ತಿಳಿಸಿ.
೧೩. ಸಾರ್ಕ್‌ನ ದೆಹಲಿ ಶೃಂಗಸಭೆಯ ಘೋಷಣೆಗಳನ್ನು ತಿಳಿಸಿ.

**ಇ. ಐದು ಅಂಕದ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣದ ಅರ್ಥವನ್ನು ವ್ಯಾಖ್ಯಾನಗಳ ಮೂಲಕ ವಿವರಿಸಿ.
೨. ಅಂತಾರಾಷ್ಟ್ರೀಯ ರಾಜಕಾರಣದ ಮಹತ್ವವನ್ನು ವಿವರಿಸಿ.
೩. ವಿಶ್ವಸಂಸ್ಥೆಯ ಗುಣಗಳನ್ನು ವಿವರಿಸಿ.

೪. ವಿಶ್ವಸಂಸ್ಥೆಯ ದೋಷಗಳನ್ನು ವಿವರಿಸಿ.

೫. ಅಲಿಪ್ತನೀತಿಯನ್ನು ವಿವರಿಸಿ.

೬. ಪಂಚಶೀಲ ತತ್ವವನ್ನು ವಿವರಿಸಿ.

೭. ಭಾರತ ಮತ್ತು ಕಾಮನ್‌ವೆಲ್ತ್‌ನ ಸಂಬಂಧವನ್ನು ವಿವರಿಸಿ.

೮. ಸಾರ್ಕ್‌ನ ಪ್ರಮುಖ ಉದ್ದೇಶ ಮತ್ತು ಗುರಿಗಳನ್ನು ತಿಳಿಸಿ.

೯. ಸಾರ್ಕ್‌ನ ೭ನೇ ಮತ್ತು ೮ನೇ ಶೃಂಗಸಭೆಯ ಘೋಷಣೆಗಳನ್ನು ವಿವರಿಸಿ.

**ಈ. ಹತ್ತು ಅಂಕದ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣದ ಅರ್ಥ ಮತ್ತು ಮಹತ್ವವನ್ನು ವಿವರಿಸಿ.

೨. ವಿಶ್ವಸಂಸ್ಥೆಯ ಗುಣ ಮತ್ತು ದೋಷಗಳನ್ನು ವಿವರಿಸಿ.

೩. ಭಾರತದ ವಿದೇಶಾಂಗ ನೀತಿಯ ಪ್ರಮುಖ ತತ್ವಗಳನ್ನು ವಿವರಿಸಿ.

೪. ಸಾರ್ಕ್‌ನ ಪ್ರಮುಖ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿ.

೫. ಭಾರತವು ಏಷ್ಯಾ ರಾಷ್ಟ್ರಗಳ ಬಗ್ಗೆ ಹೊಂದಿರುವ ವಿಶೇಷ ಕಾಳಜಿಯ ಬಗ್ಗೆ ವಿವರಿಸಿ.

**ಉ. ಅಭ್ಯಾಸ ಚಟುವಟಿಕೆಗಳು**

೧. ಭಾರತವು ಜಾಗತಿಕ ಮಟ್ಟದಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿದೆಯೇ? ಚರ್ಚಿಸಿ.

೨. ವಿಶ್ವಸಂಸ್ಥೆಯ ಪ್ರಮುಖ ಅಂಗಸಂಸ್ಥೆಗಳನ್ನು ಪಟ್ಟಿಮಾಡಿ ಅದರ ಕಾರ್ಯಗಳನ್ನು ವಿವರಿಸಿ.

೩. ಭಾರತದ ವಿದೇಶಾಂಗ ನಿತಿಯ ಸಫಲತೆ ಮತ್ತು ವಿಫಲತೆಗಳನ್ನು ಚರ್ಚಿಸಿ.

೪. ಸಾರ್ಕ್‌ನ ಅಭಿವೃದ್ಧಿಯಲ್ಲಿ ಭಾರತದ ಪಾತ್ರವನ್ನು ವಿವರಿಸಿ.

## ಅನುಬಂಧ ೧

# ರಾಜ್ಯಶಾಸ್ತ್ರ

### ೧. ರಾಜ್ಯಶಾಸ್ತ್ರವನ್ನೇಕೆ ಅಧ್ಯಯನ ಮಾಡಬೇಕು?

ಪ್ರತಿಯೊಬ್ಬ ವ್ಯಕ್ತಿಯು ಬದುಕುವುದು ಮತ್ತು ಬೆಳೆಯುವುದು ಸಮಾಜದಲ್ಲಿ ಎಂಬುದು ಎಲ್ಲರಿಗೂ ತಿಳಿದಿದೆ. ರಾಜಕೀಯ ಚಟುವಟಿಕೆಗಳು ಸಾಮಾಜಿಕ ಬದುಕಿನ ಅವಿಭಾಜ್ಯ ಹಾಗೂ ನಿರ್ಣಾಯಕ ಭಾಗಗಳಾಗಿವೆ. ರಾಜಕಾರಣದ ಸ್ವರೂಪ ಹಾಗೂ ದಿಶೆಗಳು ವ್ಯಕ್ತಿಯ ನೆಲೆಯನ್ನು ಮತ್ತು ರಾಷ್ಟ್ರದ ಭವಿಷ್ಯವನ್ನು ರೂಪಿಸುತ್ತವೆ. ರಾಜಕಾರಣದ ಉದ್ದೇಶವು ಮೂಲತಃ ನ್ಯಾಯಬದ್ಧ ಹಾಗೂ ಮಾನವೀಯ ಸಮಾಜವನ್ನು ಕಟ್ಟುವುದಾಗಿದೆ. ರಾಜಕಾರಣದ ವಿವಿಧ ಅಂಶಗಳನ್ನು, ಅಂದರೆ ಪ್ರಭುತ್ವ, ರಾಜ್ಯ, ಸರ್ಕಾರ, ಆಡಳಿತ ಮತ್ತು ರಾಜಕಾರಣಕ್ಕೆ ಸಂಬಂಧಿಸಿದ ಸಂಸ್ಥೆಗಳನ್ನು ಕುರಿತಂತೆ ಅಧ್ಯಯನ ಮಾಡುವ ಶಿಸ್ತು ರಾಜ್ಯಶಾಸ್ತ್ರ. ಪದವಿ ಪೂರ್ವ ಶಿಕ್ಷಣದ ಮಟ್ಟದಲ್ಲಿ ರಾಜ್ಯಶಾಸ್ತ್ರದ ಅಧ್ಯಯನ ಉದ್ದೇಶಗಳು ಹೀಗಿವೆ;

- ರಾಜಾಕಾರಣಕ್ಕೆ ಸಂಬಂಧಿಸಿದ ಪರಿಕಲ್ಪನೆಗಳು, ಸಿದ್ಧಾಂತಗಳು ಹಾಗೂ ಅದರ ಆಚರಣೆ ಕುರಿತಂತೆ ಆಸಕ್ತಿ ಮೂಡಿಸುವುದು.
- ರಾಜ್ಯಶಾಸ್ತ್ರವೆಂಬ ಅಧ್ಯಯನ ಶಿಸ್ತಿಗೆ ಸಂಬಂಧಿಸಿದಂತೆ ಬೆಳೆಯುತ್ತಿರುವ ಸಂಗತಿಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು.
- ಭಾರತದ ಸಂವಿಧಾನ, ಅದರ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳು ಹಾಗೂ ಸಂಸ್ಥೆಗಳನ್ನು ಪರಿಚಯಿಸುವುದು.
- ನಾಗರಿಕ ಪ್ರಜ್ಞೆಯನ್ನು ಬೆಳೆಸುವುದು ಮತ್ತು ಆರೋಗ್ಯಕರ ನಾಗರಿಕ ಹಾಗೂ ರಾಜಕೀಯ ಜೀವನ ರೂಪಿಸಲು ಅಗತ್ಯವಾದ ಮೌಲ್ಯಗಳು ಹಾಗೂ ಮನೋಭಾವವನ್ನು ರೂಢಿಸುವುದಕ್ಕೆ ಪ್ರಯತ್ನಿಸುವುದು.
- ಜಾಗತಿಕ ಮಟ್ಟದಲ್ಲಿ ಉಂಟಾಗುತ್ತಿರುವ ರಾಜಕೀಯ ಬೆಳವಣಿಗೆಯನ್ನು ವಿದ್ಯಾರ್ಥಿಗಳಿಗೆ ತಿಳಿಸುವುದು ಮತ್ತು ಅದು ನಾಗರಿಕರ ಬದುಕಿನ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳನ್ನು ಅರಿತುಕೊಳ್ಳುವುದು.
- ಒಟ್ಟಾರೆ, ಜಾಗತಿಕ ಮತ್ತು ಸ್ಥಳೀಯ ಸಂದರ್ಭದಲ್ಲಿ ಭಾರತದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶಕ್ಕೆ ವಿದ್ಯಾರ್ಥಿಗಳು ಸ್ಪಂದಿಸುವಂತೆ ಮಾಡುವುದು.
- ಪ್ರಜಾಪ್ರಭುತ್ವದ ನಿಯಮಗಳು, ಮೌಲ್ಯಗಳು ಹಾಗೂ ಉಪಯುಕ್ತತೆಗಳನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳುವಂತೆ ಮಾಡುವುದು.

ಭಾರತದ ಪ್ರಧಾನ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು.

ಸಾತ್ವಿಕ ಪೌರತ್ವದ ಮೌಲ್ಯದ ಬಗ್ಗೆ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡುವಂತೆ ಮಾಡುವುದು.

**ನಿರ್ದಿಷ್ಟ ಗುರಿಗಳು**

ಜ್ಞಾನ, ಕುಶಲತೆ, ಅನ್ವಯಿಕ ಸಾಮರ್ಥ್ಯ ಮತ್ತು ಅಧ್ಯಯನ ಶಾಸ್ತ್ರದ ಬಗ್ಗೆ ಮತ್ತು ಸಮಾಜದ ಬಗ್ಗೆ ಮನೋಭಾವ ಇವುಗಳನ್ನು ಅನುಲಕ್ಷಿಸಿ

ಅ. ಜ್ಞಾನ

ಭಾರತಕ್ಕೆ ನಿರ್ದಿಷ್ಟವಾಗಿ ಸಂಬಂಧಿಸಿದಂತೆ ರಾಜಕೀಯ ಪ್ರಕ್ರಿಯೆಗಳು ಹಾಗೂ ವಿಚಾರಗಳ ಬಗ್ಗೆ ಒಟ್ಟಾರೆ ತಿಳುವಳಿಕೆ ಸಂಪಾದಿಸುವುದು.

ಭಾರತದ ರಾಜಕೀಯ ಸಂಸ್ಥೆಗಳ ಕಾರ್ಯಾಚರಣೆ ಬಗ್ಗೆ ತಿಳುವಳಿಕೆ ಪಡೆಯುವುದು.

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶ ಹಾಗೂ ಭಾರತೀಯ ರಾಜಕೀಯ ವ್ಯವಸ್ಥೆಯ ಮುಂದಿರುವ ಸವಾಲುಗಳ ಬಗ್ಗೆ ಅರಿವನ್ನು ಗಳಿಸಿಕೊಳ್ಳುವುದು.

ಆ. ಕುಶಲತೆ

ಭಾರತಕ್ಕೆ ಸಂಬಂಧಿಸಿದ ಪ್ರಧಾನ ರಾಜಕೀಯ ಬೆಳವಣಿಗೆಗಳನ್ನು ಮತ್ತು ಪ್ರಕ್ರಿಯೆಗಳನ್ನು ವಿವರಿಸುವ ಮತ್ತು ವಿಶ್ಲೇಷಿಸುವ ಸಾಮರ್ಥ್ಯಗಳಿಸಿಕೊಳ್ಳುವುದು.

ಇ. ಅನ್ವಯಿಕ ಸಾಮರ್ಥ್ಯ

ರಾಜಕೀಯ ಪ್ರಕ್ರಿಯೆ ಮತ್ತು ಸಂಸ್ಥೆಗಳಿಗೆ ಸಂಬಂಧಿಸಿದ ಸೈದ್ಧಾಂತಿಕ ಅಧ್ಯಯನಗಳ ಚೌಕಟ್ಟಿನಲ್ಲಿ ರಾಜಕೀಯ ಘಟನಾವಳಿಗಳನ್ನು ಜಾಗತಿಕ ಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಹಾಗೂ ಸ್ಥಳೀಯ ಮಟ್ಟದಲ್ಲಿ ವ್ಯಾಖ್ಯಾನಿಸುವುದು ಮತ್ತು ವಿಶ್ಲೇಷಿಸುವ ಗುಣವನ್ನು ಗಳಿಸಿಕೊಳ್ಳುವುದು.

ಇವತ್ತಿನ ಸಾಮಾಜಿಕ ಸಂದರ್ಭದಲ್ಲಿ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡು ನಾಗರಿಕ ಹಕ್ಕು ಹಾಗೂ ಕರ್ತವ್ಯಗಳ ಸಂಬಂಧವನ್ನು ಗ್ರಹಿಸುವ ಪ್ರಯತ್ನ ನಡೆಸುವುದು.

ಈ. ಸಮಾಜ ಹಾಗೂ ಅಧ್ಯಯನ ವಿಷಯದ ಬಗ್ಗೆ ಮನೋಭಾವ

ರಾಜಕಾರಣ ಹಾಗೂ ರಾಜಕೀಯ ಪ್ರಕ್ರಿಯೆಗಳ ಬಗ್ಗೆ ಇತ್ಯಾತ್ಮಕ ಹಾಗೂ ವಾಸ್ತವಿಕ ದೃಷ್ಟಿಕೋನವನ್ನು ಬೆಳೆಸುವುದು.

ಜಾಗತಿಕ, ರಾಷ್ಟ್ರೀಯ ಹಾಗೂ ಸ್ಥಳೀಯ ಮಟ್ಟದಲ್ಲಿನ ಸಾಮಾಜಿಕ ಮತ್ತು ರಾಜಕೀಯ ವಸ್ತುಸ್ಥಿತಿಯ ಬಗ್ಗೆ ಪ್ರತಿಸ್ಪಂದಿಸುವುದು.

ತಿಳಿವಳಿಕೆಯುಳ್ಳ ಹಾಗೂ ಪ್ರಜ್ಞಾವಂತ ನಾಗರಿಕನಾಗುವುದು.

ನಾಗರಿಕರ ಹಕ್ಕುಗಳ ಹಾಗೂ ಕರ್ತವ್ಯಗಳ ಬಗ್ಗೆ ಹೆಚ್ಚು ಅರಿತವರಾಗುವುದು.

## ಅನುಬಂಧ ೨

# ಅಧ್ಯಾಪಕರಿಗೆ ವಿಸ್ತೃತವಾದ ಮಾರ್ಗಸೂಚಿ

ಈ ಹೊಸ ಪಠ್ಯಕ್ರಮವು ತನ್ನಷ್ಟಕ್ಕೆ ತಾನೇ ಅರ್ಥವಾಗುವಂತಿದೆ. ಇಡೀ ಪತ್ರಿಕೆಯ ಉದ್ದೇಶಗಳನ್ನು ಹಾಗೂ ಪ್ರತಿ ಅಧ್ಯಾಯದ ಧ್ಯೇಯಗಳನ್ನು ವಿವರವಾಗಿ ಇಲ್ಲಿ ನೀಡಲಾಗಿದೆ. ಈ ವಿಷಯವನ್ನು ಬೋಧಿಸುವಾಗ ಅಧ್ಯಾಪಕರು ಇದನ್ನು ಗಮನಿಸಬೇಕು. ಈ ಜ್ಞಾನ ಶಿಸ್ತಿಗೆ ಮತ್ತು ಅದರ ಪ್ರಾಯೋಗಿಕ ಅನ್ವಯಕ್ಕೆ ಸಂಬಂಧಿಸಿದ ಪ್ರಧಾನ ಪರಿಭಾವನೆಗಳಿಗೆ ಪ್ರವೇಶವನ್ನು ಕಲಿಯುವವರಿಗೆ ಒದಗಿಸುವುದು ಪ್ರಸ್ತುತ ವಿಷಯದ ಗುರಿಯಾಗಿದೆ. ಪ್ರತಿ ಘಟಕ ಮತ್ತು ಉಪ ಘಟಕಗಳಿಗೆ ನೀಡಿರುವ ಸಮಯಾವಧಿಯ ಆಧಾರದ ಮೇಲೆ ಅದರ ವ್ಯಾಪ್ತಿಯನ್ನು ತಿಳಿಯಬಹುದು. ಪ್ರಧಾನ ಪರಿಭಾವನೆಗಳನ್ನು ವಿವರಿಸುವಾಗ ಭಾರತಕ್ಕೆ ಸಂಬಂಧಿಸಿದ ನಿರ್ದಿಷ್ಟ ಉದಾಹರಣೆಗಳನ್ನು ನೀಡಬೇಕು. ವಿವಿಧ ಘಟಕಗಳನ್ನು ಬೋಧಿಸುವಾಗ ಸಮಕಾಲೀನ ಬೆಳವಣಿಗೆಗಳನ್ನು ನಿದರ್ಶನವಾಗಿ ತೆಗೆದುಕೊಳ್ಳುವುದು ಸೂಕ್ತ. ಕಲಿಯುಪವರನ್ನು ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ಪಠ್ಯಕ್ರಮವನ್ನು ರೂಪಿಸಿರುವುದರಿಂದ ಅಧ್ಯಾಪಕರು ಬೋಧನೆಯಲ್ಲಿ ಸೃಜನಶೀಲ ವಿಧಾನಗಳನ್ನು ಅಳವಡಿಸಿಕೊಳ್ಳಲು ವಿಪುಲ ಅವಕಾಶವಿದೆ. ಪ್ರತಿ ಘಟಕಕ್ಕೆ ಸಂಬಂಧಿಸಿದಂತೆ ಕ್ರಿಯಾಶೀಲ ಕಲಿಕಾ ಸಾಧನಗಳ ಬಗ್ಗೆ ವಿವರಣೆ ನೀಡಲಾಗಿದೆ. ಇವೆಲ್ಲವೂ ಕೇವಲ ಸೂಚನಾತ್ಮಕ ಸಂಗತಿಗಳು. ಅವುಗಳನ್ನು ಸೃಜನಶೀಲವಾಗಿ ಬಳಸಬಹುದು ಅಥವಾ ಸ್ಥಳೀಯ ಅಗತ್ಯ ಹಾಗೂ ಸನ್ನಿವೇಶಕ್ಕೆ ಸೂಕ್ತವಾಗುವಂತೆ ಬದಲಾಯಿಸಿಕೊಳ್ಳಬಹುದು.

ಅಧ್ಯಯನ ಯೋಜನೆಗಳು ಮತ್ತು ಹೊಣೆಗಳು ಕಡ್ಡಾಯ. ಇವುಗಳ ಮೌಲ್ಯಮಾಪನಕ್ಕೆ ಬೇಕಾದ ವಿವರಗಳನ್ನು ನಿರ್ದಿಷ್ಟ ಪಡಿಸಿದ ನಮೂನೆಗಳಲ್ಲಿ ನೀಡಲಾಗಿದೆ. ಈ ನಿಯಮವನ್ನು ಕ್ರಮಬದ್ಧವಾಗಿ ಪಾಲಿಸಬೇಕು.

ಅನುಬಂಧದಲ್ಲಿ ನೀಡಿರುವ ಗ್ರಂಥಗಳ ಪಟ್ಟಿಯು ಕೇವಲ ಸೂಚನಾತ್ಮಕವಾದುದು. ಹೊಸದಾಗಿ ಪ್ರಕಟವಾಗಿರುವ ಗ್ರಂಥಗಳಿಂದ ಅಧ್ಯಾಪಕರು ಮಾಹಿತಿಯನ್ನು ಅವಶ್ಯ ಪಡೆದುಕೊಳ್ಳಬಹುದು. ವಾರ್ಷಿಕಗಳು ಹಾಗೂ ವಿಶ್ವಕೋಶಗಳನ್ನು ಬಳಸಬಹುದು. ಇಲ್ಲಿ ನೀಡಿರುವ ವೆಬ್‌ಸೈಟ್‌ಗಳು ತುಂಬಾ ಉಪಯುಕ್ತವಾದ ಮಾಹಿತಿಯ ಆಕರಗಳಾಗಿವೆ.

ಈ ಭಾಗದಲ್ಲಿ ನೀಡಿರುವ ಮೌಲ್ಯಮಾಪನ ಮಾದರಿಯನ್ನು ಅಧ್ಯಾಪಕರು ವಿಷಯವನ್ನು ಬೋಧಿಸುವಾಗ ಗಮನದಲ್ಲಿರಿಸಿಕೊಳ್ಳಬೇಕು. ವಿಷಯದ ಮಹತ್ವ, ಅದಕ್ಕೆ ನಿಗದಿಪಡಿಸಿರುವ ಅಂಶಗಳು ಮತ್ತು ಅವುಗಳಿಗೆ ನಿಗದಿಪಡಿಸಿರುವ ಬೋಧನಾವಧಿಗಳ ನಡುವೆ ಸ್ಪಷ್ಟವಾದ ಸಂಬಂಧವಿದೆ. ಇದನ್ನು ವಿದ್ಯಾರ್ಥಿಗಳ ಗಮನಕ್ಕೆ ತರುವುದು ಲೇಸು.

ಅಮೇರಿಕ, ರಷ್ಯಾ, ಫ್ರಾನ್ಸ್, ಇಂಗ್ಲೆಂಡ್ ಮತ್ತು ಚೀನಾಗಳ ಸಾಲಿನಲ್ಲಿ ಇಂದು ಭಾರತವೂ ಸಹ ಬಂದು ನಿಲ್ಲುವ ಹಂತಕ್ಕೆ ಮುಟ್ಟಿದೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

ಹಾಗೆಯೇ ವಿಶ್ವಸಂಸ್ಥೆಯ ಅಸ್ತಿತ್ವದ ಔಚಿತ್ಯ ಮತ್ತು ಸಾಧನೆಗಳ ಬಗ್ಗೆ ಸಾಕಷ್ಟು ವಾದ ವಿವಾದಗಳಿದ್ದರೂ ಸಹ ಇದು ತನ್ನ ಪ್ರಸ್ತುತೆಯನ್ನು ಇಂದಿಗೂ ಉಳಿಸಿಕೊಂಡಿದೆ. ಮುಖ್ಯವಾಗಿ, ವಿಶ್ವಶಾಂತಿಯನ್ನು ಕಾಪಾಡುವಲ್ಲಿ ಮತ್ತು ಮಹಾಯುದ್ಧಗಳನ್ನು ತಡೆಗಟ್ಟು ವಲ್ಲಿ ಸಂಪೂರ್ಣವಾಗಿ ವಿಫಲವಾಗಿಯೇನೂ ಇಲ್ಲ. ಇತ್ತೀಚಿನ ವರದಿಗಳ ಪ್ರಕಾರ ವಿಶ್ವ ಸಂಸ್ಥೆಯಲ್ಲಿ ಸುಮಾರು ೧೯೦ ರಾಷ್ಟ್ರಗಳು ಸದಸ್ಯತ್ವವನ್ನು ಪಡೆದಿವೆ. ಇದರಿಂದ ತಿಳಿಯುವ ಅಂಶವೆಂದರೆ ವಿಶ್ವದ ಸಮಸ್ತ ರಾಷ್ಟ್ರಗಳು ವಿಶ್ವಸಂಸ್ಥೆಯ ಅಸ್ತಿತ್ವಕ್ಕೆ ತಮ್ಮ ಬೆಂಬಲವನ್ನು ನೀಡುತ್ತಿವೆ. ಭಾರತದ ವಿದೇಶಾಂಗ ನೀತಿಯೂ ಸಹ ಇದಕ್ಕೆ ಪೂರಕವಾದ ತತ್ವಗಳನ್ನೇ ಹೊಂದಿದೆ.

### ೯.೬ ಪಾರಿಭಾಷಿಕ ಪದಕೋಶ

೧. International Relations - ಅಂತಾರಾಷ್ಟ್ರೀಯ ಸಂಬಂಧಗಳು
೨. International Politics - ಅಂತಾರಾಷ್ಟ್ರೀಯ ರಾಜಕಾರಣ
೩. United Nations Organisation - ವಿಶ್ವಸಂಸ್ಥೆ
೪. International Court Justice - ಅಂತಾರಾಷ್ಟ್ರೀಯ ನ್ಯಾಯಾಲಯ
೫. Foreign Policy - ವಿದೇಶಾಂಗ ನೀತಿ
೬. Non-alignment - ಅಲಿಪ್ತನೀತಿ
೭. Human Rights - ಮಾನವ ಹಕ್ಕುಗಳು
೮. General Assembly - ಸಾಮಾನ್ಯ ಸಭೆ
೯. Security Council - ಭದ್ರತಾ ಮಂಡಳಿ
೧೦. Economic and Social Council - ಆರ್ಥಿಕ ಮತ್ತು ಸಾಮಾಜಿಕ ಮಂಡಳಿ
೧೧. Veto Power - ನಕಾರಾತ್ಮಕ ಅಧಿಕಾರ
೧೨. Resolutions - ಶಾಸನಗಳು

### ೯.೭ ಪ್ರಶ್ನೆಗಳು

### ಅ. ಒಂದು ಅಂಕದ ಪ್ರಶ್ನೆಗಳು

೧. ಅಂತಾರಾಷ್ಟ್ರೀಯ ರಾಜಕಾರಣ ಎಂದರೇನು?
೨. ಅಂತಾರಾಷ್ಟ್ರೀಯ ಸಂಬಂಧ ಎಂದರೇನು?
೩. ಮಾರ್ಗಿಂಥೋರವರ ಅಂತಾರಾಷ್ಟ್ರೀಯ ರಾಜಕಾರಣದ ವ್ಯಾಖ್ಯಾನವನ್ನು ಬರೆಯಿರಿ.
೪. ವಿಶ್ವಸಂಸ್ಥೆ ಅಸ್ತಿತ್ವಕ್ಕೆ ಬಂದ ವರ್ಷ ಯಾವುದು?
೫. ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳೆಷ್ಟು?

೬. ಸುಯೇಜ್ ಬಿಕ್ಕಟ್ಟು ಸಂಭವಿಸಿದ ವರ್ಷಯಾವುದು?
೭. ವಿಶ್ವಸಂಸ್ಥೆಯ ಅಂತಾರಾಷ್ಟ್ರೀಯ ನ್ಯಾಯಾಲಯವನ್ನು ಎಲ್ಲಿ ಸ್ಥಾಪಿಸಲಾಯಿತು?
೮. ವಿಶ್ವ ಆರೋಗ್ಯ ಸಂಸ್ಥೆಯ ಪ್ರಮುಖ ಕಾರ್ಯಗಳೇನು?
೯. ಅಲಿಪ್ತನೀತಿ ಎಂದರೇನು?
೧೦. ವಿದೇಶಾಂಗ ನೀತಿ ಎಂದರೇನು?
೧೧. ಸಾರ್ಕ್ ಯಾವ ವರ್ಷದಲ್ಲಿ ಜಾರಿಗೆ ಬಂದಿತು?
೧೨. ಸಾರ್ಕ್‌ನ ಕೇಂದ್ರ ಕಛೇರಿ ಎಲ್ಲಿದೆ?
೧೩. ಸಾರ್ಕ್‌ನ ಪ್ರಥಮ ಅಧಿವೇಶನ ಎಲ್ಲಿ ಜರುಗಿತು?
೧೪. ಸಾರ್ಕ್‌ನ ಸದಸ್ಯ ರಾಷ್ಟ್ರಗಳು ಎಷ್ಟು?
೧೫. ಸಾರ್ಕ್‌ನ ನಾಯಕತ್ವವನ್ನು ಯಾವ ರಾಷ್ಟ್ರವಹಿಸಿಕೊಂಡಿದೆ?

**ಆ. ಎರಡು ಅಂಕಗಳ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣವನ್ನು ಯಾವುದಾದರೂ ಎರಡು ವ್ಯಾಖ್ಯಾನಗಳ ಮೂಲಕ ವಿವರಿಸಿ.
೨. ಅಂತಾರಾಷ್ಟ್ರೀಯ ರಾಜಕಾರಣದ ಎರಡು ಮಹತ್ವವನ್ನು ಹೆಸರಿಸಿ.
೩. ವಿಶ್ವಸಂಸ್ಥೆಯ ಪ್ರಮುಖ ಉದ್ದೇಶವನ್ನು ತಿಳಿಸಿ.
೪. ನಿಶ್ಯಸ್ತ್ರೀಕರಣ ಎಂದರೇನು?
೫. ಸಾಮಾಜಿಕ ಮತ್ತು ಆರ್ಥಿಕ ಮಂಡಳಿಯ ಪ್ರಮುಖ ಕಾರ್ಯ ಯಾವುದು?
೬. ವಿಟೋ ಅಧಿಕಾರ ಹೊಂದಿರುವ ರಾಷ್ಟ್ರಗಳಾವುವು?
೭. ವಿಶ್ವಸಂಸ್ಥೆಯ ಶಾಸನಗಳನ್ನು ಎಲ್ಲಿ ರಚಿಸಲಾಗುತ್ತದೆ?
೮. ಭಾರತದ ವಿದೇಶಾಂಗ ನೀತಿಯ ನಾಲ್ಕು ತತ್ವಗಳನ್ನು ಹೆಸರಿಸಿ?
೯. ಪಂಚಶೀಲ ತತ್ವಗಳನ್ನು ಹೆಸರಿಸಿ?
೧೦. ವಿಶ್ವದಲ್ಲಿದ್ದ ಎರಡು ಪ್ರಮುಕ ಶಕ್ತಿಶಾಲಿ ಬಣಗಳಾವುವು?
೧೧. ಸಾರ್ಕ್ ಸ್ಥಾಪಿತವಾದ ವರ್ಷ ಯಾವುದು ಮತ್ತು ಅದರ ಸ್ಥಾಪನೆಗೆ ಕಾರಣಕರ್ತರಾದ ಭಾರತದ ಪ್ರಧಾನಮಂತ್ರಿ ಯಾರು?
೧೨. ಸಾರ್ಕ್‌ನ ಯಾವುದಾದರೂ ಎರಡು ಉದ್ದೇಶಗಳನ್ನು ತಿಳಿಸಿ.
೧೩. ಸಾರ್ಕ್‌ನ ದೆಹಲಿ ಶೃಂಗಸಭೆಯ ಘೋಷಣೆಗಳನ್ನು ತಿಳಿಸಿ.

**ಇ. ಐದು ಅಂಕದ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣದ ಅರ್ಥವನ್ನು ವ್ಯಾಖ್ಯಾನಗಳ ಮೂಲಕ ವಿವರಿಸಿ.
೨. ಅಂತಾರಾಷ್ಟ್ರೀಯ ರಾಜಕಾರಣದ ಮಹತ್ವವನ್ನು ವಿವರಿಸಿ.
೩. ವಿಶ್ವಸಂಸ್ಥೆಯ ಗುಣಗಳನ್ನು ವಿವರಿಸಿ.

೪. ವಿಶ್ವಸಂಸ್ಥೆಯ ದೋಷಗಳನ್ನು ವಿವರಿಸಿ.
೫. ಅಲಿಪ್ತನೀತಿಯನ್ನು ವಿವರಿಸಿ.
೬. ಪಂಚಶೀಲ ತತ್ವವನ್ನು ವಿವರಿಸಿ.
೭. ಭಾರತ ಮತ್ತು ಕಾಮನ್‌ವೆಲ್ತ್‌ನ ಸಂಬಂಧವನ್ನು ವಿವರಿಸಿ.
೮. ಸಾರ್ಕ್‌ನ ಪ್ರಮುಖ ಉದ್ದೇಶ ಮತ್ತು ಗುರಿಗಳನ್ನು ತಿಳಿಸಿ.
೯. ಸಾರ್ಕ್‌ನ ೭ನೇ ಮತ್ತು ೮ನೇ ಶೃಂಗಸಭೆಯ ಘೋಷಣೆಗಳನ್ನು ವಿವರಿಸಿ.

**ಈ. ಹತ್ತು ಅಂಕದ ಪ್ರಶ್ನೆಗಳು**

೧. ಅಂತಾರಾಷ್ಟ್ರೀಯ ರಾಜಕಾರಣದ ಅರ್ಥ ಮತ್ತು ಮಹತ್ವವನ್ನು ವಿವರಿಸಿ.
೨. ವಿಶ್ವಸಂಸ್ಥೆಯ ಗುಣ ಮತ್ತು ದೋಷಗಳನ್ನು ವಿವರಿಸಿ.
೩. ಭಾರತದ ವಿದೇಶಾಂಗ ನೀತಿಯ ಪ್ರಮುಖ ತತ್ವಗಳನ್ನು ವಿವರಿಸಿ.
೪. ಸಾರ್ಕ್‌ನ ಪ್ರಮುಖ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿ.
೫. ಭಾರತವು ಏಷ್ಯಾ ರಾಷ್ಟ್ರಗಳ ಬಗ್ಗೆ ಹೊಂದಿರುವ ವಿಶೇಷ ಕಾಳಜಿಯ ಬಗ್ಗೆ ವಿವರಿಸಿ.

**ಉ. ಅಭ್ಯಾಸ ಚಟುವಟಿಕೆಗಳು**

೧. ಭಾರತವು ಜಾಗತಿಕ ಮಟ್ಟದಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿದೆಯೇ? ಚರ್ಚಿಸಿ.
೨. ವಿಶ್ವಸಂಸ್ಥೆಯ ಪ್ರಮುಖ ಅಂಗಸಂಸ್ಥೆಗಳನ್ನು ಪಟ್ಟಿಮಾಡಿ ಅದರ ಕಾರ್ಯಗಳನ್ನು ವಿವರಿಸಿ.
೩. ಭಾರತದ ವಿದೇಶಾಂಗ ನಿತಿಯ ಸಫಲತೆ ಮತ್ತು ವಿಫಲತೆಗಳನ್ನು ಚರ್ಚಿಸಿ.
೪. ಸಾರ್ಕ್‌ನ ಅಭಿವೃದ್ಧಿಯಲ್ಲಿ ಭಾರತದ ಪಾತ್ರವನ್ನು ವಿವರಿಸಿ.

## ಅನುಬಂಧ ೧

# ರಾಜ್ಯಶಾಸ್ತ್ರ

### ೧. ರಾಜ್ಯಶಾಸ್ತ್ರವನ್ನೇಕೆ ಅಧ್ಯಯನ ಮಾಡಬೇಕು?

ಪ್ರತಿಯೊಬ್ಬ ವ್ಯಕ್ತಿಯು ಬದುಕುವುದು ಮತ್ತು ಬೆಳೆಯುವುದು ಸಮಾಜದಲ್ಲಿ ಎಂಬುದು ಎಲ್ಲರಿಗೂ ತಿಳಿದಿದೆ. ರಾಜಕೀಯ ಚಟುವಟಿಕೆಗಳು ಸಾಮಾಜಿಕ ಬದುಕಿನ ಅವಿಭಾಜ್ಯ ಹಾಗೂ ನಿರ್ಣಾಯಕ ಭಾಗಗಳಾಗಿವೆ. ರಾಜಕಾರಣದ ಸ್ವರೂಪ ಹಾಗೂ ದಿಶೆಗಳು ವ್ಯಕ್ತಿಯ ನೆಲೆಯನ್ನು ಮತ್ತು ರಾಷ್ಟ್ರದ ಭವಿಷ್ಯವನ್ನು ರೂಪಿಸುತ್ತವೆ. ರಾಜಕಾರಣದ ಉದ್ದೇಶವು ಮೂಲತಃ ನ್ಯಾಯಬದ್ಧ ಹಾಗೂ ಮಾನವೀಯ ಸಮಾಜವನ್ನು ಕಟ್ಟುವುದಾಗಿದೆ. ರಾಜಕಾರಣದ ವಿವಿಧ ಅಂಶಗಳನ್ನು, ಅಂದರೆ ಪ್ರಭುತ್ವ, ರಾಜ್ಯ, ಸರ್ಕಾರ, ಆಡಳಿತ ಮತ್ತು ರಾಜಕಾರಣಕ್ಕೆ ಸಂಬಂಧಿಸಿದ ಸಂಸ್ಥೆಗಳನ್ನು ಕುರಿತಂತೆ ಅಧ್ಯಯನ ಮಾಡುವ ಶಿಸ್ತು ರಾಜ್ಯಶಾಸ್ತ್ರ. ಪದವಿ ಪೂರ್ವ ಶಿಕ್ಷಣದ ಮಟ್ಟದಲ್ಲಿ ರಾಜ್ಯಶಾಸ್ತ್ರದ ಅಧ್ಯಯನ ಉದ್ದೇಶಗಳು ಹೀಗಿವೆ;

ರಾಜಾಕಾರಣಕ್ಕೆ ಸಂಬಂಧಿಸಿದ ಪರಿಕಲ್ಪನೆಗಳು, ಸಿದ್ಧಾಂತಗಳು ಹಾಗೂ ಅದರ ಆಚರಣೆ ಕುರಿತಂತೆ ಆಸಕ್ತಿ ಮೂಡಿಸುವುದು.

ರಾಜ್ಯಶಾಸ್ತ್ರವೆಂಬ ಅಧ್ಯಯನ ಶಿಸ್ತಿಗೆ ಸಂಬಂಧಿಸಿದಂತೆ ಬೆಳೆಯುತ್ತಿರುವ ಸಂಗತಿಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು.

ಭಾರತದ ಸಂವಿಧಾನ, ಆದರ ಪ್ರಜಾಸತ್ತಾತ್ಮಕ ಪ್ರಕ್ರಿಯೆಗಳು ಹಾಗೂ ಸಂಸ್ಥೆಗಳನ್ನು ಪರಿಚಯಿಸುವುದು.

ನಾಗರಿಕ ಪ್ರಜ್ಞೆಯನ್ನು ಬೆಳೆಸುವುದು ಮತ್ತು ಆರೋಗ್ಯಕರ ನಾಗರಿಕ ಹಾಗೂ ರಾಜಕೀಯ ಜೀವನ ರೂಪಿಸಲು ಅಗತ್ಯವಾದ ಮೌಲ್ಯಗಳು ಹಾಗೂ ಮನೋಭಾವವನ್ನು ರೂಢಿಸುವುದಕ್ಕೆ ಪ್ರಯತ್ನಿಸುವುದು.

ಜಾಗತಿಕ ಮಟ್ಟದಲ್ಲಿ ಉಂಟಾಗುತ್ತಿರುವ ರಾಜಕೀಯ ಬೆಳವಣಿಗೆಯನ್ನು ವಿದ್ಯಾರ್ಥಿಗಳಿಗೆ ತಿಳಿಸುವುದು ಮತ್ತು ಅದು ನಾಗರಿಕರ ಬದುಕಿನ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳನ್ನು ಅರಿತುಕೊಳ್ಳುವುದು.

ಒಟ್ಟಾರೆ, ಜಾಗತಿಕ ಮತ್ತು ಸ್ಥಳೀಯ ಸಂದರ್ಭದಲ್ಲಿ ಭಾರತದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶಕ್ಕೆ ವಿದ್ಯಾರ್ಥಿಗಳು ಸ್ಪಂದಿಸುವಂತೆ ಮಾಡುವುದು.

ಪ್ರಜಾಪ್ರಭುತ್ವದ ನಿಯಮಗಳು, ಮೌಲ್ಯಗಳು ಹಾಗೂ ಉಪಯುಕ್ತತೆಗಳನ್ನು ವಿದ್ಯಾರ್ಥಿಗಳು ತಿಳಿದುಕೊಳ್ಳುವಂತೆ ಮಾಡುವುದು.

ಭಾರತದ ಪ್ರಧಾನ ರಾಜಕೀಯ ಮತ್ತು ಸಾಮಾಜಿಕ ಸಂಸ್ಥೆಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು.

ಸಾತ್ವಿಕ ಪೌರತ್ವದ ಮೌಲ್ಯದ ಬಗ್ಗೆ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡುವಂತೆ ಮಾಡುವುದು.

**ನಿರ್ದಿಷ್ಟ ಗುರಿಗಳು**

ಜ್ಞಾನ, ಕುಶಲತೆ, ಅನ್ವಯಿಕ ಸಾಮರ್ಥ್ಯ ಮತ್ತು ಅಧ್ಯಯನ ಶಾಸ್ತ್ರದ ಬಗ್ಗೆ ಮತ್ತು ಸಮಾಜದ ಬಗ್ಗೆ ಮನೋಭಾವ ಇವುಗಳನ್ನು ಅನುಲಕ್ಷಿಸಿ

ಅ. ಜ್ಞಾನ

ಭಾರತಕ್ಕೆ ನಿರ್ದಿಷ್ಟವಾಗಿ ಸಂಬಂಧಿಸಿದಂತೆ ರಾಜಕೀಯ ಪ್ರಕ್ರಿಯೆಗಳು ಹಾಗೂ ವಿಚಾರಗಳ ಬಗ್ಗೆ ಒಟ್ಟಾರೆ ತಿಳುವಳಿಕೆ ಸಂಪಾದಿಸುವುದು.

ಭಾರತದ ರಾಜಕೀಯ ಸಂಸ್ಥೆಗಳ ಕಾರ್ಯಾಚರಣೆ ಬಗ್ಗೆ ತಿಳುವಳಿಕೆ ಪಡೆಯುವುದು.

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸನ್ನಿವೇಶ ಹಾಗೂ ಭಾರತೀಯ ರಾಜಕೀಯ ವ್ಯವಸ್ಥೆಯ ಮುಂದಿರುವ ಸವಾಲುಗಳ ಬಗ್ಗೆ ಅರಿವನ್ನು ಗಳಿಸಿಕೊಳ್ಳುವುದು.

ಆ. ಕುಶಲತೆ

ಭಾರತಕ್ಕೆ ಸಂಬಂಧಿಸಿದ ಪ್ರಧಾನ ರಾಜಕೀಯ ಬೆಳವಣಿಗೆಗಳನ್ನು ಮತ್ತು ಪ್ರಕ್ರಿಯೆಗಳನ್ನು ವಿವರಿಸುವ ಮತ್ತು ವಿಶ್ಲೇಷಿಸುವ ಸಾಮರ್ಥ್ಯಗಳಿಸಿಕೊಳ್ಳುವುದು.

ಇ. ಅನ್ವಯಿಕ ಸಾಮರ್ಥ್ಯ

ರಾಜಕೀಯ ಪ್ರಕ್ರಿಯೆ ಮತ್ತು ಸಂಸ್ಥೆಗಳಿಗೆ ಸಂಬಂಧಿಸಿದ ಸೈದ್ಧಾಂತಿಕ ಅಧ್ಯಯನಗಳ ಚೌಕಟ್ಟಿನಲ್ಲಿ ರಾಜಕೀಯ ಘಟನಾವಳಿಗಳನ್ನು ಜಾಗತಿಕ ಮಟ್ಟದಲ್ಲಿ, ರಾಷ್ಟ್ರಮಟ್ಟದಲ್ಲಿ ಹಾಗೂ ಸ್ಥಳೀಯ ಮಟ್ಟದಲ್ಲಿ ವ್ಯಾಖ್ಯಾನಿಸುವುದು ಮತ್ತು ವಿಶ್ಲೇಷಿಸುವ ಗುಣವನ್ನು ಗಳಿಸಿಕೊಳ್ಳುವುದು.

ಇವತ್ತಿನ ಸಾಮಾಜಿಕ ಸಂದರ್ಭದಲ್ಲಿ ಬೆಳವಣಿಗೆಗಳನ್ನು ಗಮನದಲ್ಲಿಟ್ಟುಕೊಂಡು ನಾಗರಿಕ ಹಕ್ಕು ಹಾಗೂ ಕರ್ತವ್ಯಗಳ ಸಂಬಂಧವನ್ನು ಗ್ರಹಿಸುವ ಪ್ರಯತ್ನ ನಡೆಸುವುದು.

ಈ. ಸಮಾಜ ಹಾಗೂ ಅಧ್ಯಯನ ವಿಷಯದ ಬಗ್ಗೆ ಮನೋಭಾವ

ರಾಜಕಾರಣ ಹಾಗೂ ರಾಜಕೀಯ ಪ್ರಕ್ರಿಯೆಗಳ ಬಗ್ಗೆ ಇತ್ಯಾತ್ಮಕ ಹಾಗೂ ವಾಸ್ತವಿಕ ದೃಷ್ಟಿಕೋನವನ್ನು ಬೆಳೆಸುವುದು.

ಜಾಗತಿಕ, ರಾಷ್ಟ್ರೀಯ ಹಾಗೂ ಸ್ಥಳೀಯ ಮಟ್ಟದಲ್ಲಿನ ಸಾಮಾಜಿಕ ಮತ್ತು ರಾಜಕೀಯ ವಸ್ತುಸ್ಥಿತಿಯ ಬಗ್ಗೆ ಪ್ರತಿಸ್ಪಂದಿಸುವುದು.

ತಿಳಿವಳಿಕೆಯುಳ್ಳ ಹಾಗೂ ಪ್ರಜ್ಞಾವಂತ ನಾಗರಿಕನಾಗುವುದು.

ನಾಗರಿಕರ ಹಕ್ಕುಗಳ ಹಾಗೂ ಕರ್ತವ್ಯಗಳ ಬಗ್ಗೆ ಹೆಚ್ಚು ಅರಿತವರಾಗುವುದು.

## ಅನುಬಂಧ ೨

# ಅಧ್ಯಾಪಕರಿಗೆ ವಿಸ್ತೃತವಾದ ಮಾರ್ಗಸೂಚಿ

ಈ ಹೊಸ ಪಠ್ಯಕ್ರಮವು ತನ್ನಷ್ಟಕ್ಕೆ ತಾನೇ ಅರ್ಥವಾಗುವಂತಿದೆ. ಇಡೀ ಪತ್ರಿಕೆಯ ಉದ್ದೇಶಗಳನ್ನು ಹಾಗೂ ಪ್ರತಿ ಅಧ್ಯಾಯದ ಧ್ಯೇಯಗಳನ್ನು ವಿವರವಾಗಿ ಇಲ್ಲಿ ನೀಡಲಾಗಿದೆ. ಈ ವಿಷಯವನ್ನು ಬೋಧಿಸುವಾಗ ಅಧ್ಯಾಪಕರು ಇದನ್ನು ಗಮನಿಸಬೇಕು. ಈ ಜ್ಞಾನ ಶಿಸ್ತಿಗೆ ಮತ್ತು ಅದರ ಪ್ರಾಯೋಗಿಕ ಅನ್ವಯಕ್ಕೆ ಸಂಬಂಧಿಸಿದ ಪ್ರಧಾನ ಪರಿಭಾವನೆಗಳಿಗೆ ಪ್ರವೇಶವನ್ನು ಕಲಿಯುವವರಿಗೆ ಒದಗಿಸುವುದು ಪ್ರಸ್ತುತ ವಿಷಯದ ಗುರಿಯಾಗಿದೆ. ಪ್ರತಿ ಘಟಕ ಮತ್ತು ಉಪ ಘಟಕಗಳಿಗೆ ನೀಡಿರುವ ಸಮಯಾವಧಿಯ ಆಧಾರದ ಮೇಲೆ ಅದರ ವ್ಯಾಪ್ತಿಯನ್ನು ತಿಳಿಯಬಹುದು. ಪ್ರಧಾನ ಪರಿಭಾವನೆಗಳನ್ನು ವಿವರಿಸುವಾಗ ಭಾರತಕ್ಕೆ ಸಂಬಂಧಿಸಿದ ನಿರ್ದಿಷ್ಟ ಉದಾಹರಣೆಗಳನ್ನು ನೀಡಬೇಕು. ವಿವಿಧ ಘಟಕಗಳನ್ನು ಬೋಧಿಸುವಾಗ ಸಮಕಾಲೀನ ಬೆಳವಣಿಗೆಗಳನ್ನು ನಿದರ್ಶನವಾಗಿ ತೆಗೆದುಕೊಳ್ಳುವುದು ಸೂಕ್ತ. ಕಲಿಯುವವರನ್ನು ಕೇಂದ್ರವಾಗಿಟ್ಟುಕೊಂಡು ಪ್ರಸ್ತುತ ಪಠ್ಯಕ್ರಮವನ್ನು ರೂಪಿಸಿರುವುದರಿಂದ ಅಧ್ಯಾಪಕರು ಬೋಧನೆಯಲ್ಲಿ ಸೃಜನಶೀಲ ವಿಧಾನಗಳನ್ನು ಅಳವಡಿಸಿಕೊಳ್ಳಲು ವಿಪುಲ ಅವಕಾಶವಿದೆ. ಪ್ರತಿ ಘಟಕಕ್ಕೆ ಸಂಬಂಧಿಸಿದಂತೆ ಕ್ರಿಯಾಶೀಲ ಕಲಿಕಾ ಸಾಧನಗಳ ಬಗ್ಗೆ ವಿವರಣೆ ನೀಡಲಾಗಿದೆ. ಇವೆಲ್ಲವೂ ಕೇವಲ ಸೂಚನಾತ್ಮಕ ಸಂಗತಿಗಳು. ಅವುಗಳನ್ನು ಸೃಜನಶೀಲವಾಗಿ ಬಳಸಬಹುದು ಅಥವಾ ಸ್ಥಳೀಯ ಅಗತ್ಯ ಹಾಗೂ ಸನ್ನಿವೇಶಕ್ಕೆ ಸೂಕ್ತವಾಗುವಂತೆ ಬದಲಾಯಿಸಿಕೊಳ್ಳಬಹುದು.

ಅಧ್ಯಯನ ಯೋಜನೆಗಳು ಮತ್ತು ಹೊಣೆಗಳು ಕಡ್ಡಾಯ. ಇವುಗಳ ಮೌಲ್ಯಮಾಪನಕ್ಕೆ ಬೇಕಾದ ವಿವರಗಳನ್ನು ನಿರ್ದಿಷ್ಟ ಪಡಿಸಿದ ನಮೂನೆಗಳಲ್ಲಿ ನೀಡಲಾಗಿದೆ. ಈ ನಿಯಮವನ್ನು ಕ್ರಮಬದ್ಧವಾಗಿ ಪಾಲಿಸಬೇಕು.

ಅನುಬಂಧದಲ್ಲಿ ನೀಡಿರುವ ಗ್ರಂಥಗಳ ಪಟ್ಟಿಯು ಕೇವಲ ಸೂಚನಾತ್ಮಕವಾದುದು. ಹೊಸದಾಗಿ ಪ್ರಕಟವಾಗಿರುವ ಗ್ರಂಥಗಳಿಂದ ಅಧ್ಯಾಪಕರು ಮಾಹಿತಿಯನ್ನು ಅವಶ್ಯ ಪಡೆದುಕೊಳ್ಳಬಹುದು. ವಾರ್ಷಿಕಗಳು ಹಾಗೂ ವಿಶ್ವಕೋಶಗಳನ್ನು ಬಳಸಬಹುದು. ಇಲ್ಲಿ ನೀಡಿರುವ ವೆಬ್‌ಸೈಟ್‌ಗಳು ತುಂಬಾ ಉಪಯುಕ್ತವಾದ ಮಾಹಿತಿಯ ಆಕರಗಳಾಗಿವೆ.

ಈ ಭಾಗದಲ್ಲಿ ನೀಡಿರುವ ಮೌಲ್ಯಮಾಪನ ಮಾದರಿಯನ್ನು ಅಧ್ಯಾಪಕರು ವಿಷಯವನ್ನು ಬೋಧಿಸುವಾಗ ಗಮನದಲ್ಲಿರಿಸಿಕೊಳ್ಳಬೇಕು. ವಿಷಯದ ಮಹತ್ವ, ಅದಕ್ಕೆ ನಿಗದಿಪಡಿಸಿರುವ ಅಂಶಗಳು ಮತ್ತು ಅವುಗಳಿಗೆ ನಿಗದಿಪಡಿಸಿರುವ ಬೋಧನಾವಧಿಗಳ ನಡುವೆ ಸ್ಪಷ್ಟವಾದ ಸಂಬಂಧವಿದೆ. ಇದನ್ನು ವಿದ್ಯಾರ್ಥಿಗಳ ಗಮನಕ್ಕೆ ತರುವುದು ಲೇಸು.

ಅನುಬಂಧ ೩

# ಪ್ರಾಯೋಗಿಕ ಅಧ್ಯಯನ ಯೋಜನೆಗಳು

ಕರ್ನಾಟಕದ ಪದವಿಪೂರ್ವ ಶಿಕ್ಷಣ ಇಲಾಖೆಯು ೨೦೦೪-೦೫ನೆಯ ಸಾಲಿನಲ್ಲಿ ಹೊಸ ಪಠ್ಯಕ್ರಮವನ್ನು ಜಾರಿಯಲ್ಲಿ ತಂದಿದೆ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಸೈದ್ಧಾಂತಿಕ ಭಾಗ ಅಥವಾ ತಾತ್ವಿಕ ಭಾಗ. ಎರಡನೆಯದು ಪ್ರಾಯೋಗಿಕ ಭಾಗ ಅಥವಾ ಎಂಫೆರಿಕಲ್ ಭಾಗ. ಮೊದಲನೆಯ ಸೈದ್ಧಾಂತಿಕ ಭಾಗಕ್ಕೆ ೯೦ ಅಂಕಗಳನ್ನು ಪ್ರಾಯೋಗಿಕ ಭಾಗಕ್ಕೆ ೧೦ ಅಂಕಗಳನ್ನು ನಿಗದಿಪಡಿಸಲಾಗಿದೆ. ಈ ಹಿಂದೆ ಪಠ್ಯಕ್ರಮದಲ್ಲಿ ಇಂತಹ ಪ್ರಾಯೋಗಿಕ ಭಾಗವಿರಲಿಲ್ಲ. ಪ್ರಾಯೋಗಿಕ ಭಾಗವನ್ನು ಸಮಾಜ ವಿಜ್ಞಾನಗಳಿಗೆ ನಿಯಮಿಸಿ ಪದವಿಪೂರ್ವ ಶಿಕ್ಷಣ ಇಲಾಖೆಯು ಶ್ಲಾಘನೀಯ ಕಾರ್ಯಮಾಡಿದೆ. ಬೋಧನೆ ಮತ್ತು ಅಧ್ಯಯನಗಳಿಗೆ ಇದು ಹೊಸ ಆಯಾಮವೊಂದನ್ನು ನೀಡಿದೆ. ಸಮಾಜವಿಜ್ಞಾನಗಳಿಗೆ ಪ್ರಾಯೋಗಿಕ ಭಾಗವನ್ನು ನಿಯಮಿಸಿರುವುದು ಕರ್ನಾಟಕಕ್ಕೆ ಸಂಬಂಧಿಸಿದಂತೆ ಅತ್ಯಂತ ವಿನೂತನ ಕ್ರಮವಾಗಿದೆ.

ಈ ಪ್ರಾಯೋಗಿಕ ಭಾಗವನ್ನು ವಿದ್ಯಾರ್ಥಿಗಳು ಹೇಗೆ ನಿರ್ವಹಿಸಬೇಕು, ಅಧ್ಯಾಪಕರಿಂದ ಇದರ ಬಗ್ಗೆ ನಿರ್ದೇಶನ ಮತ್ತು ಮಾರ್ಗದರ್ಶನ ಹೇಗೆ ಪಡೆಯಬೇಕು, ಪ್ರಾಯೋಗಿಕ ಭಾಗಕ್ಕೆ ಸಂಬಂಧಿಸಿದಂತೆ ಮೌಲ್ಯಮಾಪನದ ಸ್ವರೂಪ ಹೇಗೆ - ಇವೆ ಮುಂತಾದ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಈ ಅನುಬಂಧ ಅಧ್ಯಾಪಕರಿಗೆ ಹಾಗೂ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆ ಎಂದು ಭಾವಿಸಲಾಗಿದೆ. ಇಲ್ಲಿ ಅಧ್ಯಯನ ಯೋಜನೆ ಹಾಗೂ ಪ್ರಾಯೋಗಿಕ ಕಾರ್ಯಗಳ ಬಗ್ಗೆ ಪಟ್ಟಿಯೊಂದನ್ನು ನೀಡಲಾಗಿದೆ. ಅದು ಅಂತಿಮ ವಾದುದೇನಲ್ಲ. ಅದೊಂದು ಸೂಚನೆ ಎಂದು ತಿಳಿದರೆ ಸಾಕು. ಸೃಜನಶೀಲವಾದ ವಿದ್ಯಾರ್ಥಿಗಳು ಮತ್ತು ಸಂಶೋಧನಾಶೀಲವಾದ ಅಧ್ಯಾಪಕರು ತಮ್ಮ ವಿಷಯ ಕುರಿತಂತೆ ಬೇರೆ ರೀತಿಯಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ರೂಪಿಸಿಕೊಳ್ಳಬಹುದು. ಲಭ್ಯವಿರುವ ಮೂಲ ಸೌಲಭ್ಯ, ಗ್ರಂಥಾಲಯ, ಪ್ರದೇಶ ಮುಂತಾದ ಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ಬಗೆಯಲ್ಲಿ ಇದನ್ನು ರೂಪಿಸಿಕೊಳ್ಳಬಹುದು.

ಸೈದ್ಧಾಂತಿಕ ಭಾಗ ತಾತ್ವಿಕವಾದ ಸಂಗತಿಗಳು ಮತ್ತು ಅವುಗಳನ್ನು ಕುರಿತ ಚರ್ಚೆ ಮೂಲತಃ ಅಮೂರ್ತವಾಗಿರುತ್ತವೆ. ಪ್ರತಿಯೊಂದು ಜ್ಞಾನಶಾಖೆಯಲ್ಲೂ ಸಿದ್ಧಾಂತಗಳಿರುತ್ತವೆ, ನಿಯಮಗಳಿರುತ್ತವೆ, ತತ್ವಗಳಿರುತ್ತವೆ. ಈ ನಿಯಮ ತತ್ವಗಳು ಆಚರಣೆಯಲ್ಲಿ ಹೇಗಿರುತ್ತವೆ ಎಂಬುದನ್ನು ತಿಳಿಯುವುದು ರೋಚಕವಾಗಿರುತ್ತದೆ. ಪ್ರಾಯೋಗಿಕ ಅಧ್ಯಯನ ಯೋಜನೆಗಳ

ಮೂಲಕ ಅಮೂರ್ತವಾದ ತತ್ವ ನಿಯಮ ಸಿದ್ಧಾಂತಗಳನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು ಮತ್ತು ಮನನ ಮಾಡಿಕೊಳ್ಳಬಹುದು.

ಸಿದ್ಧಾಂತಗಳು ಆಚರಣೆಯಲ್ಲಿ ಯಾವ ಸ್ವರೂಪ ತಳೆಯುತ್ತವೆ ಎಂಬುದು ತುಂಬಾ ಕುತೂಹಲಕಾರಿಯಾದ ಸಂಗತಿಯಾಗಿದೆ. ಉದಾಹರಣೆಗೆ ಮೂಲಭೂತ ಹಕ್ಕುಗಳು ನಮ್ಮ ಗ್ರಾಮೀಣ ಪ್ರದೇಶದಲ್ಲಿ ನಾಗರಿಕರಿಗೆ ದಕ್ಕುತ್ತಿವೆಯೇ, ಮಾನವ ಹಕ್ಕುಗಳು ಯಾವ ರೀತಿ ಉಲ್ಲಂಘನೆಯಾಗುತ್ತಿವೆ - ಇಂತಹ ಸಂಗತಿಗಳನ್ನು ಪ್ರಾಯೋಗಿಕ ಕಾರ್ಯಗಳ ಮೂಲಕ ತಿಳಿದುಕೊಳ್ಳಬಹುದು. ಈ ಬಗೆಯ ಕಾರ್ಯಯೋಜನೆಗಳಿಂದ ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳ ನಡುವೆ ಅನುಸಂಧಾನ ಸಾಧ್ಯವಾಗುತ್ತದೆ. ಸಿದ್ಧಾಂತಗಳನ್ನು ಕುರಿತಂತೆ ವಿದ್ಯಾರ್ಥಿಗಳಿಗೆ ಪ್ರಶ್ನೆ ಕೇಳುವುದು ಸಾಧ್ಯವಾಗುತ್ತದೆ. ಇದು ವಿದ್ಯಾರ್ಥಿಗಳಲ್ಲಿ ವಿಶ್ಲೇಷಣಾ ಕುಶಲತೆಯನ್ನು ಬೆಳೆಸುತ್ತದೆ. ಈಗಾಗಲೇ ತಿಳಿಸಿರುವಂತೆ ರಾಜ್ಯಶಾಸ್ತ್ರದ ಅಧ್ಯಯನದ ಉದ್ದೇಶಗಳು ನಾಲ್ಕು.

೧. ಜ್ಞಾನ ಸಂಪಾದಿಸುವುದು.

೨. ಕುಶಲತೆ ಗಳಿಸಿಕೊಳ್ಳುವುದು.

೩. ಅನ್ವಯಿಕ ಸಾಮರ್ಥ್ಯ ಪಡೆದುಕೊಳ್ಳುವುದು.

೪. ಸಮಾಜದ ಬಗ್ಗೆ ಧೋರಣೆಯೊಂದನ್ನು ರೂಪಿಸಿಕೊಳ್ಳುವುದು.

ಈ ಪ್ರಾಯೋಗಿಕ ಅಧ್ಯಯನ ಯೋಜನೆಗಳು ಮೇಲೆ ಉಲ್ಲೇಖಿಸಿರುವ ಎರಡು ಮತ್ತು ಮೂರನೆಯ ಉದ್ದೇಶಗಳನ್ನು ಸಾಧಿಸಿಕೊಳ್ಳಲು ನೆರವಾಗುತ್ತವೆ. ರಾಜ್ಯಶಾಸ್ತ್ರ ಪಠ್ಯಕ್ರಮದ ಮೂಲ ಉದ್ದೇಶ ಜ್ಞಾನ ಸಂಪಾದನೆಯಷ್ಟೇ ಅಲ್ಲ, ರಾಜ್ಯಶಾಸ್ತ್ರದ ತತ್ವಗಳ ಅನ್ವಯಿಕ ಸ್ವರೂಪವನ್ನು ತಿಳಿದುಕೊಳ್ಳುವ ಅಗತ್ಯವಿದೆ. ಈ ಕಾರಣದಿಂದ ಪ್ರಾಯೋಗಿಕ ಭಾಗವನ್ನು ಪಠ್ಯಕ್ರಮದಲ್ಲಿ ಸೇರಿಸಲಾಗಿದೆ. ಈ ಪ್ರಾಯೋಗಿಕ ಕಾರ್ಯದಲ್ಲಿ ಭಾಗವಹಿಸುವುದರಿಂದ ಅಧ್ಯಯನದಲ್ಲಿ ಶಿಸ್ತು ಅಥವಾ ಪಟ್ಟುಪಾಡು ವಿದ್ಯಾರ್ಥಿಗಳಿಗೆ ಪ್ರಾಪ್ತವಾಗುತ್ತದೆ. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಚರ್ಚೆ, ಅನುಸಂಧಾನ ಸಾಧ್ಯವಾಗುತ್ತದೆ, ಅಧ್ಯಯನವು ದ್ವಿಮುಖಿಯಾಗುತ್ತದೆ. ಇಲ್ಲಿ ವಿದ್ಯಾರ್ಥಿಗಳು ಕೇವಲ ಕೇಳುವ ಶ್ರೋತೃಗಳಾಗಿರುವುದಿಲ್ಲ. ಅವರು ಕೇಳಿದ್ದನ್ನು, ಕಲಿತಿದ್ದನ್ನು ತಿಳಿದುಕೊಂಡಿದ್ದನ್ನು ಪ್ರಮಾಣಿಸಿ, ಪರೀಕ್ಷಿಸಿ ನೋಡುವ ಪ್ರಯೋಗಗಳನ್ನು ಮಾಡಬಲ್ಲರು. ಪ್ರಾಯೋಗಿಕ ಅಧ್ಯಯನ ಯೋಜನೆಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಅಧ್ಯಯನ ವರದಿ ಸಿದ್ಧ ಮಾಡಬೇಕಾಗುತ್ತದೆ. ಇದರಿಂದ ವಿದ್ಯಾರ್ಥಿಗಳಿಗೆ ಪ್ರಬಂಧಕತೆಯನ್ನು ರೂಢಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೊದಲನೆಯ ಪದವಿಪೂರ್ವ ತರಗತಿಗಳಲ್ಲಿ ಯಾವ ಪ್ರಾಯೋಗಿಕ ಅಧ್ಯಯನಗಳನ್ನು ಕೈಗೊಳ್ಳಬಹುದು ಎಂಬುದನ್ನು ಕುರಿತಂತೆ ಒಂದು ಸ್ಥೂಲ ವಿವರಣೆಯನ್ನು ಇಲ್ಲಿ ನೀಡಲಾಗಿದೆ. ಇದೇನು ವಿಸ್ತೃತವಾದ ಪಟ್ಟಿಯೇನಲ್ಲ. ಇದೊಂದು ಮಾರ್ಗಸೂಚಿ ಒಂದು ಪ್ರಾಥಮಿಕ ಪಟ್ಟಿ.

## ಪ್ರಾಯೋಗಿಕ ಅಧ್ಯಯನದ ಯೋಜನೆಗಳು

೧. ಮೊದಲೆರಡು ಅಧ್ಯಾಯಗಳಾದ 'ರಾಜಕೀಯ ಚಿಂತಕರು: ಭಾಗ-೧ ಮತ್ತು ೨'ರಲ್ಲಿ ವಿವಿಧ ರಾಜಕೀಯ ಚಿಂತಕರ ಜೀವನ ಚಿತ್ರ ಕುರಿತಂತೆ ಪ್ರಬಂಧಗಳನ್ನು ರಚಿಸಬಹುದು.

೨. ಮೂರನೆಯ ಅಧ್ಯಾಯದಲ್ಲಿ ಅನೇಕ ವಿಷಯಗಳನ್ನು ಕುರಿತಂತೆ ಅಧ್ಯಯನ ಯೋಜನೆ ತೆಗೆದುಕೊಳ್ಳಬಹುದು.

ಕರ್ನಾಟಕದಲ್ಲಿ ವಿಕೇಂದ್ರೀಕರಣ ವ್ಯವಸ್ಥೆ ಅಸ್ತಿತ್ವಕ್ಕೆ ಬಂದು ಸುಮಾರು ೧೫ ವರ್ಷಗಳಾದವು. ಈ ಕುರಿತಂತೆ ವಿದ್ಯಾರ್ಥಿಗಳು ತಮ್ಮ ತಮ್ಮ ತಾಲ್ಲೂಕಿನ ಯಾವುದಾದರು ಒಂದು ಗ್ರಾಮ ಪಂಚಾಯಿತಿಯನ್ನು ಆಯ್ಕೆ ಮಾಡಿಕೊಂಡು ಅದರ ಬಗ್ಗೆ ಒಂದು ಅಧ್ಯಯನ ಕೈಗೊಳ್ಳಬಹುದು. ಗ್ರಾಮ ಪಂಚಾಯತಿಗಳ ಅಧಿಕಾರವೇನು? ಗ್ರಾಮ ಪಂಚಾಯತಿ ಸದಸ್ಯರ ಮೀಸಲಾತಿ ಸ್ವರೂಪ ಯಾವ ಬಗೆಯದು? ಮಹಿಳಾ ಸದಸ್ಯರ ಸಂಖ್ಯೆ ಎಷ್ಟಿದೆ? ಶಾಸಕರು ಮತ್ತು ಗ್ರಾಮ ಪಂಚಾಯತಿಯು ಸಂಬಂಧದ ಸ್ವರೂಪವೇನು? ಇವುಗಳ ಬಗ್ಗೆ ಕ್ಷೇತ್ರಕಾರ್ಯನಡೆಸಿ, ಮಾಹಿತಿ ಸಂಗ್ರಹಿಸಿ, ಪ್ರಬಂಧ ಸಿದ್ಧಪಡಿಸಬಹುದು.

೩. ನಾಲ್ಕನೆಯ ಅಧ್ಯಾಯಕ್ಕೆ ಸಂಬಂಧಿಸಿದಂತೆ ಭಾರತದಲ್ಲಿನ ಚುನಾವಣಾ ಪದ್ಧತಿ ಬಗ್ಗೆ ಅಧ್ಯಯನವೊಂದನ್ನು ಕೈಗೆತ್ತಿಕೊಳ್ಳಬಹುದು. ನಿಮ್ಮ ತಾಲ್ಲೂಕಿನಲ್ಲಿ ನಡೆಯುವ ಯಾವುದಾದರು ಚುನಾವಣೆ ಬಗ್ಗೆ ಕ್ಷೇತ್ರಕಾರ್ಯ ನಡೆಸಬಹುದು. ಅದು ಗ್ರಾಮ ಪಂಚಾಯತಿಯಿದ್ದಾಗಬಹುದು, ಪುರಸಭೆಯದ್ದಾಗಬಹುದು, ಎಪಿಎಂಸಿಯದ್ದಾಗ ಬಹುದು. ಚುನಾವಣೆಗೆ ಯಾರು ನಿಲ್ಲುತ್ತಾರೆ? ಎಷ್ಟು ಹಣ ಖರ್ಚು ಮಾಡುತ್ತಾರೆ? ಚುನಾವಣೆಯಲ್ಲಿ ಹಣದ ಪಾತ್ರವೇನು? ಮುಂತಾದ ವಿಷಯಗಳ ಬಗ್ಗೆ ಇಲ್ಲಿ ಚರ್ಚೆ ಮಾಡಬಹುದು. ಚುನಾವಣೆಯಲ್ಲಿ ವಿದ್ಯುನ್ಮಾನ ಮತಯಂತ್ರವನ್ನು ಬಳಸುವುದರ ಬಗ್ಗೆ ಜನರ ಅಭಿಪ್ರಾಯವೇನು ಎಂಬುದನ್ನು ಚರ್ಚಿಸಬಹುದು.

೪. ಐದನೆಯ ಅಧ್ಯಾಯದ ವಿಷಯದ ಬಗ್ಗೆ ವಿವಿಧ ಬಗೆಯ ಅಧ್ಯಯನ ಯೋಜನೆಗಳನ್ನು ರೂಪಿಸಬಹುದು. ವಿದ್ಯಾರ್ಥಿಗಳು ತಮ್ಮ ತಾಲ್ಲೂಕಿನಲ್ಲಿರುವ ಬಹುಪಕ್ಷೀಯ ರಾಜಕೀಯ ವ್ಯವಸ್ಥೆ ಬಗ್ಗೆ ಅಧ್ಯಯನ ಯೋಜನೆ ಸಿದ್ಧಪಡಿಸಬಹುದು. ತಮ್ಮ ತಾಲ್ಲೂಕಿನಲ್ಲಿ ಎಷ್ಟು ರಾಜಕೀಯ ಪಕ್ಷಗಳಿವೆ? ಅವುಗಳ ಪ್ರಣಾಳಿಕೆಯೇನು? ಸ್ಥಳೀಯವಾಗಿ ಅವುಗಳ ಸದಸ್ಯರಿಗೆ ಪಕ್ಷದ ಧ್ಯೇಯಧೋರಣೆ ಬಗ್ಗೆ ಅರಿವಿದೆಯೆ?

ಪಕ್ಷಾಂತರವೆಂದರೇನು? ನಮ್ಮ ತಾಲ್ಲೂಕಿನಲ್ಲಿ ಪಕ್ಷಾಂತರ ಮಾಡಿದ ಮುಖಂಡರು ಯಾರು? ಯಾಕೆ ಪಕ್ಷಾಂತರ ಮಾಡಿದರು? ಮುಂತಾದ ವಿಷಯಗಳನ್ನು ಒಳಗೊಂಡ ಒಂದು ಪ್ರಬಂಧವನ್ನು ವಿದ್ಯಾರ್ಥಿಗಳು ಸಿದ್ಧಪಡಿಸಬಹುದು.

೫. ಸಾರ್ವಜನಿಕ ಅಭಿಪ್ರಾಯ ಹೇಗೆ ರೂಪುಗೊಳ್ಳುತ್ತಿದೆ ಎಂಬುದನ್ನು ಪ್ರಚಲಿತ ವಿಷಯವೊಂದನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ನಡೆಸಬಹುದು. ಜನರಲ್ಲಿ ಪ್ರಚಲಿತ

ವಿದ್ಯಮಾನಗಳ ಬಗ್ಗೆ ಮಾಹಿತಿ ಹೇಗೆ ದೊರೆಯುತ್ತದೆ? ತಮ್ಮ ಅಭಿಪ್ರಾಯಗಳನ್ನು ಹೇಗೆ ರೂಪಿಸಿಕೊಳ್ಳುತ್ತಾರೆ? ಇದರಲ್ಲಿ ಪತ್ರಿಕೆ, ರೇಡಿಯೋ ಮತ್ತು ದೂರದರ್ಶನಗಳ ಪಾತ್ರವೇನು? ಪತ್ರಿಕೆಗಳಲ್ಲಿ ಬಂದ ವಿಷಯದ ಬಗ್ಗೆ ಜನರು ಚರ್ಚೆ ಮಾಡುತ್ತಾರೆಯೆ? ಪತ್ರಿಕೆಯಲ್ಲಿ ಬಂದದ್ದನ್ನು ನಿಜವೆಂದು ಜನರು ನಂಬುತ್ತಾರೆಯೆ? ಈ ಎಲ್ಲ ವಿಷಯ ಕುರಿತಂತೆ ಅಧ್ಯಯನ ಪ್ರಬಂಧ ರಚಿಸಬಹುದು.

೬. ಆಡಳಿತ ಯಂತ್ರವು ನಮ್ಮ ತಾಲ್ಲೂಕಿನಲ್ಲಿ ಹೇಗೆ ಕೆಲಸಮಾಡುತ್ತದೆ ಎಂಬುದರ ಬಗ್ಗೆ ಅಧ್ಯಯನ ಯೋಜನೆ ತಯಾರಿಸಬಹುದು. ತಾಲ್ಲೂಕಿನ ಆಡಳಿತ ಯಂತ್ರದ ರಚನೆಯ ಪರಿಚಯ ಮಾಡಿಕೊಡಬಹುದು. ತಾಲ್ಲೂಕಿನ ಆಡಳಿತಯಂತ್ರದ ರಚನೆಯ ಪರಿಚಯ ಮಾಡಿಕೊಡಬಹುದು. ತಾಲ್ಲೂಕು ಆಡಳಿತಯಂತ್ರದ ಮುಖ್ಯಸ್ಥ ಯಾರು? ಅವನ/ಅವಳ ಕಾರ್ಯವೇನು? ಜನರಿಗೆ ಆಡಳಿತಯಂತ್ರದ ಬಗ್ಗೆ ಏನು ತಿಳಿದಿದೆ? ಅದು ವಿಷಯದ ಮಟ್ಟಿಗೆ ದಕ್ಷವಾಗಿದೆಯೆ? ಅಲ್ಲಿ ಕೆಲಸ ಸುಸೂತ್ರವಾಗಿ ನಡೆಯುತ್ತದೆಯೆ? ಕಾಲ ವಿಳಂಬದ ಬಗ್ಗೆ ಕಾರಣಗಳೇನು? ಈ ಸಂಗತಿಗಳನ್ನು ಒಳಗೊಂಡ ಒಂದು ಅಧ್ಯಯನ ಪ್ರಬಂಧವನ್ನು ವಿದ್ಯಾರ್ಥಿಗಳು ಸಿದ್ಧಪಡಿಸಬಹುದು.

೭. ಎರಡನೆಯ ಪದವಿ ಪೂರ್ವ ತರಗತಿಯ ರಾಜ್ಯಶಾಸ್ತ್ರದ ಎಂಟನೆಯ ಅಧ್ಯಾಯದಲ್ಲಿ ಅನೇಕ ಕುತೂಹಲಕಾರಿ ಸಂಗತಿಗಳಿವೆ. ಅವುಗಳ ಬಗ್ಗೆ ಕ್ಷೇತ್ರಕಾರ್ಯ ಆಧರಿಸಿದ ಅಧ್ಯಯನ ಯೋಜನೆಗಳನ್ನು ವಿದ್ಯಾರ್ಥಿಗಳು ರೂಪಿಸಬಹುದು.

ಅಸಮಾನತೆಯ ನಿರ್ವಚನಕ್ಕೂ ಮತ್ತು ವಾಸ್ತವಿಕ ಸಂಗತಿಗೂ ನಡುವೆ ಇರುವ ಸಂಬಂಧ ಕುರಿತಂತೆ ಚರ್ಚಿಸಬಬಹುದು. ಜಾತಿ ಸಂಬಂಧಿ ಅಸಮಾನತೆ ಕುರಿತಂತೆ ಘಟನೆಗಳ ವಿವರ ಸಂಗ್ರಹಿಸಬಹುದು. ತಮ್ಮ ಊರಿನ/ತಾಲ್ಲೂಕಿನ ದೇವಾಲಯಗಳಿಗೆ ಪರಿಶಿಷ್ಟ ಜಾತಿ ಜನರ ಪ್ರವೇಶವಿದೆಯೆ? ಇಲ್ಲದಿದ್ದರೆ ಕಾರಣವೇನು? ಇದರ ಬಗ್ಗೆ ಜನರ ಅಭಿಪ್ರಾಯವೇನು? ಅಸ್ಪೃಶ್ಯತೆಯ ಆಚರಣೆ ಬಗ್ಗೆ ಮಾಹಿತಿ ಸಂಗ್ರಹಿಸಬಹುದು. ಮೀಸಲಾತಿ ಬಗ್ಗೆ ಜನರ ಭಾವನೆಗಳನ್ನು ಕುರಿತಂತೆ ಚರ್ಚಿಸಬಹುದು.

ಅದೇ ರೀತಿ ಅನಕ್ಷರತೆ ಬಗ್ಗೆ ಯೋಜನೆ ಸಿದ್ಧಪಡಿಸಬಹುದು. ಅನಕ್ಷರಸ್ಥರನ್ನು ಸಂದರ್ಶಿಸಿ ಅದರಿಂದ ಅವರಿಗೆ ಉಂಟಾಗುತ್ತಿರುವ ಸಮಸ್ಯೆಗಳನ್ನು ಪಟ್ಟಿ ಮಾಡಬಹುದು. ಸಾಕ್ಷರತಾ ಶಾಲೆಗಳ ಪಾತ್ರದ ಬಗ್ಗೆ ಚರ್ಚೆ ಮಾಡಬಹುದು. ಅನಕ್ಷರತೆಗೂ ಮತ್ತು ಜಾತಿಗಳಿಗೂ ನಡುವೆ ಇರುವ ಸಂಬಂಧ ಕುರಿತಂತೆ ಚರ್ಚಿಸಬಹುದು. ಯಾಕೆ ಪರಿಶಿಷ್ಟ, ಜಾತಿ-ವರ್ಗಗಳಲ್ಲಿ ಅನಕ್ಷರತೆ ಹೆಚ್ಚಾಗಿರುತ್ತದೆ? ಮಹಿಳೆಯರಲ್ಲಿ ಅನಕ್ಷರತೆ ಅಧಿಕ ಯಾಕೆ? ಈ ಬಗ್ಗೆ ಕ್ಷೇತ್ರಕಾರ್ಯ ಕೈಗೊಳ್ಳಬಹುದು, ಮಾಹಿತಿ ಸಂಗ್ರಹಿಸಬಹುದು.

ಅದೇ ರೀತಿ ಕೋಮುವಾದದ ಬಗ್ಗೆ ಅಧ್ಯಯನ ಯೋಜನೆ ಕೈಗೊಳ್ಳಬಹುದು. ಕೋಮುವಾದವೆಂದರೇನು? ಜಾತೀಯತೆಗೂ ಮತ್ತು ಕೋಮುವಾದಗಳಿಗೂ ನಡುವೆ ವ್ಯತ್ಯಾಸವೇನು? ಇದು ಯಾಕೆ ಸಂಭವಿಸುತ್ತದೆ? ಅದರಿಂದ ಉಂಟಾಗುವ ಹಾನಿ ಏನು?

ಕೋಮು ಘರ್ಷಣೆಗಳಿಂದ ಬಡವರಿಗೆ, ಮಹಿಳೆಯರಿಗೆ ಉಂಟಾಗುವ ತೊಂದರೆಗಳೇನು? ಸಮಾಜದಲ್ಲಿ ಶಾಂತಿ-ಸೌಹಾರ್ದತೆಯ ಅಗತ್ಯವೇನು? ಕೋಮುವಾದದ ಬಗ್ಗೆ ಜನರ ಅಭಿಪ್ರಾಯವೇನು? ಈ ವಿಷಯ ಕುರಿತಂತೆ ಮಾಹಿತಿ ಸಂಗ್ರಹಿಸಬಹುದು.

ಭ್ರಷ್ಟಾಚಾರವು ನಮ್ಮ ಸಮಾಜದಲ್ಲಿ ವ್ಯಾಪಕವಾಗಿದೆ. ಅದು ಹೇಗೆ ಉಂಟಾಗುತ್ತದೆ? ಯಾವ ಯಾವ ಸಂಸ್ಥೆಗಳಲ್ಲಿ ಅದರ ಹಾವಳಿಯಿದೆ. ಈ ಬಗ್ಗೆ ವಿದ್ಯಾರ್ಥಿಗಳ ಅನುಭವವೇನು? ಲಂಚವಿಲ್ಲದೆ ಕಚೇರಿಗಳಲ್ಲಿ ಕೆಲಸ ಮಾಡಿಸಿಕೊಂಡು ಬರಬಹುದೆ? ಲಂಚ ತೆಗೆದುಕೊಳ್ಳುವುದು ಅನಿವಾರ್ಯವೆ? ಲಂಚ ತೆಗೆದುಕೊಂಡು ಕೆಲಸ ಮಾಡಿಕೊಟ್ಟರೆ ಅದನ್ನು ಸಹಿಸಿಕೊಳ್ಳಬಹುದೆ? ಲಂಚ ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮುಂತಾದವುಗಳನ್ನು ತಡೆಗಟ್ಟುವುದು ಹೇಗೆ?

ಹೀಗೆ ಅನೇಕ ವಿಷಯ ಕುರಿತಂತೆ ಅಧ್ಯಯನ ಯೋಜನೆ ಬಗ್ಗೆ ವಿದ್ಯಾರ್ಥಿಗಳು ಯೋಚಿಸಬಹುದು. ಈ ಬಗ್ಗೆ ಅಧ್ಯಾಪಕರ ನೆರವನ್ನು ವಿದ್ಯಾರ್ಥಿಗಳು ಪಡೆಯಬಹುದು. ಸ್ಥಳೀಯ ರಾಜಕೀಯ ವಿದ್ಯಮಾನಗಳ ಬಗ್ಗೆ ವಿದ್ಯಾರ್ಥಿಗಳು ಪತ್ರಿಕೆಗಳಿಗೆ ಲೇಖನಗಳನ್ನು ಬರೆಯಬಹುದು. ರಾಜಕೀಯ ಸಂಗತಿಗಳ ಬಗ್ಗೆ ಕಾಲೇಜಿನಲ್ಲಿ ಚರ್ಚೆ ಏರ್ಪಡಿಸಬಹುದು.

**ಸೂಚನೆ**

೧. ಅಧ್ಯಯನ ಯೋಜನೆ ಪ್ರಾಯೋಗಿಕ ಕಾರ್ಯ ಎಲ್ಲ ವಿದ್ಯಾರ್ಥಿಗಳಿಗೂ ಕಡ್ಡಾಯ.
೨. ಪ್ರತಿಯೊಬ್ಬ ವಿದ್ಯಾರ್ಥಿಯೂ ವಾರ್ಷಿಕ ಕನಿಷ್ಟ ಎರಡು ಯೋಜನಾ ವರದಿಗಳನ್ನು ಸಲ್ಲಿಸಲೇಬೇಕು.
೩. ಎರಡು ಯೋಜನೆಗಳಲ್ಲಿ ಒಂದು ವೈಯಕ್ತಿಕ ಯೋಜನೆಯಾಗಿರಬೇಕು. ಎರಡನೆಯದು ವೈಯಕ್ತಿಕ ಅಥವಾ ಸಮೂಹ ಯೋಜನೆಯಾಗಿರಬಹುದು.
೪. ಎರಡು ಅಧ್ಯಯನ ಯೋಜನಾ ವರದಿಗಳಿಗೆ ೧೦ ಅಂಕಗಳಿರುತ್ತವೆ.
೫. ಕೆಳಗೆ ನೀಡಿರುವ ನಮೂನೆಯಲ್ಲಿರುವ ಸೂಚನೆಯಂತೆ ಮೌಲ್ಯಮಾಪನ ನಡೆಯಬೇಕು.

**ಪ್ರಾಯೋಗಿಕ ಅಧ್ಯಯನ ಯೋಜನೆಗಳ ಮೌಲ್ಯಮಾಪನ ನಮೂನೆ**

| | | |
|---|---|---|
| ೧. ಅಧ್ಯಯನ ವರದಿಯ ವಿನ್ಯಾಸ, ಸೈದ್ಧಾಂತಿಕ ಚೌಕಟ್ಟು, ವೈಧಾನಿಕತೆ ಹಾಗೂ ಶೈಲಿ | ೨ | ಅಂಕಗಳು |
| ೨. ಮಾಹಿತಿ ಸಂಗ್ರಹಣೆ | ೨ | ಅಂಕಗಳು |
| ೩. ಸಂಗ್ರಹಿಸಿದ ಮಾಹಿತಿಯ ವಿಶ್ಲೇಷಣೆ | ೨ | ಅಂಕಗಳು |
| ೪. ಬರವಣಿಗೆ ಶೈಲಿ, ಭಾಷಾ ಬಳಕೆ, ಕೋಷ್ಟಕಗಳು, ನಕ್ಷೆ | ೨ | ಅಂಕಗಳು |
| ೫. ಅಧ್ಯಯನದ ಶೋಧನೆ, ಸಾರಾಂಶ | ೨ | ಅಂಕಗಳು |
| ಒಟ್ಟು | ೧೦ | ಅಂಕಗಳು |

## ಅಧ್ಯಯನ ವರದಿ ಸಿದ್ಧಪಡಿಸುವುದು

ಮೇಲೆ ತಿಳಿಸಿದ ಅಥವಾ ತಾವು ಆಯ್ಕೆ ಮಾಡಿಕೊಂಡ ವಿಷಯ ಕುರಿತಂತೆ ಅಧ್ಯಯನ ವರದಿ ಸಿದ್ಧಪಡಿಸಬೇಕಾದರೆ ಕೆಲವು ಸಂಗತಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಬರವಣಿಗೆಯು ಒಂದು ಕಲೆ. ಅದನ್ನು ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಲ್ಲಿ ರೂಢಿಸಿ ಕೊಳ್ಳಬೇಕಾಗುತ್ತದೆ.

ಸಾಮಾನ್ಯವಾಗಿ ಅಧ್ಯಯನ ವರದಿಯಲ್ಲಿ ಕೆಳಕಂಡ ಸಂಗತಿಗಳಿರಬೇಕು: ಮೊದಲನೆಯ ದಾಗಿ ಅಧ್ಯಯನ ಮಾಡುತ್ತಿರುವ ವಿಷಯ ಕುರಿತಂತೆ ಸೈದ್ಧಾಂತಿಕ ಸಂಗತಿಗಳನ್ನು ಚರ್ಚಿಸಬೇಕಾಗುತ್ತದೆ. ಅಧ್ಯಯನದಲ್ಲಿ ಪರಿಶೀಲಿಸಲಾಗುವ ಪ್ರಶ್ನೆಗಳನ್ನು ಗುರುತಿಸ ಬೇಕಾಗುತ್ತದೆ. ಅಧ್ಯಯನ ವಿಷಯವನ್ನು ಅಧ್ಯಯನ ಸಮಸ್ಯೆಯನ್ನಾಗಿ ಪರಿವರ್ತಿಸಿ ಕೊಳ್ಳಬೇಕಾಗುತ್ತದೆ. ಇದನ್ನು ಸಮಸ್ಯೀಕರಣವೆನ್ನುತ್ತಾರೆ.

ಎರಡನೆಯ ಭಾಗದಲ್ಲಿ ಅಧ್ಯಯನದ ಉದ್ದೇಶಗಳನ್ನು ಅನುಕ್ರಮವಾಗಿ ನೀಡ ಬೇಕಾಗುತ್ತದೆ. ಉದ್ದೇಶಗಳು ಅಧ್ಯಯನಕ್ಕೆ ಒಂದು ಚೌಕಟ್ಟನ್ನು ನೀಡುತ್ತವೆ. ಅಧ್ಯಯನ ಕ್ಕೊಂದು ದಿಶೆ ಪ್ರಾಪ್ತವಾಗುತ್ತದೆ.

ಮೂರನೆಯ ಭಾಗದಲ್ಲಿ ಅಧ್ಯಯನ ವಿಧಾನದ ವಿವರಗಳು ಬೇಕಾಗುತ್ತವೆ. ಯಾವ ಮೂಲಗಳಿಂದ ಮಾಹಿತಿ ಸಂಗ್ರಹಿಸಲಾಗಿದೆ, ಯಾರನ್ನು ಸಂದರ್ಶಿಸಲಾಗಿದೆ, ಮಾಹಿತಿಯನ್ನು ಯಾವ ರೂಪದಲ್ಲಿ ಅಣಿಗೊಳಿಸಲಾಗಿದೆ ಮುಂತಾದ ಸಂಗತಿಗಳು ಮೂರನೆಯ ಭಾಗದಲ್ಲಿರಬೇಕು.

ನಾಲ್ಕನೆಯದು ಮಹತ್ವದ ಭಾಗ. ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯ ವಿಶ್ಲೇಷಣೆ ಇಲ್ಲಿರುತ್ತದೆ. ಈ ವಿಶ್ಲೇಷಣೆ ಚರ್ಚೆಯ ಆಧಾರದ ಮೇಲೆ ಅಧ್ಯಯನದಿಂದ ಕಂಡುಕೊಂಡ ಸಂಗತಿಗಳನ್ನು ಗುರುತಿಸಬಹುದಾಗಿದೆ.

ಕೊನೆಯ ಭಾಗದಲ್ಲಿ ಅಧ್ಯಯನದ ಸಾರಾಂಶ ನೀಡಬೇಕು. ಅಧ್ಯಯನದಿಂದ ಹೊಸದಾಗಿ ಕಂಡುಹಿಡಿದ ಸಂಗತಿಗಳಾವುವು ಎಂಬುದನ್ನು ತಿಳಿಸಬೇಕು.

ಅಧ್ಯಯನದ ವರದಿಯು ೨೫ ರಿಂದ ೩೦ ಪುಟಗಳಿದ್ದರೆ ಸಾಕು.

## ಅನುಬಂಧ ೪

# ಮಾದರಿ ಪ್ರಶ್ನೆ ಪತ್ರಿಕೆ

### ಪಿಯುಸಿ ಎರಡನೆಯ ವರ್ಷ
### ರಾಜಕೀಯ ಚಿಂತಕರು, ಪ್ರವೃತ್ತಿ ಮತ್ತು ಪ್ರಕ್ರಿಯೆಗಳು

**ಅ. ಒಂದು ವಾಕ್ಯದಲ್ಲಿ ಉತ್ತರಿಸಿ. ಎಲ್ಲ ಪ್ರಶ್ನೆಗಳಿಗೂ ಉತ್ತರಿಸಿ** **೧೦x೧=೧೦**

೧. ಸಮತಾವಾದದ (ಕಮ್ಯೂನಿಸಮ್) ಪಿತಾಮಹ ಯಾರು?

೨. ಸುಖೀ (ಕಲ್ಯಾಣ) ರಾಜ್ಯದ ಅರ್ಥ ಕೊಡಿ

೩. ಪ್ರತ್ಯಕ್ಷ ಚುನಾವಣೆ ಎಂದರೇನು?

೪. ಭಾರತೀಯ ಸಂವಿಧಾನದಲ್ಲಿ ಗಾಂಧೀಜಿ ವಿಚಾರಗಳನ್ನು ಪ್ರತಿಬಿಂಬಿಸುವ ಪರಿಚ್ಛೇದವನ್ನು ಗುರುತಿಸಿ.

೫. ಸಾರ್ವಜನಿಕ ಅಭಿಪ್ರಾಯದ ನಿರ್ವಚನ ನೀಡಿ.

೬. ಒತ್ತಡ ಗುಂಪುಗಳ ಅರ್ಥ ವಿವರಿಸಿ.

೭. ಕೆ.ಪಿ.ಎಸ್.ಸಿ.ಯ ವಿಸ್ತೃತ ರೂಪ ಬರೆಯಿರಿ.

೮. ಅಲಿಪ್ತ ನೀತಿಯ ಅರ್ಥ ಬರೆಯಿರಿ.

೯. ಕೋಮುವಾದ ಎಂದರೇನು?

೧೦. ವಿಶ್ವಸಂಸ್ಥೆಯು ಅಸ್ತಿತ್ವಕ್ಕೆ ಬಂದ ವರ್ಷ ಯಾವುದು?

**ಆ. ಕೆಳಗಿನವುಗಳಲ್ಲಿ ೧೦ ಕ್ಕೆ ಉತ್ತರಿಸಿ. ಉತ್ತರವು ೨ ರಿಂದ ೩ ವಾಕ್ಯಗಳಲ್ಲಿರಲಿ** **೧೦x೨=೨೦**

೧೧. ಎರಡು ಮಾನವ ಹಕ್ಕುಗಳನ್ನು ಬರೆಯಿರಿ.

೧೨. ಎಸ್.ಎ.ಎ.ಆರ್.ಸಿ(ಸಾರ್ಕ್)ನ ಸದಸ್ಯ ರಾಷ್ಟ್ರಗಳು ಯಾವುವು?

೧೩. ವಯಸ್ಕ ಮತದಾನದ ಅರ್ಥ ನೀಡಿ.

೧೪. ಪ್ರಸ್ತುತ ಭಾರತದ ಚುನಾವಣಾ ಪದ್ಧತಿಯ ಸುಧಾರಣೆಗೆ ಎರಡು ಪರಿಹಾರಗಳನ್ನು ಸೂಚಿಸಿ.

೧೫. ಪ್ರಸ್ತುತ ಭಾರತದಲ್ಲಿ ಕ್ರಿಯಾಶೀಲವಾಗಿರುವ ಎರಡು ಒತ್ತಡ ಗುಂಪು (ಹಿತಾಸಕ್ತ ಗುಂಪು)ಗಳ ವಿಧಗಳನ್ನು ಹೆಸರಿಸಿ.

೧೬. ಅಖಿಲ ಭಾರತ ಸೇವೆ ಎಂದರೇನು? ಒಂದು ಉದಾಹರಣೆ ನೀಡಿ.

೧೭. ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ಕ್ರಿಯಾಶೀಲವಾಗಿರುವ ಎರಡು ನಿಯೋಗಿಗಳ ಹೆಸರನ್ನು ಬರೆಯಿರಿ.

೧೮. ಯು.ಪಿ.ಎಸ್.ಸಿ. ಯ ಕಾರ್ಯಗಳನ್ನು ವಿವರಿಸಿ.

೧೯. ನಾಗರಿಕ ಸೇವೆಗೆ ನೇಮಕಾತಿ ಭಾರತದಲ್ಲಿ ಹೇಗೆ ನಡೆಯುತ್ತದೆ?

೨೦. ರಾಜಕೀಯ ಪಕ್ಷದ ಅರ್ಥ ನೀಡಿ.

೨೧. ದೇಶದ ಪ್ರಜಾಪ್ರಭುತ್ವದ ಮೇಲೆ ಅನಕ್ಷರತೆಯ ಪರಿಣಾಮವನ್ನು ವಿವರಿಸಿ.

೨೨. ಪಂಚಶೀಲದ ತತ್ವಗಳನ್ನು ವಿವರಿಸಿ.

**ಇ. ಕೆಳಗಿನವುಗಳಲ್ಲಿ ಎಂಟು ಪ್ರಶ್ನೆಗಳನ್ನು ಉತ್ತರಿಸಿ. ಪ್ರತಿಯೊಂದಕ್ಕೂ ೫ ರಿಂದ ೧೦ ವಾಕ್ಯಗಳಲ್ಲಿ ಉತ್ತರಿಸಿ. ೮x೫=೪೦**

೨೩. ಪ್ಲೇಟೋನ ಆದರ್ಶ ರಾಜ್ಯದ ಮೂಲತತ್ವಗಳು ಯಾವುವು?

೨೪. ಗಾಂಧೀವಾದದ ಪ್ರಸ್ತುತತೆ ಏನು?

೨೫. ಕಾರ್ಲ್‌ಮಾರ್ಕ್ಸ್‌ನ ಅಧಿಕ ಮೌಲ್ಯ ಸಿದ್ಧಾಂತವನ್ನು ವಿವರಿಸಿ.

೨೬. ಅರಿಸ್ಟಾಟಲ್ ಪ್ರಕಾರ ಅತ್ಯುತ್ತಮ ಅನುಷ್ಠಾನ ಯೋಗ್ಯ ರಾಜ್ಯ ಯಾವುದು?

೨೭. ಕೌಟಿಲ್ಯನ ಸಪ್ತಾಂಗ ಸಿದ್ಧಾಂತವನ್ನು ವಿವರಿಸಿ.

೨೮. ಭಾರತದ ಚುನಾವಣಾ ಆಯೋಗದ ಯಾವುದಾದರೂ ಮೂರು ಕಾರ್ಯಗಳನ್ನು ವಿವರಿಸಿ.

೨೯. ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ವಿದ್ಯುನ್ಮಾನ ಮಾಧ್ಯಮದ ಪಾತ್ರವನ್ನು ವಿವರಿಸಿ.

೩೦. ಮತದಾನವು ಕೇವಲ ಹಕ್ಕು ಮಾತ್ರವಲ್ಲ ಅದು ಕರ್ತವ್ಯ. ವಿಮರ್ಶೆ ಮಾಡಿ.

೩೧. ಭಾರತೀಯ ಪ್ರಜಾಪ್ರಭುತ್ವಕ್ಕೆ ಕೋಮುವಾದವು ಹೇಗೆ ಗಂಡಾಂತರಕಾರಿ ಎಂಬುದನ್ನು ಚರ್ಚಿಸಿ.

೩೨. ಭಾರತದಲ್ಲಿ ಕಂಡುಬರುವ ನಾಲ್ಕು ಬಗೆಯ ಹಿಂಸೆಗಳನ್ನು ವಿವರಿಸಿ.

೩೩. ಭಾರತದ ವಿದೇಶಾಂಗ ನೀತಿಯನ್ನು ನಿರ್ಧರಿಸುವ ನಾಲ್ಕು ಸಂಗತಿಗಳನ್ನು ವಿವರಿಸಿ.

೩೪. ವಿಶ್ವಸಂಸ್ಥೆಯ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿ.

**ಈ. ಕೆಳಗಿನವುಗಳಲ್ಲಿ ಎರಡಕ್ಕೆ ಉತ್ತರಿಸಿ ಪ್ರತಿಯೊಂದು ಪ್ರಶ್ನೆಗೆ ೩೦ ರಿಂದ ೪೦ ವಾಕ್ಯಗಳಲ್ಲಿ ಉತ್ತರ ಬರೆಯಿರಿ. ೨x೧೦=೨೦**

೩೫. ಅಂಬೇಡ್ಕರ್ ಅವರ ಸಾಮಾಜಿಕ ನ್ಯಾಯ ಸಿದ್ಧಾಂತವನ್ನು ವಿವರಿಸಿ.

೩೬. ಜೆ.ಎಸ್.ಮಿಲ್ ಅವರು ಸ್ವಾತಂತ್ರ್ಯಕ್ಕೆ ನೀಡಿದ ಕೊಡುಗೆಯನ್ನು ನಿರೂಪಿಸಿ.

೩೭. ಸಮಕಾಲೀನ ಭಾರತೀಯ ರಾಜಕಾರಣದಲ್ಲಿ ಜಾತಿಯ ಪಾತ್ರವನ್ನು ಚರ್ಚಿಸಿ. ಭಾರತೀಯ ರಾಜಕೀಯ ವ್ಯವಸ್ಥೆಯ ಮೇಲೆ ಅದರ ಪರಿಣಾಮಗಳನ್ನು ವಿವರಿಸಿ.

೩೮. 'ವಿದೇಶಾಂಗ ನೀತಿ' ಎಂದರೇನು? ಭಾರತದ ವಿದೇಶಾಂಗ ನೀತಿಯ ಮೂಲಭೂತ ತತ್ವಗಳನ್ನು ಚರ್ಚಿಸಿ.

ಅನುಬಂಧ ೫

# ಪ್ರಶ್ನೆ ಪತ್ರಿಕೆ ನೀಲಿನಕಾಶೆ

## ಪಿಯುಸಿ ಎರಡನೆಯ ವರ್ಷ

## ರಾಜಕೀಯ ಚಿಂತಕರು, ಪ್ರವೃತ್ತಿ ಮತ್ತು ಪ್ರಕ್ರಿಯೆಗಳು

| ಕ್ರ. ಸಂ. | ಅಧ್ಯಾಯಗಳು | ಬೋಧನಾ ಅವಧಿ | ನಿಗದಿ ಪಡಿಸಿದ | ಜ್ಞಾನಾರ್ಜನೆ ಶೇ.೪೦ | | | | ಅರ್ಥಗ್ರಹಣ ಶೇ. ೩೦ | | | | ಅನ್ವಯಿಕತೆ ಶೇ. ೨೦ | | | | ಕುಶಲತೆ ಶೇ. ೧೦ | | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|---|---|
| | | ಗಂಟೆಗಳು | ಅಂಕಗಳು | ೧ | ೨ | ೫ | ೧೦ | ೧ | ೨ | ೫ | ೧೦ | ೧ | ೨ | ೫ | ೧೦ | ೧ | ೨ | ೫ | ೧೦ | |
| ೧. | ಪ್ರಮುಖ ರಾಜಕೀಯ ಚಿಂತಕರು. ಭಾಗ-೧ | ೧೫ | ೨೦ | | | ೧ | ೧ | | | ೧ | | | | | | | | | | ೨೦ |
| ೨. | ಪ್ರಮುಖ ರಾಜಕೀಯ ಚಿಂತಕರು. ಭಾಗ-೨ | ೧೬ | ೨೧ | ೧ | | ೧ | | | | | ೧ | | | ೧ | | | | | | ೨೧ |
| ೩. | ಸಮಕಾಲೀನ ರಾಜಕೀಯ ವಿದ್ಯಮಾನಗಳು | ೦೭ | ೧೦ | | ೧ | | | ೧ | ೧ | ೧ | | | | | | | | | | ೧೦ |
| ೪. | ಭಾರತದಲ್ಲಿ ಚುನಾವಣಾ ಪದ್ಧತಿ | ೦೭ | ೧೦ | ೧ | ೧ | | | | | ೧ | | | ೧ | | | | | | | ೧೦ |
| ೫. | ಭಾರತದಲ್ಲಿ ರಾಜಕೀಯ ಪಕ್ಷ ಪದ್ಧತಿ | ೧೦ | ೧೩ | ೧ | | | ೧ | | | | | | | | | | ೧ | | | ೧೩ |

| | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|
| ೬. | ಭಾರತದಲ್ಲಿ ಸಾರ್ವಜನಿಕ ಅಭಿಪ್ರಾಯ ಮತ್ತು ಒತ್ತಡ ಗುಂಪುಗಳು | ೦೯ | ೧೨ | ೧ | ೧ | | | | | ೧ | | ೧ | ೧ | | | ೧ | | | | ೧೨ |
| ೭. | ಭಾರತದಲ್ಲಿ ಆಡಳಿತ ಯಂತ್ರ | ೧೦ | ೧೩ | ೧ | ೧ | | | | ೧ | ೧ | | ೧ | ೧ | | | | | | | ೧೩ |
| ೮. | ಭಾರತದ ಪ್ರಜಾಪ್ರಭುತ್ವದ ಮೂಲ ಸವಾಲುಗಳು | ೧೬ | ೨೨ | | | ೨ | | | | | | | ೧ | | | | | | ೧ | ೨೨ |
| ೯. | ಭಾರತ ಮತ್ತು ವಿಶ್ವ | ೧೦ | ೧೩ | ೧ | | | | | | | | | ೧ | ೨ | | | | | | ೧೩ |
| | ಒಟ್ಟು | ೧೦೦ | ೧೩೪ | ೬ | ೮ | ೨೦ | ೨೦ | ೧ | ೪ | ೨೫ | ೧೦ | ೨ | ೧೦ | ೧೫ | - | ೧ | ೨ | - | ೧೦ | ೧೩೪ |
| | | | | ೫೪ | | | | ೪೦ | | | | ೨೭ | | | | ೧೩ | | | | |

ಟಿಪ್ಪಣಿ : ೧. ತೂಕ : ಒಟ್ಟು ಅಂಕಗಳು /ಬೋಧನಾ ಅವಧಿ. ೧೩೪/೧೦೦=೧.೩೪ (ಅಂದರೆ ಒಂದು ಗಂಟೆ ಬೋಧನಾವಧಿಗೆ ೧.೩೪ ಅಂಕಗಳು)

೨. ಆಯ್ಕೆ : ಕೊಟ್ಟಿರುವ ೩೮ ಪ್ರಶ್ನೆಗಳಲ್ಲಿ ಕೇವಲ ೩೦ ಪ್ರಶ್ನೆಗಳಿಗೆ ಉತ್ತರಿಸಬೇಕು.

# ಲೇಖಕರ ವಿಳಾಸ

೧. ಡಾ. ಜೆ.ಎಸ್. ಸದಾನಂದ, ಅಧ್ಯಕ್ಷರು ಹಾಗೂ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ - ೫೭೭ ೪೫೧, ಶಿವಮೊಗ್ಗ ಜಿಲ್ಲೆ.

೨. ಡಾ. ಕೆ.ಎಂ. ಕುಮಾರ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ನ್ಯಾಮತಿ

೩. ಕು. ಪಿ.ಎನ್. ಕವಿತಾ, ರಾಜ್ಯಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ - ೫೭೭ ೪೫೧, ಶಿವಮೊಗ್ಗ ಜಿಲ್ಲೆ.

೪. ಶ್ರೀ ಎ. ಷಣ್ಮುಖ, ರಾಜ್ಯಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ, ಶಂಕರಘಟ್ಟ - ೫೭೭ ೪೫೧, ಶಿವಮೊಗ್ಗ ಜಿಲ್ಲೆ.

ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಸಿದ್ಧಪಡಿಸಿರುವ ಪದವಿಪೂರ್ವ ಶಿಕ್ಷಣದ ಎರಡನೇ ವರ್ಷದ ರಾಜ್ಯಶಾಸ್ತ್ರ ಪಠ್ಯವನ್ನು ತಮ್ಮ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಈಗ ಜಾರಿಗೆ ಬಂದಿರುವ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಇದನ್ನು ಸಿದ್ಧಪಡಿಸಲಾಗಿದೆ. ಈ ಪಠ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಪಾಲುದಾರರಾಗಿದ್ದಾರೆ.

ಈ ಪಠ್ಯವು ನಾಡಿನ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆ ಎಂದು ನಾವು ಭಾವಿಸಿದ್ದೇವೆ. ಈ ಪಠ್ಯವನ್ನು ಒಪಯೋಗಿಸುವ ಸಹೃದಯಿಗಳು ಪಠ್ಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಂದ್ರಕ್ಕೆ ಬರೆದು ತಿಳಿಸಿದರೆ ತುಂಬಾ ಉಪಯುಕ್ತವಾಗುತ್ತದೆ. ಮುಂದಿನ ಆವೃತ್ತಿಗಳಲ್ಲಿ ಪಠ್ಯದ ಗುಣಮಟ್ಟವನ್ನು ಇನ್ನೂ ಹೆಚ್ಚು ಉತ್ತಮ ಪಡಿಸಬಹುದು.

ನಾವು ಪ್ರಕಟಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಮನ್ನಣೆ ನೀಡಿ ನಮ್ಮ ಪ್ರಯತ್ನದಲ್ಲಿ ಕೈ ಜೋಡಿಸಿದೆ. ಕರ್ನಾಟಕದ ವಿದ್ಯಾರ್ಥಿ ಬಳಗಕ್ಕೆ ಕನ್ನಡದಲ್ಲಿ ಜ್ಞಾನವು ಉತ್ತಮ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಈ ದಿಸೆಯಲ್ಲಿ ನಮ್ಮ ಪ್ರಯತ್ನ ನಡೆದಿದೆ. ಇದಕ್ಕೆ ತಮ್ಮ ಆಶೀರ್ವಾದವಿದೆಯೆಂದು ನಾವು ಭಾವಿಸಿದ್ದೇವೆ.

ರೂ. ೧೦೦/-